# ಅಂತರಂಗ ಸರಿದಮೇಲೆ

ಶ್ರೀಮತಿ ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ
16 ನೇ ಮೆಯಿನ್, ಕಾಮಾಕ್ಷಿ ಆಸ್ಪತ್ರೆ ರಸ್ತೆ,
ಸರಸ್ವತಿಪುರಂ, ಮೈಸೂರು 570009

ANTARPATA SARIDAMELE- A social novel by Smt **Padma Sreedhar**, 1248, HIG, 7th B Cross, KHB Colony, New Town, Yalahanka, Bangalore 560064, (Ph. 28565466) and published by M/S MANJUSHREE PRAKASHANA, 16th Main, Behind Kuvempu High School, Kamakshi Hospital Road, Saraswathipuram, Mysore 570009. Pp 224. Printed on maplitho paper

**First publication: 2005.**
**ISBN-81-86675-52-3**



Price: **Rs.175/-**

D. T. P: KUM. M V LATHA, and Smt GOWRI
KANIVE COMPUTERS, MYSORE-9

Impression at: Tara Offset Printers, MYSORE

# ಮುನ್ನುಡಿ

ನಲುಮೆಯ ಓದುಗರಿಗೆ ನಮಸ್ಕಾರಗಳು. 'ಅಂತರಪಟ ಸರಿದಮೇಲೆ' ಎಂಬ ಹೆಸರಿನ ಕಾದಂಬರಿಯನ್ನು ಇದೀಗ ತಮ್ಮ ಮುಂದೆ ಇಡುತ್ತಿದ್ದೇನೆ. ಇದು ಒಂದು ಸಾಮಾಜಿಕ ಕಾದಂಬರಿ. ಮದುವೆಗಿರುವ ಒಬ್ಬ ವರನನ್ನು ಮುಖ್ಯ ಪಾತ್ರವನ್ನಾಗಿಟ್ಟು ಕೊಂಡು, ಅವನ ಸುತ್ತ, ಹಿಂದೆ ಮುಂದೆ ನಡೆದ ಸನ್ನಿವೇಶಗಳು, ಮಾತುಕತೆಗಳು, ಪ್ರಕರಣಗಳನ್ನು ಸೇರಿಸಿಕೊಂಡು ಈ ಕಾದಂಬರಿಯನ್ನು ರಚಿಸಿದ್ದೇನೆ.

ಕಥಾವಸ್ತು, ಪಾತ್ರಗಳು, ಸನ್ನಿವೇಶಗಳು ಎಲ್ಲಾ ಕಾಲ್ಪನಿಕ. ನನ್ನ ಮನದ ಅಂಗಳದಲ್ಲಿ, ಕಲ್ಪನೆಯ ರೂಪದಲ್ಲಿ, ಪಾತ್ರಗಳನ್ನು ಸೃಷ್ಟಿಸಿ, ಒಂದು ಕೌಟುಂಬಿಕ ಚೌಕಟ್ಟಿನಲ್ಲಿ ನಿಲ್ಲಿಸಿ, ಈ ಕಾದಂಬರಿಯನ್ನು ರಚಿಸಿದ್ದೇನೆ. ಮಧ್ಯಮ ವರ್ಗದ ಕುಟುಂಬ ದವರ, ದಿನ ನಿತ್ಯದ ಆಡು ಮಾತುಗಳನ್ನೂ ಅಳವಡಿಸಿಕೊಂಡಿದ್ದೇನೆ. ಇದು ಓದುಗರನ್ನು ಮೆಚ್ಚಿಸುತ್ತದೆ ಎಂಬ ನಂಬಿಕೆ ನನಗಿದೆ.

ಹಸ್ತಪ್ರತಿಯನ್ನು ಸುಂದರವಾಗಿ ಪ್ರಕಟಿಸಿ, ಪುಸ್ತಕ ರೂಪದಲ್ಲಿ ಹೊರತರು ತ್ತಿರುವ ಕಣಿವೆ ಪ್ರಕಾಶನದ ಬಳಗದವರಿಗೆಲ್ಲ ನನ್ನ ಹೃತ್ಪೂರ್ವಕ ವಂದನೆಗಳು. ಮುಖ ಪುಟವನ್ನು ಚಿತ್ರಿಸಿಕೊಟ್ಟ ಕಲಾವಿದರಿಗೆ ಕೃತಜ್ಞತೆಗಳು.

ವಂದನೆಗಳೊಂದಿಗೆ,

ಇತಿ ತಮ್ಮ ವಿಶ್ವಾಸಿ,

*ಪದ್ಮಾ ಶ್ರೀಧರ್*

ಬೆಂಗಳೂರು ೬೪

'ಭಾನು ಬಿದಿಗೆ'
ಪಾರ್ಥೀವ ನಾಮ ಸಂವತ್ಸರ
೧೦.೪.೨೦೦೫

# ಅರ್ಪಣೆ

ತಮ್ಮದೇ ಆದ ಭಿನ್ನ ಶೈಲಿಯಲ್ಲಿ
ರಮ್ಯವಾದ ಕತೆ ಕಾದಂಬರಿಗಳನ್ನು ರಚಿಸಿ,
**ಮನಚೆನ್ನ**
ರಾಗಿದ್ದ
ದಿ. ಎಂ.ವಿ. ವೆಂಕಟನಾರಾಯಣ
ನನ್ನ ಚಿಕ್ಕಪ್ಪ
ರವರಿಗೆ
ಈ ಕೃತಿಯನ್ನು ಶ್ರದ್ಧಾಪೂರ್ವಕವಾಗಿ
ಅರ್ಪಿಸುತ್ತೇನೆ.

*ಪದ್ಮಾ ಶ್ರೀಧರ್*

# ಅಂತರಪಟ ಸರಿದ ಮೇಲೆ

"ಸೋಮು.. ಸೋಮು...... ಏಳಪ್ಪಾ..... ಏಳೋ. ಅಲಾರಾಂ ಹೊಡೆದು ಅರ್ಧಗಂಟೆಯಾಯ್ತು... ಇನ್ನೂ ಮುಸುಕು ಜೀರಿ ಮಲಗಿದೀಯಲ್ಲ....?" ಶಾಂತ ಮಗನನ್ನು ಎಬ್ಬಿಸಿದಳು.

"ಹೂಂ..ನಮ್ಮ... ಎದ್ದೆ..... ಇನ್ನು ಐದು ನಿಮಿಷ......." ಮುಸುಕಿನೊಳಗಿನಿಂದಲೇ ಉತ್ತರಿಸಿದ ಸೋಮ.

"ಐದ್ನಿಮಿಷ...... ಐದ್ನಿಮಿಷ ಅಂತ ಹೇಳ್ತಾನೇ ಇದೀಯ..... ಅರ್ಧಗಂಟೆಯಿಂದ. ಈ ಪಕ್ಷಕ್ಕೆ ಅಲಾರಾಂ ಯಾಕೆ ಇಟ್ಕೊಳ್ತೀಯೋ......?" ಶಾಂತ ರೇಗಿದಾಗ, ರಾಮಸ್ವಾಮಿ ಹೆಂಡತಿಗೆ ಹೇಳಿದ.

"ಸುಮ್ನೆ ಎಷ್ಟು ಮಾತನಾಡ್ತೀಯ. ಏಳ್ತಾನೆ ಬಿಡು. ಅದೆಷ್ಟು ಎಬ್ಬಿಸೋದು.....?"

"ಎಬ್ಬಿಸದಿದ್ದರೆ ಅವನು ಬೈತಾನೆ, ಮಾತ್ನಾಡಿದರೆ ನೀವು ಬೈತೀರಿ. ಒಂದು ಕೋಲು ತಗೊಂಡು ತಿವಿಯಬೇಕು ಅಷ್ಟೆ......"

ರಾಮಸ್ವಾಮಿ ನಕ್ಕ, "ಯಾರನ್ನ ನನ್ನನ್ನೋ ಅವನನ್ನೋ.......?"

"ಅವನನ್ನ....... ನಿಮ್ಮನ್ಯಾಕೆ ತಿವಿದು ಎಬ್ಬಿಸಲಿ? ಬೇಗ ಏಳ್ಬೇಡಿ ಅಂದ್ರೂ ಕೇಳಲ್ಲ. ಕಾಗೆ ಕಾ...... ಎಂದ ಕೂಡಲೇ ಎದ್ದು ಕೂರ್ತೀರಿ."

"ನನಗೆ ಅದೇ ಅಲಾರಾಂ."

"ಎದ್ದು ಸುಮ್ಮನೇ ಹೋಗ್ತೀರಾ? ಅದಿಲ್ಲ... ಅದೇನು ಸದ್ದು. ಅದೇನು ಗಲಾಟೆ. ಹಲ್ಲುಜ್ಜಿಕೊಳ್ಳೋದೂ ಸಹ ಪರಪರ ಅಂತ ಕೇಳುತ್ತೆ. ಓಡಾಟವೋ, ಭೂಮಿಯೇ ಅದರುತ್ತೆ. ಅಬ್ಬಬ್ಬಾ ನೀವು ಎದ್ದು ಬಿಟ್ಟರಾಯ್ತು. ನನ್ನ ನಿದ್ದೆ ಮುಗೀತು."

"ಬೆಳಗಾದ್ರೂ ಅದೆಂತಹ ನಿದ್ದೆ. ನೀನೇ ಹೇಳು. ನನ್ನ ಪಾಡಿಗೆ ನಾನು ನನ್ನ ಬೆಳಗಿನ ಕೆಲಸಗಳನ್ನು ಮಾಡಿಕೊಳ್ತೀವಿ. ಫಸ್ಟ್ ಕ್ಲಾಸ್ ಸ್ಟ್ರಾಂಗ್ ಕಾಫಿ ಮಾಡಿಟ್ಟಿರುತ್ತೀನಲ್ಲ. ಇನ್ನೇನು ಬೇಕು?"

"ವಾಕಿಂಗ್ ಹೋಗೋ ಮೊದಲು, ದಢಾರ್ ಅಂತ ಬಾಗಿಲು ಹಾಕೋದು, ಬಂದ ಮೇಲೆ ದಢಾರ್ ಅಂತ ಬಾಗಿಲು ತೆಗೆಯೋದು, ಮಲಗಿರೋರಿಗೆ ಯಾಕಪ್ಪಾ ಮಲಗಿದೀವಿ ಅಂತನ್ನಿಸುತ್ತಿರುತ್ತೆ...."

"ಅದಕ್ಕೆ ಹೇಳೋದು. ನೀನೂ ಎದ್ದು ನನ್ನ ಜತೆ ವಾಕಿಂಗ್ ಬಾ. ಎಷ್ಟೋ ಹಿತವಾಗಿರುತ್ತೆ. ಗೊತ್ತಾ?"

"ಆ ವಾಕಿಂಗ್ ಎಲ್ಲಾ ನಿಮಗೇ ಇರಲಿ.... ನನಗೆ ಮನೇಲೆ ಸಾಕಷ್ಟು ವಾಕಿಂಗ್ ಆಗುತ್ತೆ."

"ಅಪ್ಪಾ ..... ಪ್ಲೀಸ್....." ಸೋಮ ಒಳಗಿನಿಂದ ಕೂಗಿದ.

"ಮೆಲ್ಲಗೆ ಮಾತ್ನಾಡೇ.... ನನ್ನ ಮಗ ಬೈತಾನೆ."

"ಜೋರಾಗಿ ಮಾತ್ನಾಡ್ತಿರೋರು ನೀವು...... ಇನ್ನಾದ್ರೂ ಏಳ್ತೀಯೇನೋ ಸೋಮು...... ಏಳುಗಂಟೆ ಆಗ್ತಾ ಬಂತು."

"ಮಲಕ್ಕೊಳ್ಳೋಕೆ ಎಲ್ಲಿ ಬಿಡ್ತೀರಿ ನೀವು.... ನೀವಿಬ್ರೂ ಮಾತ್ನಾಡೋದು ತಮಟೆ ಹೊಡೆದ ಹಾಗೆ ಕೇಳಿಸುತ್ತೆ," ಎಂದು ಗೊಣಗುತ್ತಾ ಸೋಮ ಎದ್ದು ಬಂದ. ಶಾಂತ ಗಂಡನನ್ನು ದುರುದುರು ನೋಡುತ್ತಾ ಅಡಿಗೆ ಮನೆ ಕಡೆ ನಡೆದಳು.

"ನಿನ್ನ ಮಗನಿಗೆ ಕಾಫಿ ಕೊಡೋವಾಗ, ನನಗೂ ಒಂದು ಲೋಟ...." ರಾಮಸ್ವಾಮಿ ಕುಳಿತಲ್ಲಿಂದಲೇ ಕೂಗು ಹಾಕಿದ.

"ಈಗಾಗ್ಲೇ ಮೂರು ಸಲ ಆಯ್ತು. ಬೆಳಗಾದ್ರೆ ಸಾಕು. ಮಧ್ಯಾಹ್ನ ಊಟದ ತನಕ ಈ ಕಾಫಿ ಸಮಾರಾಧನೆ ಮುಗಿಯೋದೇ ಇಲ್ಲ."

"ಆಯ್ತೇನೊ ಸೋಮು.... ಕಾಫಿ ಆರಿ ಹೋಗುತ್ತೆ. ಬೇಗ ಬಾ..." ಶಾಂತ ಅಡಿಗೆ ಮನೆಯಿಂದಲೇ ಕೂಗು ಹಾಕಿದಳು.

"ಅದ್ಯಾಕೆ ಇಬ್ಬರೂ ಇಷ್ಟು ಜೋರು ಜೋರಾಗಿ ಮಾತ್ನಾಡ್ತೀರಿ? ಅಕ್ಕ ಪಕ್ಕದ ಮನೆಯವರಿಗೆಲ್ಲ ಸುಪ್ರಭಾತ," ಸೋಮು ನುಡಿದ.

"ಈಚೆಗೆ ನಿಮ್ಮಮ್ಮನಿಗೆ ಸ್ವಲ್ಪ ಕಿವುಡಾಗ್ತಿದೆ. ಮೆತ್ತಗೆ ಮಾತ್ನಾಡಿದ್ರೇ ಅವಳಿಗೆ ಕೇಳಿಸೋದಿಲ್ಲ..."

"ಕಿವುಡು....... ನಿಮಗೆ...... ನನಗಲ್ಲ......." ಎನ್ನುತ್ತಾ ಶಾಂತ ಅಡಿಗೆ ಮನೆಯಿಂದ ಹೊರಬಂದಾಗ, ಸೋಮು ಎದ್ದು ನಿಂತ.

"ಮತ್ತೆ ಶುರು ಮಾಡಿದ್ರಲ್ಲ.. ಮುದ್ದಣ ಮನೋರಮೆಯರ ಸಲ್ಲಾಪಾನಾ.."

"ಸಲ್ಲಾಪವೂ ಅಲ್ಲ, ಸರಸವೂ ಅಲ್ಲ. ನಿಮ್ಮಪ್ಪನಿಗೆ ಹೊತ್ತು ಹೋಗುಲ್ಲ. ಏನಾದ್ರೊಂದು ಆಡ್ತಾನೇ ಇರ್ತಾರೆ. ನಿನಗೆ ಹೊತ್ತಾಗುತ್ತೆ. ಬೇಗ ಬೇಗ ಸ್ನಾನ ಗೀನ ಮುಗಿಸಿ ರೆಡಿಯಾಗು....... ತಿಂಡಿ ಮಾಡಿದೀನಿ."

"ಏನು ತಿಂಡಿ?"

"ನಿನಗೆ ಸುಲಭವಾಗಿ ತಿನ್ನೋಕೆ ಆಗುವಂಥಾದ್ದು. ಇನ್ನೇನು ಬರುತ್ತೆ ಇವಳಿಗೆ?"

"ಅಪ್ಪಾ.. ನೀವು ಸ್ವಲ್ಪ ಸುಮ್ಮನಿರ್ತೀರಾ? ಇದು, ನನ್ನ ಅಮ್ಮನ ವಿಷಯ........." ಅವನು ಬಚ್ಚಲು ಮನೆಯ ಕಡೆ ನಡೆದ.

"ಹಾಗೆ ಹೇಳು ಇವರಿಗೆ......" ಶಾಂತ ವಟಗುಟ್ಟಿದಳು.

"ಏನು ತಿಂಡಿ ಅಂತ ಹೇಳಲೇ ಇಲ್ಲವಲ್ಲ......?" ರಾಮಸ್ವಾಮಿ ಮತ್ತೆ ಕೆಣಕಿದ.

"ನಂಗೇನು ಬರುತ್ತೆ ಅಂತ ಈಗ್ತಾನೇ ಹೇಳಿದ್ರಲ್ಲ. ನಿಮಗೆ ಸೇರದಿದ್ದರೆ, ಎದುರಿಗೆ ಇರೋ ಹೋಟೆಲಿನಲ್ಲಿ ಹೋಗಿ ತಿಂಡಿ ತಿನ್ನಿ," ಶಾಂತ ವ್ಯಂಗ್ಯವಾಗಿ ನುಡಿದರೂ ರಾಮಸ್ವಾಮಿ ಕೋಪಿಸಿಕೊಳ್ಳಲಿಲ್ಲ.

ರಾಮಸ್ವಾಮಿಗೆ ಕೋಪ ಕಡಿಮೆ ಇಲ್ಲದಿದ್ದರೆ, ಶಾಂತಳೊಡನೆ ಇಷ್ಟು ವರ್ಷ ಸಂಸಾರ ಸಾಗಿಸುವುದೆಂದರೆ.......

ಮಗ ಸ್ನಾನ ಮುಗಿಸಿ ಬಂದ...... ಅವನೊಡನೆ ಕುಳಿತು, ಬಿಸಿ ಬಿಸಿ ಇಡ್ಲಿ ಚಟ್ನಿಯನ್ನು ಮೆದ್ದ.

"ಶಾಂತ ಇಡ್ಲಿ ತುಂಬಾ ಚೆನ್ನಾಗಿದೆ. ಇನ್ನೊಂದೆರಡು ಹಾಕು," ರಾಮಸ್ವಾಮಿ ಹಾಕಿಸಿಕೊಂಡ.

"ಇಡ್ಲಿ ಚಟ್ನಿ ಈ ನಡುವೆ ಕಾಮನ್ ಆಗಿ ಹೋಯ್ತು. ನಮ್ಮ ಆಫೀಸ್ ಕ್ಯಾಂಟೀನ್‌ಲೂ ಅದೇ. ದಿನಾ ತಿಂದು ತಿಂದು ಬೇಜಾರಾಗಿದೆ. ಚಪಾತಿ, ಪೂರಿ, ಸಾಗು ಇಂಥದ್ದನ್ನೆಲ್ಲ ಮಧ್ಯೆ ಮಧ್ಯೆ ಯಾಕೆ ಮಾಡಬಾರದು?" ಮಗ ಸಲಹೆಯನ್ನು ನೀಡಿದ.

"ಇದೇ ಮಾತನ್ನ ನಾನು ಹೇಳಿದ್ದರೆ, ಎದುರಿಗೆ ಇರೋ ಹೋಟೆಲಿನಲ್ಲಿ ತಿಂದು ಬನ್ನಿ ಅಂತ ಅಂದಿರೋಳು ನಿಮ್ಮಮ್ಮ.... ಈಗ ನೋಡು, ನಾಳೆ ನಿನಗೋಸ್ಕರ ಮೆನೂನೇ ಬದಲಾಯಿಸ್ತಾಳೆ."

"ನಿಮಗ್ಯಾಕೆ ಹೊಟ್ಟೆ ಉರಿ..? ಚಪಾತಿ ತಿಂದರೆ ಅರಗುಲ್ಲ, ಪೂರಿ ತಿಂದರೆ

ಕೆಮ್ಮು ಬರುತ್ತೆ, ಅದೂ ಇದೂ ಅಂತ ನೂರೆಂಟು ಆಡೋರು ಯಾರು, ನೀವು ತಾನೇ......?"

"ಹೋಗಲಿ ಬಿಡಮ್ಮಾ.... ನನಗೋಸ್ಕರ ನಿನ್ನ ಮೆನು ಬದಲಾಯಿಸಬೇಡ. ನಾನು ಕ್ಯಾಂಟೀನಲ್ಲೇ ತಿಂತೀನಿ," ಸೋಮ ತಟ್ಟೆಯಲ್ಲೇ ಕೈ ತೊಳೆದು ಎದ್ದ.

"ನೋಡಿದ್ರಾ ಎಂಥಾ ಕಿತಾಪತಿ ಮನುಷ್ಯ ನೀವು. ಅಮ್ಮ ಮಗನ ನಡುವೆ ತಂದು ಹಾಕುಕ್ಕೆ ನೋಡ್ತೀರಲ್ಲ. ಆಹಾಹಾ!"

"ಹೌದು ಕಣೇ...... ನನಗೆ ಬೇರೆ ಏನೂ ಕೆಲಸವಿಲ್ಲ. ನಿಮ್ಮಿಬ್ಬರ ಮಧ್ಯೆ ತಂದಿಟ್ಟು, ನನಗೇನು ಸಿಗುತ್ತೆ! ನಿನಗೆ ಮೊದಲ್ನಿಂದಲೂ ಅಷ್ಟೇ..... ನನ್ನನ್ನು ಕಂಡರೆ ಅಷ್ಟಕ್ಕಷ್ಟೆ."

"ಅಮ್ಮಾ...... ನಾನಿನ್ನು ಬರ್ತೀನಿ.... ನಾನು ಆ ಕಡೆ ಹೋದ ಮೇಲೆ ನಿಮ್ಮ ಸಂವಾದ, ಸಲ್ಲಾಪ, ಕಾದಾಟಾನ ಮುಂದುವರೆಸಿ." ಸೋಮ, "ಬರ್ತೀನಿ" ಅಂತ ಮತ್ತೊಮ್ಮೆ ಇಬ್ಬರಿಗೂ ಹೇಳಿ, ಬಾಗಿಲಿನ ಆಚೆ ಹೊರಟ. ಹೊರಬಾಗಿಲಿಗೆ ಬಂದು ನಿಂತು, ಗೇಟಿನಾಚೆ ಮಗ ರಸ್ತೆಗೆ ಹೋಗುವವರೆಗೂ ನೋಡುತ್ತಾ ನಿಂತಿದ್ದ ಶಾಂತ ಒಳ ಬಂದಳು. ಅವಳನ್ನು ಒಳಗೆ ಕಾಲಿಡುತ್ತಿದ್ದಂತೆಯೇ ರಾಮಸ್ವಾಮಿ ಮತ್ತೆ ಪ್ರಶ್ನಿಸಿದ.

"ಮಧ್ಯಾಹ್ನಕ್ಕೆ ಏನು ಅಡಿಗೆಯೇ ಶಾಂತು?"

"ನನಗೇನು ಬರುತ್ತೋ ಅದನ್ನೇ ಮಾಡಿ ಹಾಕ್ತೀನಿ."

"ಬಾಯಿ ಜಡ್ಡು ಕಟ್ಟಿ ಹೋಗಿದೆ. ರಾಗಿ ಹಿಟ್ಟು, ಹುಳಿ ತೊವ್ವೆ ಮಾಡಿಬಿಡು."

"ಬರ್ತಾ ಬರ್ತಾ ನಿಮ್ಮ ಬಾಯಿ ಚಪಲ ಜಾಸ್ತಿ ಆಗ್ತಿದೆ."

"ಏನು ಮಾಡಲಿ ಹೇಳು. ವಯಸ್ಸಾಯ್ತು. ಚಪಲ ಹೆಚ್ಚಾಯ್ತು."

"ಇವತ್ತು ಹಿಟ್ಟು, ಹುಳಿತೊವ್ವೆ ಯಾವುದೂ ಇಲ್ಲ. ಇಡ್ಲಿ ಚಟ್ನಿ ತಿಂದ ಮೇಲೆ, ಹೊಟ್ಟೆ ಹಸಿವು ಮುಚ್ಚಿ ಹೋಗುತ್ತೆ. ರಾಗಿ ಹಿಟ್ಟು ತಿನ್ನುಕ್ಕೆ ಎಲ್ಲಿ ಆಗುತ್ತೆ?"

"ನಾಳೆ ಮಾಡ್ತೀಯಾ ಹಾಗಾದ್ರೆ.......?" ಮತ್ತೆ ಪ್ರಶ್ನಿಸಿದ.

"ನೋಡೋಣ...... ಸೋಮಂಗೆ ಏನು ಇಷ್ಟವೋ ಆ ತಿಂಡೀನ ಮಾಡ್ತೀವಿ. ಚಪಾತಿ ಪಲ್ಯ ಮಾಡಿದ್ರೆ ಅದೇ ಸಾಕಾಗುತ್ತೆ........"

"ಮಕ್ಕಳು ದೊಡ್ಡವರಾದ ಮೇಲೆ, ನನ್ನ ಇಷ್ಟಾನಿಷ್ಟಗಳ ಮೇಲೆ ನಿನಗೆ ನಿಗವೇ ಇಲ್ಲ" ಆಕ್ಷೇಪಣೆಯ ಧ್ವನಿ ಎತ್ತಿದ.

"ನಿಮ್ಮ ಇಷ್ಟಕ್ಕೆ ಕುಣಿದೂ ಕುಣಿದೂ ಸಾಕಾಗಿದೆ. ಇನ್ನಾದರೂ ನನ್ನ ಪಾಡಿಗೆ ಬಿಡಿ...... ನನ್ನನ್ನ......."

"ಸುಳ್ಳು ಹೇಳಬೇಡ ಶಾಂತಲ. ನಿನ್ನ ಇಷ್ಟಕ್ಕೆ ಕುಣಿದೋನು ನಾನು, ಈಗ ರಿಟೈರ್ ಆಗಿದೀನಿ ಅಂತ ಮೂಲೆ ಗುಂಪು ಮಾಡಿದೀಯ. ಅದನ್ನು ಸರಿ ಹೋಗಿಸಿಕೊಳ್ಳುತ್ತಿರೋನು ನಾನು......"

"ಸರಿ ಸರಿ.... ನೀವೇ ಸರಿ. ನಾನೇ ಸರಿಯಿಲ್ಲ. ಸರೀನಾ? ನನಗೀಗ ಬೇಕಾದಷ್ಟು ಕೆಲಸ ಇದೆ. ಕೆಲಸದೋಳು ಬರೋಕೆ ಮುಂಚೆ ಪಾತ್ರೆ ತೆರವು ಮಾಡಬೇಕು" ಎನ್ನುತ್ತಾ ಒಳಗೆ ಹೊರಟು ಹೋದಳು. ರಾಮಸ್ವಾಮಿ ಅಂದಿನ ದಿನ ಪತ್ರಿಕೆಯನ್ನು ಕೈಯಲ್ಲಿ ಹಿಡಿದು ಕುಳಿತ. "ಹಾಳಾದ್ದು ಹೊತ್ತೇ ಹೋಗುಲ್ಲ. ಹಳೇ ನ್ಯೂಸ್‌ನೇ ಓದಿ ಓದಿ ಬೇಸರವಾಯ್ತು," ಎಂದು ಬೈದು ಕೊಳ್ಳುತ್ತಾ ಪುಟಗಳನ್ನು ತಿರುಗಿಸಿದ.

"ತರಕಾರೀ...." ಎಂದು ಕಿರುಚುತ್ತಾ ತರಕಾರಿಯವಳು ಬಂದಳು. ಚೌಕಾಸಿ ಮಾಡೀ ಮಾಡೀ ಎರಡು ಬಗೆಯ ತರಕಾರಿಗಳನ್ನೂ ಅರ್ಧ, ಅರ್ಧ ಕೆ.ಜಿ.

ತೂಗಿಸಿಕೊಂಡು ಒಳತಂದಳು ಶಾಂತ.

"ಅದೆಷ್ಟೇ ಚೌಕಾಸಿ ಮಾಡ್ತೀಯೋ..? ಬೇಜಾರಾದ್ರೂ ಆಗುಲ್ವಾ!"

"ಚೌಕಾಸಿ ಮಾಡ್ದೇ ಇದ್ರೆ ನಮಗೇ ನಷ್ಟ. ಅವಳು ಹೇಳಿದ ಬೆಲೆಗೇ ಕೊಂಡು ಕೊಳ್ಳೋಕ್ಕೆ ಆಗುತ್ತೇನ್ರೀ... ನಮ್ಮಂಥೋರಿಗೆ ಮೋಸ ಮಾಡುಕ್ಕೆ ಅಂತ, ಅವರು ಹೇಳೋ ದರಾನೇ ಬೇರೆ. ಅದರ ನಿಜವಾದ ದರಾನೇ ಬೇರೆ....."

"ಹೋಗಲಿ ಬಿಡೇ...... ಅದರಿಂದ ಅವಳು ಏನು ಅರಮನೆ ಕಟ್ಟಿಸಿ ಕೊಳ್ಳಲ್ಲ. ನಾವು ಭಿಕಾರಿಗಳಾಗಿ ಹೋಗುಲ್ಲ......"

"ಬರ್ತಾ ಬರ್ತಾ ಧರ್ಮರಾಯರಾಗ್ತಾ ಇದೀರಲ್ಲ. ಹೋಗಿ ಅವಳಿಗೆ ಅರಮನೆ ಕಟ್ಟಿಸಿಕೊಟ್ಟು ಬನ್ನಿ."

"ಅನಳೇನು ನಮ್ಮ ಚಿಕ್ಕಪ್ಪನ ಮಗಳೇ...? ಏನೋ ಬಡ ಹೆಂಗಸು ಅಂತ ಹೇಳಿದೆ. ಅದಕ್ಯಾಕೆ ಅಲವತ್ತು ಕೊಳ್ತೀಯ...?"

"ಚಿಕ್ಕಪ್ಪನ ಮಗಳೋ? ಅಕ್ಕನ ಮಗಳೋ.... ಆ ಸಂಬಂಧ ಸಲಿಕ ಎಲ್ಲಾ ನಿಮಗೇ ಗೊತ್ತು." ಎಂದು ವಟವಟ ಗುಟ್ಟುತ್ತಾ ಶಾಂತ ಒಳಗೆ ನಡೆದಳು. ರಾಮಸ್ವಾಮಿ ಪೇಪರನ್ನು ಮಡಿಚಿಟ್ಟು ಬೀದಿ ಬಾಗಿಲಿಗೆ ಬಂದು ನಿಂತ. ಪಕ್ಕದ ಮನೆಯಾಕೆಯೂ ತರಕಾರಿಯವಳೊಡನೆ ಚೌಕಾಸಿ ಮಾಡುತ್ತಿದ್ದಳು.

"ಈ ಹೆಂಗಸರ ಹಣೇಬರಹವೇ ಇಷ್ಟು, ನಾಲ್ಕುಕಾಸು ಉಳಿಸೋಕ್ಕೋಸ್ಕರ ನಲವತ್ತು ಮಾತಾಡ್ತಾರೆ. ಒಂದು ದಿನ ಅಡಿಗೆ ಮಾಡಿಕೊಂಡು ತಿಂದರೆ ಮುಗೀತು. ಆ ತರಕಾರಿ ಕತೆ..... ಅಷ್ಟಾದ್ರೂ ತಿಳೀಬೇಡ್ವೆ. ಈ ಹೆಂಗಸರಿಗೆ... ದಿನಾ ಅದೇ ಮಾತು, ಅದೇ ಕತೆ. ಬೇಜಾರಾದ್ರೂ ಆಗುಲ್ವೆ?"

"ಇದೀರಾ? ಕೇಳಿಸ್ತೇ......" ಎಂದು ಶಾಂತ ಬೆಳಗ್ಗಿಂದ ಕೂಗು ಹಾಕಿದಳು.

"ಏನು ಬೇಕಾಗಿತ್ತು? ಅದ್ಯಾಕೆ ಹಾಗೆ ಕೂಗ್ತೀಯ. ಇಲ್ಲೇ ಇದೀನಿ" ಅಂತ ಒಳ ಬಂದ.

"ಬೇಗ ಸ್ನಾನ ಗೀನ ಮುಗಿಸಿ. ಕೆಲಸದೊಳು ಬಂದಮೇಲೆ ಸ್ನಾನಕ್ಕೆ ಹೋಗಬೇಡಿ. ದಿನ ಬೆಳಗಾದರೆ ನಿಮ್ಮ ಬಟ್ಟೆ ಒಗೆಯೋ ಕೆಲಸ ನನಗೇ ಬೀಳುತ್ತೆ."

"ನಿನ್ನ ಕೈಲಿ ಆಗದಿದ್ರೆ ಹೇಳಿಬಿಡು. ನಾನೇ ಒಗೆದುಕೊಳ್ತೀನಿ..... ಹೇಗೂ ಅವಳೇನು ಚೆನ್ನಾಗಿ ಒಗೆಯೋಲ್ಲ."

"ಅವಳಿಗೆ ಇನ್ನೂರು ರೂಪಾಯಿ ಸಂಬಳ ಕೊಟ್ಟು ಇಟ್ಟುಕೊಂಡಿದೀನಿ ದಂಡಕ್ಕೆ. ದಿನ ಬೆಳಗಾದರೆ ತಪ್ಪಿಸಿಕೊಳ್ತಾಳೆ. ನಮ್ಮ ಮನೇಲಿ ಇರೋರು ಮೂರು ಜನ. ಏನು ಕೆಲಸ ಇರುತ್ತೆ. ಮಧ್ಯೆ ಮಧ್ಯೆ ನಿಮ್ಮ ಈ ವರಸೆ ಬೇರೆ....."

"ಪ್ರತಿಯೊಂದಕ್ಕೂ ಏನಾದ್ರೂ ಹೇಳ್ತೀಯಲ್ಲೇ ಶಾಂತು. ಮುಂಚೆ ನೀನು ಹೀಗಿರಲಿಲ್ಲ."

"ನಾನೀಗ ಎರಡು ಮೊಮ್ಮಕ್ಕಳ ಅಜ್ಜಿಯಾಗಿದೀನಿ. ಮೊದಲಿನ ಹಾಗೇ ತೆಪ್ಪಗಿದ್ರೆ ನಡೆಯೋತ್ತಾ?"

ರಾಮಸ್ವಾಮಿ ನಕ್ಕ. "ಭೇಷ್...... ಅಳಿಯ ಬಂದ. ಮೊಮ್ಮಕ್ಕಳು ಹುಟ್ಟಿದವು. ಪ್ರಮೋಷನ್ ಮೇಲೆ ಪ್ರಮೋಷನ್... ಇನ್ನು ಸೊಸೆ ಮನೆಗೆ ಬಂದರೆ, ಈ ಭೂಮಿ ಮೇಲೆ ಇರುತ್ತೀಯೋ ಇಲ್ಲವೋ ನೀನು....." ತಮಾಷೆ ಮಾಡಿದ.

"ಯಾಕೆ? ಸೊಸೆ ಬರೋ ಹೊತ್ತಿಗೆ ನಾನು ಸ್ವರ್ಗಕ್ಕೆ ಹೋಗಬೇಕು ಅಂತ ಬಯಸ್ತೀರಾ?"

"ಆ ಸ್ವರ್ಗ ಅಲ್ಲ ಕಣೇ..... ಈ ಭೂಮಿಯ ಮೇಲಿನ ಸ್ವರ್ಗ...... ಸೊಸೆ ಬಂದ ಮೇಲೆ, ನೀನು ರಿಟೈರ್‌ಮೆಂಟ್ ತಗೋತೀಯೋ ಅಥವಾ ಯಜಮಾನಿಕೆ ಪಟ್ಟ ಬಲವಾಗಿರುತ್ತೋ ಅಂತ ಕುತೂಹಲದಿಂದ ಕೇಳಿದೆ ಅಷ್ಟೇ."

"ನೀವು ಏನೇನು ಮಾಡ್ತೀರಿ?" ವ್ಯಂಗ್ಯದಿಂದ ಕೇಳಿದಳು.

"ಅದನ್ನೆಲ್ಲಾ ನಾನು ಯೋಚಿಸುಲ್ಲ ಶಾಂತು. ಎಲ್ಲಾ ಹೇಗೆ ಹೇಗೆ ಬರುತ್ತೋ ಹಾಗೇ ತಗೋತೀನಿ. ಎಷ್ಟಾಗಲೀ ಗುಮಾಸ್ತನಾಗಿ, ಇನ್ನೊಬ್ಬರ ಕೈ ಕೆಳಗೆ ಕೆಲಸ ಮಾಡಿದೋನು ನಾನು. ಮನೆಯಲ್ಲಿ ನಿನ್ನ ಕೈಯಾಳು. ನನಗೆ ಹೊಸ ಹೊಸ, ಬೇರೆ ಬೇರೆ ಆಲೋಚನೆಗಳೇ ಇಲ್ಲ." ಹೆಂಡತಿಯ ಕಡೆ ಸರಸವಾಗಿ ನೋಡಿದ.

"ಇಷ್ಟು ವರ್ಷಗಳಾದರೂ ನಿಮ್ಮ ರಸಿಕತನ ಮಾತ್ರ ಕಡಿಮೆ ಆಗಲಿಲ್ಲ. ಯಾರಾದ್ರೂ ನೋಡಿದ್ರೆ ನಗ್ತಾರೆ ಅಷ್ಟೆ....."

"ನನ್ನ ಜೀವನದ ಜೀವಾಳ ಇಷ್ಟೇ ಅಂತ ಅನ್ನೋ...... ಆಫೀಸಿನಲ್ಲಿ ನಿಯತ್ತಿನಿಂದ ಕೆಲಸ ಮಾಡಿದೆ. ಮನೆಯಲ್ಲಿ ನಿನ್ನನ್ನು ನಿಯತ್ತಿನಿಂದ ನೋಡಿ ಕೊಂಡೆ.... ಮದುವೆಯಾದ ಹೊಸದರಲ್ಲಿ ನಾವು ಹೇಗೆ ದಿನಗಳನ್ನು ಕಳೆಯುತ್ತಿದ್ದೆವು ನೆನಪಿದೆಯಾ ನಿನಗೆ......?"

"ಎಲ್ಲಾ ನೆನಪಿದೆ ನನಗೆ ಮದುವೆಯಾದ ಹೊಸದರಲ್ಲೇ ನೀವೆಷ್ಟು ಮೋಸ ಮಾಡಿದ್ರಿ ಅಂತ...." ರಾಮಸ್ವಾಮಿ ಪೆಚ್ಚಾದ. "ನಿಮ್ಮ ಜತೆ ಮಾತಾಡ್ತಾ ಇದ್ರೆ ಒಳಗೆ ಅಡಿಗೆ ಕೆಲಸ ಮಾಡೋದು ಯಾರು?" ಎಂದು ಹುಬ್ಬು ಗಂಟಿಕ್ಕಿ ನುಡಿದು ಒಳ ಹೋದಳು. ರಾಮಸ್ವಾಮಿ ಟವೆಲ್ಲು ಹಿಡಿದು ಬಚ್ಚಲು ಮನೆಯ ಕಡೆ ನಡೆದ.

ಇದು ರಾಮಸ್ವಾಮಿ, ಶಾಂತಳ ಮನೆಯ ದಿನಚರಿ. ಕೆಲಸದವಳು ಬಂದು ಹತ್ತು ಹದಿನೈದು ನಿಮಿಷಗಳಲ್ಲಿ ಮನೆಯ ಕೆಲಸವನ್ನು ಮುಗಿಸಿ ನಡೆದಳು. ಶಾಂತಳ ಅಡಿಗೆ ಕೆಲಸ ಮುಗಿದಿತ್ತು. ಗಂಡ ಹೆಂಡತಿ ಇಬ್ಬರೂ ಅಡಿಗೆ ಮನೆಯಲ್ಲಿಯೇ, ನೆಲದ ಮೇಲೆ ಊಟದ ಚಾಪೆ ಹಾಕಿಕೊಂಡು ಊಟಕ್ಕೆ ಕುಳಿತರು.

"ಶಾಂತ, ಅಡಿಗೆ ಕೆಲಸದಲ್ಲಿ ನಿನ್ನ ಕೈ ಎಷ್ಟು ಪಳಗಿ ಹೋಗಿದೆ ಅಂತಂದ್ರೆ.... ನೀನು ಏನೇ ಮಾಡಿದರೂ ಅದಕ್ಕೆ ರುಚಿ ಬಂದು ಬಿಡುತ್ತೆ ನೋಡು.."

"ಅದೇನು ಅಷ್ಟು ಹೊಗಳ್ತೀರಿ! ಸಾರಿಗೆ ಉಪ್ಪೆ ಸಾಲದು."

"ಮದುವೆಯಾದ ಹೊಸದರಲ್ಲೂ ಸಾರಿಗೆ ಉಪ್ಪು ಹಾಕದೇ ಇದ್ದರೂ, ನಾನೂ ಹಾಗೇ ಊಟ ಮಾಡ್ತಿದ್ದೆ.... ಬಸವನ ಹಾಗೆ."

"ಎಲ್ಲೋ ನಿಮ್ಮಮ್ಮನ ಕೈನ ಅಡಿಗೆಗಿಂತ ನನ್ನ ಕೈನ ಅಡಿಗೆ ಚೆನ್ನಾಗಿರ್ತಿತ್ತೇನೋ......"

"ಅಮ್ಮನೂ ಅಡಿಗೆ ಚೆನ್ನಾಗಿ ಮಾಡುತ್ತಿದ್ದಳು."

"ಬರೀ, ಅಡಿಗೆ, ಊಟ, ತಿಂಡಿ ತೀರ್ಥ ಅಂತ ಅದೇ ಮಾತು. ಕೇಳಿ ಕೇಳಿ ತಲೆ ಚಿಟ್ಟು ಹಿಡಿದಿದೆ. ರಿಟೈರ್ ಆದಮೇಲಂತೂ ನಿಮ್ಮ ಸಹವಾಸ ನನಗೆ ಸಾಕಾಗಿ ಹೋಗಿದೆ. ಎಲ್ಲಾದ್ರೂ ಹೊರಟು ಹೋಗೋಣ ಅಂತನ್ನಿಸುತ್ತೆ....."

"ಮಗನ ಹೆಂಡತಿ ಬಂದ ಮೇಲೆ ಎಲ್ಲಿಗೆ ಬೇಕಾದ್ರೂ ಹೋಗು. ನೀನಿಲ್ಲದಿದ್ದರೆ ನಿನ್ನ ಮಗನಿಗೆ ಕಷ್ಟವಾಗುತ್ತೆ."

"ಹಾದಾದು. ಹೆಂಡತಿ ಬಂದ ಮೇಲೆ ಅವನಿಗೆ ನಾನ್ಯಾಕೆ? ಎಲ್ಲಾ ಗಂಡಸರ ಹಣೇ ಬರಹವೂ ಅಷ್ಟೆ..... ಸ್ವಾರ್ಥಿಗಳು......"

"ಸ್ವಾರ್ಥತನ ಅಲ್ಲ ಕಣೇ...... ಬದಲಾವಣೆ.... ಮನೆಗೆ ಸೊಸೆ ಬಂದ ಮೇಲೆ,

ನಿನ್ನ ಕೆಲಸ ಹಗುರವಾಗುತ್ತೆ...... ಅವನಿಗೂ ಹೊಸ ಸಂಸಾರ.... ಅದೇ ಮೋಜು ಅನಿಸುತ್ತೆ."

"ನಿಮಗೆ ಎಲ್ಲಾ ಗೊತ್ತು ಅಲ್ಲ? ಅವನಿಗಿನ್ನು ಈಚೆಗೆ ಕೆಲಸ ಸಿಕ್ಕಿದೆ. ಸುಮ್ಮನೇ ಮದುವೆ, ಸೊಸೆ ಅಂತ ಅವನ ಎದುರಿಗೆ ಮಾತನಾಡಬೇಡಿ. ಮೊದಲು ಒಂದಿಷ್ಟು ದುಡ್ಡು ಕಾಸು ಅಂತ ಮಾಡಿಕೊಳ್ಳಲಿ. ಏನು ನಮ್ಮ ಕಾಲ ಕೆಟ್ಟು ಹೋಯಿತೆ? ನಮ್ಮ ಹಾಗೆ ಪರದಾಡಬಾರದು........"

"ಏನಾಗಿತ್ತು ನಮಗೆ? ನಾವು ಪರದಾಡಿದ ನೆನಪಿಲ್ಲ ನನಗೆ...... ಸ್ವಲ್ಪ ಅನ್ನದ ತಪ್ಪಲೆ ಇತ್ತ ತಳ್ಳು......"

"ನಿಮಗೆ ಬರುತ್ತಿದ್ದ ಸಂಬಳ ನಮ್ಮಿಬ್ಬರಿಗೆ ಸಾಕಾಗುತ್ತಿರಲಿಲ್ಲ. ಅದಕ್ಕೇ ತಾನೇ ಮಕ್ಕಳೇ ಬೇಡ ಅಂತ ವಿಶ್ವಾಮಿತ್ರನ ತರಹ ಆಡ್ತಿದ್ದೋರು ಯಾರೋ.........?"

"ನಿನಗೇ ಗೊತ್ತು ಶಾಂತ.. ಮಕ್ಕಳಾದ ಮೇಲೆ, ಬೆಳೆಸಿ, ವಿದ್ಯಾವಂತರನ್ನಾಗಿ ಮಾಡೋಕೆ ನಾವು ಶ್ರಮ ಪಟ್ಟೆವು. ಹೌದು ತಾನೇ...?"

"ಹೌದು ಗೊತ್ತು..... ಅದಕ್ಕೇ ಸೋಮನಿಗೆ ಈಗಲೇ ಮದುವೆ ಬೇಡಾಂತ ನಾನು ಹೇಳಿದ್ದು. ನಾಳೆ, ಅವನ ಹೆಂಡತಿಯೂ ನನ್ನ ತರಹ ಆಸೆ ಪಡೋದು. ನೀವು ಹೇಗೆ ಹೇಳ್ತಿದ್ದರೋ ಹಾಗೆ ನಿಮ್ಮ ಮಗನೂ ಆಡಿದರೆ, ಅವಳು ಅವನನ್ನು ಬಿಟ್ಟು ಹೋಗ್ತಾಳೆ ಅಷ್ಟೆ. ಕಾಲ ಹಾಗಿದೆ. ನನ್ನ ಕಾಲವಲ್ಲ. ನಿಮಗೇ ಅನುಸರಿಸಿಕೊಂಡು ಇರೋಕೆ."

"ಸರಿ, ಸರಿ, ಒಂದಕ್ಕೊಂದು ಸಂಬಂಧವಿಲ್ಲದ ಮಾತು. ನಾನು ಹಳೇ ಕಾಲದವನು ಬಿಡು. ಕೆಲಸದಲ್ಲಿರುವ ಹುಡುಗೀನೇ ತರೋಣ. ಇಬ್ಬರೂ ಸಂಪಾದಿಸಿದ್ರೆ...... ಅನುಕೂಲವಾಗಿ ಇದ್ದೇ ಇರುತ್ತಾರೆ."

"ಏನೂ ಬೇಡ..... ಬೆಳಗಾಗೆದ್ದು ಅವಳು ಕೆಲಸಕ್ಕೆ ಹೋಗಲಿ. ಈ ವಯಸ್ನಲ್ಲೂ ನಾನು ಮನೆ ಚಾಕರಿ ಮಾಡಲಾರೆ......"

"ಸೋಮ ಅಂತಹವಳನ್ನೇ ಆಸೆ ಪಟ್ಟರೇ....."

"ಅವನಿಗೆಂದು ತಿಳಿಯುತ್ತೆ? ನನಗೆಂತಹ ಸೊಸೆ ಬೇಕು ಅಂತ ನಾನು ಹುಡುಕ್ತೀನಿ" ರಾಮಸ್ವಾಮಿ ಹೆಂಡತಿಯ ಕಡೆ ನಕ್ಕು ಮಜ್ಜಿಗೆಯ ಅನ್ನವನ್ನು ಕಲಸಿದ.

"ಸೋಮ...... ಈ ಕಾಲದ ಹುಡುಗ. ನಿನ್ನ ಮಾತನ್ನು ಕೇಳ್ತಾನೆ ಅಂತ ಅಂದುಕೊಂಡಿದೀಯ?"

"ಕೇಳಲೇ ಬೇಕು. ಅವನನ್ನು ಸಾಕಿ ಬೆಳೆಸಿರೋಳು ನಾನು. ಅವನನ್ನು ಹೆತ್ತ ತಾಯಿ ನಾನು.........."

"ಈ ಡೈಲಾಗ್‌ನ ಎಲ್ಲಾ ಸಿನಿಮಾದಲ್ಲೂ ಎಲ್ಲಾ ತಾಯೀರೂ ಹೇಳ್ತಾರೆ. ಕೇಳಿ ಕೇಳಿ ರೋಸಿ ಹೋಗಿರುತ್ತಾರೆ ತಿಳೀತಾ?"

"ಸಿನಿಮಾದವರು ಬೇರೆ ಏನು ಹೇಳ್ತಾರೆ? ನಮ್ಮಂತಹವರ ಜೀವನವನ್ನೇ ತೆರೆಯ ಮೇಲೆ ತೋರಿಸುತ್ತಾರೆ. ಹೆಚ್ಚುಗಾರಿಕೆ ಏನಿದೆ?"

"ಇರಬಹುದು. ಇರಬಹುದು.. ನಾನು ಏಳಲಾ?"

"ನಿಮ್ಮದಾಯ್ತಲ್ಲ...... ಏಳಿ......"

"ನಿನಗೆ ಬೇಕಾದ್ರೆ, ನಾನು ಕೂತಿರ್ತೀನಿ...."

"ಏನೂ ಬೇಡ. ಹಾಸಿಗೆ ದಿಂಬು ನಿಮ್ಮನ್ನು ಕರೀತಿದೆ. ಹೋಗಿ ಉರುಳಿಕೊಳ್ಳಿ....."

"ತುಂಬಾ ಹಂಗಿಸಿ ಮಾತನಾಡ್ತೀಯ ನೀನು...." ಆಕ್ಷೇಪಣೆ ಮಾಡಿದ.

"ಇರೋ ವಿಷಯ ಹೇಳಿದ್ರೆ.... ಅದ್ಯಾಕೇ ಕೋಪ? ದಿನಾ ನಿಮ್ಮ ದಿನಚರಿ ಇಷ್ಟೇ ತಾನೆ......" ರಾಮಸ್ವಾಮಿ ಎದ್ದು ಕೈ ತೊಳೆದು ಮಂಚದ ಮೇಲೆ ಉರುಳಿಕೊಂಡ. ಕೆಲವೇ ನಿಮಿಷಗಳಲ್ಲಿ ಗೊರಕೆಯ ಸದ್ದು ಅಡಿಗೆಮನೇವರೆಗೂ ಕೇಳಿಸಿತು.

* * *

"ನಾನು ದೇವಸ್ಥಾನಕ್ಕೆ ಹೋಗಿ ಬರ್ತೀನಿ. ಸೋಮ ಬಂದರೆ, ತಿಂಡಿ ಕಾಫೀನ ಬಿಸಿ ಮಾಡಿ ಕೊಟ್ಟು ಬಿಡಿ."

"ನಾನು ವಾಕಿಂಗ್ ಹೋಗೋಣ ಅಂತ ಇದ್ನಲ್ಲೇ......"

"ಅದೇನು ಎರಡೆರಡು ಹೊತ್ತು ವಾಕಿಂಗ್..... ಒಂದು ದಿನ ಒಂದು ಹೊತ್ತು ಮನೇಲೇ ಇದ್ರೆ ನಿಮ್ಮ ಗಂಟೇನೂ ಹೋಗುವುದಿಲ್ಲ...."

"ಸರಿ..... ಅದೇನು ದೇವಸ್ಥಾನಕ್ಕೆ? ಏನಾದ್ರೂ ವಿಶೇಷಾನಾ?"

"ಅಪರೂಪಕ್ಕೊಮ್ಮೆ ಮನೆ ಬಿಟ್ಟು ಹೊರಗೆ ಹೊರಟರೆ, ನೂರೆಂಟು ಪ್ರಶ್ನೆ ಕೇಳಬೇಡಿ. ಬಂದ ಮೇಲೆ ನಾನೇ ಹೇಳ್ತೀನಿ...."

"ಸರಿಯಪ್ಪಾ...... ಹೂಂ. ಹೋಗ್ಬಾ....."

"ಮರೀಬೇಡಿ. ಮನೇಲೇ ಇರಿ. ಎಲ್ಲೆಲ್ಲೋ ಹೊರಟು ಹೋಗಬೇಡಿ."

"ಸರಿ ಸರಿ ನನಗೇನೂ ಅಷ್ಟೂ ತಿಳಿಯಲ್ವೆ? ಸೋಮ ಮನೆಗೆ ಬರ್ತಾನೆ ನೀನೂ ಮನೇಲಿಲ್ಲ. ತಿಂಡಿ ಕಾಫಿ, ನಾನು ಕೊಡಬೇಕು. ಅಷ್ಟೇ ತಾನೇ......?"

"ಬಿಸಿ ಮಾಡಿ ಕೊಡಿ. ಇಲ್ಲದಿದ್ದರೆ ಅವನು ತಿನ್ನಲ್ಲ."

"ನೀನು ವಿಪರೀತ ಮುದ್ದು ಮಾಡಿ ಬಿಟ್ಟಿದೀಯ. ಒಂದು ದಿನ ತಣ್ಣಗಿರೋ ಕಾಫಿ, ತಿಂಡಿ ಆದರೇನಂತೆ.....?"

"ಸರಿ. ಹಾಗಾದ್ರೆ ನಾನೇ ಮನೇಲಿ ಕುಕ್ಕರು ಬಡಿದಿರ್ತೀನಿ." ಕೋಪದಿಂದ ನುಡಿದಳು. ರಾಮಸ್ವಾಮಿ ನಕ್ಕ.

"ಅದೆಷ್ಟು ಬೇಗ ಕೋಪ ಬರುತ್ತೆ ನಿನಗೆ.....? ಶಾಂತ ಅಂತ ಅದ್ಯಾರು ಹೆಸರಿಟ್ಟರೋ....... ಆ ಪುಣ್ಯಾತ್ಮಂಗೆ ಬುದ್ಧಿ ಇಲ್ಲ......"

"ಹೌದು ನಮ್ಮಪ್ಪನಿಗೆ ಬುದ್ಧಿ ಇಲ್ಲ. ಬುದ್ಧಿ ಇದ್ದಿದ್ದರೆ ನಿಮ್ಮಂಥೋರಿಗೆ ನನ್ನನ್ನು ಕಟ್ಟಿ ಹಾಕ್ತಿರಲಿಲ್ಲ."

"ಅವರಿಗಂತೂ ಬುದ್ಧಿ ಸಾಲದು ಅಂತಂದ್ರೆ. ನಿನಗಾದ್ರೂ ಸ್ವಲ್ಪ ಬುದ್ಧಿ ಇರಬೇಕಾಗಿತ್ತು. ನನ್ನನ್ನು ನೋಡಿದಾಗ, ನಾನು ನಿನಗೆ ಮಂಕು ಬೂದಿ ಎರಚಲಿಲ್ಲ."

"ಸರಿ. ಸರಿ. ನಿಮ್ಮ ಮಾತು ಕೇಳ್ತಾ ನಿಂತ್ರೆ, ದೇವಸ್ಥಾನದ ಬಾಗಿಲು ಮುಚ್ಚುವ ಸಮಯವಾಗುತ್ತೆ ಅಷ್ಟೇ....." ಚಪ್ಪಲಿ ಮೆಟ್ಟಿ ಶಾಂತ ರಸ್ತೆಗಿಳಿದಳು. ರಾಮಸ್ವಾಮಿ ಮುಂಬಾಗಿಲ ಎದುರಿಗೆ ಬೆತ್ತದ ಕುರ್ಚಿಯನ್ನು ಎಳೆದುಕೊಂಡು ರಸ್ತೆ ಕಾಣುವಂತೆ ಕೂತ. ಹಾಗೇ ಕಣ್ಣು ಮುಚ್ಚಿ ಕುಳಿತ.

"ಏನಪ್ಪಾ...... ಬೀದಿ ಬಾಗಿಲನ್ನು ಇಷ್ಟು ದೊಡ್ಡದಾಗಿ ತೆಗೆದು ಕಣ್ಣು ಮುಚ್ಚಿ ಕುಳಿತರೆ, ದನ ಒಳಗೆ ನುಗ್ಗಿ ಬಂದರೂ ನಿಮಗೆ ಗೊತ್ತಾಗುಲ್ಲ....." ಸೋಮ ಅಪ್ಪನ ಮೇಲೆ ನಯವಾಗಿ ರೇಗಿದ.

"ಯಾಕಪ್ಪಾ ಇವತ್ತು ಲೇಟು......?"

"ಏನೂ ಇಲ್ಲ. ದಿನಾ ಬರೋ ಟೈಂಗೇ ಬಂದಿದೀನಿ. ನೀವು ಎಂದೂ ನಾನು ಬರುವ ಸಮಯದಲ್ಲಿ ಮನೇಲಿದ್ದೋರಲ್ಲ. ಅದಕ್ಕೇ ಗೊತ್ತಿಲ್ಲ. ಅಮ್ಮಾ ಇಲ್ವಾ ಮನೇಲಿ?"

"ಇಲ್ಲ. ಎಲ್ಲೋ ಹೊರಗೆ ಹೋಗಿದಾಳೆ....."

"ಎಲ್ಲಿಗೇ ಅಂತ ಹೇಳಲಿಲ್ವಾ.....?"

"ಹುಂ. ದೇವಸ್ಥಾನ ಅಂತ ಹೇಳಿದ್ಲು...... ಆದರೆ ಹೊರಗೆ ಹೋದ ಮೇಲೆ, ಮಾರ್ಕೆಟ್ಟು, ಸ್ನೇಹಿತೆ ಅದೂ ಇದೂ ಅಂತ ಎಲ್ಲೆಲ್ಲಿ ಓಡಾಡಿಕೊಂಡು ಯಾವಾಗ ಬರ್ತಾಳೋ.....?" ಕೈ ಕಾಲು ತೊಳಕೋ ಕಾಫಿ ತಿಂಡಿ ಕೊಡ್ತೀನಿ.....

"ಈಗ ಬಂದೆ......" ಎನ್ನುತ್ತಾ ಷೂಗಳನ್ನು ಬಿಚ್ಚಿಟ್ಟು, ಕೈಕಾಲು ಮುಖ ತೊಳೆದು ಬಂದ.

ಆರಿದ ತಿಂಡಿಯನ್ನು ಕಂಡು ಮುಖ ಸಿಂಡರಿಸಿದ. "ನಿಮ್ಮಮ್ಮ ಆಗ್ಲೇ ಮಾಡಿಟ್ಟಿದ್ದಳು ನೋಡು. ಅದಕ್ಕೆ ತಣ್ಣಗಾಗಿದೆ."

ಸೋಮ, ಅಪ್ಪ ಕೊಟ್ಟ ಬಿಸಿ ಕಾಫಿಯೊಂದಿಗೆ, ಆರಿದ ಉಪ್ಪಿಟ್ಟಿನ ಉಂಡೆಗಳನು ನುಂಗಿದ. ಆ ದಿನದ ದಿನ ಪತ್ರಿಕೆಯನ್ನು ಹಿಡಿದು ಕಣ್ಣಾಡಿಸಿದ. ಹಾಗೇ ಕುರ್ಚಿಯ ಬೆನ್ನಿಗೆ ಒರಗಿ, ಕಣ್ಣು ಮುಚ್ಚಿದ ಜೊಂಪು ಹತ್ತಿದಂತಾಗಿತ್ತು. ತಾಯಿಯ ದನಿ ಕೇಳಿ ಬೆಚ್ಚಿ ಬಿದ್ದು ಎದ್ದ.

"ಏನೋ ಇಲ್ಲಿ ಬಾಗಿಲೆದುರಿಗೇ ಕೂತಿದೀಯ. ನನಗೋಸ್ಕರ ಕಾಯ್ತಿದ್ಯಾ? ಒಳಗೆ ಹೋಗಿ ಒಂದು ಗಳಿಗೆ ಮಲಗಬಾರದೇ.....?"

"ಪೇಪರು ಓದ್ತಾ ಕೂತಿದ್ದೆ. ಹಾಗೇ ತೂಕಡಿಕೆ ಬಂತು ಅಷ್ಟೇ....." ಆಕಳಿಸುತ್ತಾ ಎದ್ದ.

"ಇಲ್ಲಿ ನಡು ಮಧ್ಯೆ ಕುರ್ಚಿ ಇಟ್ಟಿರೋರು ನಿಮ್ಮಪ್ಪ ತಾನೇ......? ಎನ್ನುತ್ತಾ ಪಕ್ಕಕ್ಕೆ ಸರಿಸಿದಳು. ತಿಂಡಿ ಕಾಫಿ ಆಯ್ತೇನೋ...... ಬಿಸಿ ಮಾಡಿದ್ರೋ ಹಾಗೇ ಕೊಟ್ರೋ......?"

"ಬಿಸಿಯಾಗಿತ್ತಮ್ಮ....."

"ನಿಮ್ಮಮ್ಮನಿಗೆ ನನ್ನ ಮೇಲೆ ನಂಬಿಕೆ ಇಲ್ಲ. ಬಂದ ಕೂಡಲೇ ತನಿಖೆ ಪ್ರಾರಂಭಿಸಿದಳು ನೋಡು....." ಹೋಗಲಿ ತೀರ್ಥ ಪ್ರಸಾದ ಕೊಡು. ಒಂದು ಗಳಿಗೆ ತಿರುಗಾಡಿ ಬರ್ತಿನಿ....

"ಇಷ್ಟು ಹೊತ್ನಲ್ಲಿ ಏನು ತಿರುಗಾಟ? ಸುಮ್ಮನೇ ಮನೇಲೇ ಇರಿ" ಎಂದು ಆರ್ಭಟಿಸಿ, ಗಂಡ, ಮಗನ ಕೈಗೆ ತೀರ್ಥ ಪ್ರಸಾದವನ್ನು ಹಾಕಿದಳು.

"ಏನು ವಿಶೇಷ ಅಂತ ಹೇಳಲೇ ಇಲ್ಲವಲ್ಲ ನೀನು...?"

"ಭಾನುವಾರ ನಮ್ಮ ಸೋಮು ಹುಟ್ಟಿದ ಹಬ್ಬ. ಪಂಚಾಮೃತ ಅಭಿಷೇಕಕ್ಕೆ ಬರೆಸಿ ಬಂದೆ....."

"ಓ..... ಹೌದಾ? ನನಗೆ ಜ್ಞಾಪಕವೇ ಇರಲಿಲ್ಲ. ನಿನಗಿತ್ತೇನಯ್ಯಾ ನೆನಪು?"

"ನನ್ನ ಹುಟ್ಟಿದ ಹಬ್ಬ ನನಗೆ ನೆನಪಿಗೆ ಇಲ್ಲದೇ ಇರುತ್ತಾ?"

"ನಿಮ್ಮಪ್ಪನಿಗೆ ಏನೂ ನೆನಪಿಗೆ ಇರುಲ್ಲ. ಮರೆವೋ ಮರೆವು..... ಅವರಿಗೆ ಎಷ್ಟು ಮಕ್ಕಳು ಅಂತ ಸಹ ನೆನಪಿಗೆ ಇದೆಯೋ ಇಲ್ಲವೋ?"

"ಹೌದು ಅಂದ್ಹಾಗೆ ನಮಗೆಷ್ಟು ಮಕ್ಕಳು?" ರಾಮಸ್ವಾಮಿ ಹೆಂಡತಿಯನು ಕೆಣಕಲು ಕೇಳಿದ. ಸೋಮ ಗೊಳ್ಳನೆ ನಕ್ಕ. ರಾಮಸ್ವಾಮಿಯೂ ನಕ್ಕಾಗ ಅವಳು ಒಳಗೆ ನಡೆದಳು.

"ನಿಮ್ಮಮ್ಮನಿಗೆ ಶಾಂತ ಅನ್ನೋ ಹೆಸರು ಅನ್ವರ್ಥ ನಾಮ ಅಲ್ಲ. ಮಾತು ಮಾತಿಗೆ ಕೋಪ ಬರುತ್ತೆ. 'ದುರ್ಗಿ' ಅಂತಲೋ 'ಕಾಳಿ' ಅಂತಲೋ ಹೆಸರನ್ನಿಟ್ಟಿದ್ದರೆ

ಚೆನ್ನಾಗಿತ್ತು."

"ಈಗಲು ಏನಂತೆ? ನಾವು ಹೆಸರನ್ನು ಬದಲಾಯಿಸೋಣ." ಮತ್ತೆ ಅವರಿಬ್ಬರೂ ನಕ್ಕಾಗ ಶಾಂತ ಹೊರ ಬಂದಳು.

"ಅಪ್ಪ ಮಗನಿಗೆ ನನ್ನನ್ನು ಆಡಿಕೊಂಡು ನಗೋ ಕೆಲಸ ಬಿಟ್ಟರೆ ಬೇರೆ ಏನೂ ಇದ್ದಂತಿಲ್ಲ. ಅವರಂತೂ ರಿಟೈರ್ ಆಗಿದ್ದೋರು...... ನಿನಗಾದ್ರೂ ಆಫೀಸು, ಕೆಲಸ ಅಂತ ಏನೂ ಇಲ್ವಾ?"

"ಆಫೀಸಿನ ಕೆಲಸ ಆಫೀಸಿಗೆ. ಮನೆಯ ಮಾತು ಮನೆಯಲ್ಲಿ ಅಲ್ವೇನಪ್ಪಾ.....?"

"ಹೂಂ. ಮತ್ತೇ......"

"ಹೂಂ. ಮತ್ತೆ. ಓತಿಕೇತಕ್ಕೆ ಬೇಲಿ ಸಾಕ್ಷಿ..... ಸದಾ ಇದೇ ರೀತಿ ಇದ್ದರೆ, ನೀವು ಬದಲಾಗೋದು ಯಾವಾಗ?"

"ನಾನ್ಯಾಕೆ ಬದಲಾಗಬೇಕು? ನಾನು ಯಾವ ಮಾವನ್ನ ಮೆಚ್ಚಿಸಬೇಕಾಗಿಲ್ಲ. ಅಳಿಯನ್ನ ಹೊಗಳಬೇಕಾಗಿಲ್ಲ. ಸೊಸೆ ಬಂದರೂ ಹೀಗೇ ಇರ್ತೀನಿ. ಸೊಸೆ ಬಂದ ಮೇಲೆ ಬದಲಾಗೋಳು ನೀನು.... ಅಲ್ವೇ....?" ಎನ್ನುತ್ತಾ ಹೆಂಡತಿ ಮಗನ ಕಡೆ ನೋಡಿದ. ಶಾಂತ ಸುಮ್ಮನಿರಿ ಎನ್ನುವಂತೆ ಕಣ್ಣು ಕಣ್ಣು ಬಿಟ್ಟರೆ, ಸೋಮ ಆ ಮಾತು ತನಗೆ ಸಂಬಂಧಿಸಿದ್ದೇ ಅಲ್ಲವೆನ್ನುವಂತೆ ನಟಿಸಿದ್ದ. ಆದರೆ ತಾಯಿ ಯಾವ ಮಾತನ್ನೂ ಆಡದಿದ್ದಾಗ ಆಕೆಯ ಕಡೆ ನೋಡಿದ್ದ. ಅಮ್ಮ ಅಪ್ಪನಿಗೆ ಏನೋ ಕಣ್ಣು ಸಂಜ್ಞೆ ಮಾಡುತ್ತಿರುವುದನ್ನು ಕಂಡು ಆಶ್ಚರ್ಯವಾಯಿತು. ರಹಸ್ಯ ವೇನಿರಬಹುದು ಎನ್ನೋ ಕುತೂಹಲ ಮೂಡಿತು. ಪದೇ ಪದೇ ತಾಯಿಯ ಕಡೆ ನೋಡಿದರೂ, ಮತ್ತೆ ಆ ಮಾತು ಬರಲಿಲ್ಲ. ಯೋಚಿಸಿ ಯೋಚಿಸಿ ತನಗೆ ತಾನೇ ಅಂದುಕೊಂಡ.

ಅಮ್ಮನಿಗೆಲ್ಲೋ ಈಗಲೇ ತನಗೆ ಮದುವೆ ಮಾಡಲು ಇಷ್ಟವಿಲ್ಲ. ಅದಕ್ಕೇ ಅಪ್ಪನಿಗೆ ಸುಮ್ಮನಿರುವಂತೆ ಸಂಜ್ಞೆ ಮಾಡಿರುವಳೆಂದು ಕೊಂಡ. ಆದರೂ ಆ ಮಾತು ತಲೆಯನ್ನು ಹೊಕ್ಕಿತ್ತು. ತನ್ನ ಮದುವೆ ವಿಷಯ....... ಏಕಾಗಬಾರದು? ಮೈಯೆಲ್ಲಾ ಹೊಸ ಅನುಭವ ತುಂಬಿಕೊಂಡಂತಾಯಿತು. ತನ್ನ ಪತ್ನಿಯಾಗಿ ಬರುವವಳು ಹೇಗಿರಬೇಕು ಎಂದು ಕಲ್ಪಿಸಿಕೊಂಡು ಒಂದು ರೂಪವನ್ನು ಕೊಡಲು ನೋಡಿದ. ಆದರೆ ಯಾವುದೇ ಒಂದು ರೂಪವೂ ಪರಿಪೂರ್ಣವಾಗಲಿಲ್ಲ. ತಲೆ ಕೊಡವಿಕೊಂಡ.

ಛೆ...... ತಾನೇಕೆ ಈಗಲಿಂದ ತಲೆ ಕೆಡಿಸಿಕೊಳ್ಳಬೇಕು. ಹೆಣ್ಣುಗಳು ಬಂದಾಗ, ಒಂದು ಕಲ್ಪನೆ ಮೂಡಬಹುದು ಎಂದುಕೊಂಡ.

ಅವನಿಗಿನ್ನು ಕೇವಲ ಇಪ್ಪತ್ತಾರು ವರ್ಷಗಳು. ಎರಡು ವರ್ಷಗಳಿಂದ ಒಂದು ಖಾಯಂ ನೌಕರಿಯಲ್ಲಿದ್ದಾನೆ. ಅಪ್ಪನಿಗೆ ಮಗ ಸರ್ಕಾರಿ ನೌಕರಿಗೆ ಸೇರಲಿ ಎಂದು ಆಸೆ ಇತ್ತು. ಆದರೆ ಅಮ್ಮನ ಮಾತು, ವಿಚಾರವೇ ಬೇರೆ.

"ಆ ತಾಪೇದಾರಿ ಕೆಲಸ ನಿಮ್ಮಪ್ಪನಿಗೇ ಸರಿ. ನೀನು ಯಾವುದಾದರೂ ಪ್ರೈವೇಟ್ ಕಂಪನಿಗೆ ಸೇರಿಕೋ. ಚೆನ್ನಾಗಿ ಸಂಬಳ ಸಿಗುತ್ತದೆ" ಅಂತ.

ಬಿ.ಕಾಂ. ಮುಗಿಸಿ ಎರಡು ವರ್ಷ ಕಳೆದೂ, ಸರಿಯಾದ ಕೆಲಸ ಸಿಕ್ಕಿರಲಿಲ್ಲ. ಅಲ್ಲಿ ಇಲ್ಲಿ ಟೆಂಪರ್‍ವರಿ ಕೆಲಸ ಮಾಡುತ್ತಾ, ಪ್ರೈವೇಟ್‌ನಲ್ಲಿ ಸಣ್ಣಪುಟ್ಟ ಟ್ರೈನಿಂಗ್ ಕೋರ್ಸ್‌ಗಳನ್ನು ಮಾಡಿಕೊಂಡು, ಕಡೆಗೆ ಒಂದು ಪ್ರೈವೇಟ್ ಕಂಪನಿಯಲ್ಲಿ ಕೆಲಸವನ್ನು ಗಿಟ್ಟಿಸಿದ. ಆರು ತಿಂಗಳ ಪ್ರೊಬೇಷನರಿಯ ನಂತರ ಕೆಲಸ ಖಾಯಂ ಆಗಿತ್ತು.

ಮನೆಯ ಖರ್ಚುವೆಚ್ಚ ದಿನ ದಿನಕ್ಕೆ ಹೆಚ್ಚಿದೆ ಎಂದು ಅವನಿಗೆ ಯಾರೂ

ಹೇಳಬೇಕಾಗಿರಲಿಲ್ಲ. ಸಂಬಳದ ಹಣದಲ್ಲಿ ತನ್ನ ಖರ್ಚಿಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದ ಹಣವನ್ನು ತಂದೆಯ ಕೈಗೆ ಕೊಡುತ್ತಿದ್ದ.

"ನೀನೇ ಒಂದು ಅಕೌಂಟ್ ತೆಗೆದು, ಬ್ಯಾಂಕಿನಲ್ಲಿ ಇಡಬಹುದಲ್ಲ" ತಂದೆ ಹೇಳಿದಾಗ, ನಯವಾಗಿ ಉತ್ತರಿಸಿದ್ದ.

"ಅದೆಲ್ಲಾ ಹೇಗೆ ಹೇಗೆ ಮಾಡಬೇಕೋ ನನಗೆ ತಿಳಿಯದು. ಈ ಹಣದಲ್ಲಿ ಮನೆಗೆ ಏನು ಸಾಮಾನು ಬೇಕೋ ಅದನ್ನು ಅಮ್ಮನ್ನ ಕೇಳಿ. ಅವಳಿಗೆ ಏನು ಬೇಕೋ ಅದನ್ನು ತಂದು ಕೊಡಿ."

"ಮನೆಗೇನಪ್ಪಾ. ತರೋ ಸಾಮಾನಿನ ಒಂದು ದೊಡ್ಡ ಲಿಸ್ಟೇ ಇದೆ. ನಾನು ಈ ಮನೆ ತಗೋಳ್ಳೋಕೆ ಅಂತ ಸಾಲ ಮಾಡಿದ್ದೆ. ಆಜಿಯ ಮದುವೆಗೆ ಸ್ವಲ್ಪ ಮತ್ತೆ ಸಾಲ ಮಾಡಿದ್ದೆ... ನಿನಗೆ ಒಪ್ಪಿಗೆಯಾದರೆ, ಸ್ವಲ್ಪ ಸ್ವಲ್ಪ ಹಣವನ್ನು ಕಟ್ಟೇನಿ"

"ನಿಮಗೆ ಹೇಗೆ ತೋಚುತ್ತೋ ಹಾಗೇ ಮಾಡಿ ಅಪ್ಪಾ.... ನನ್ನನ್ನು ಕೇಳಲೇ ಬೇಡಿ."

"ಹಾಗಲ್ಲ. ಸಾಲದ ಹೊರೆ ಕಡಿಮೆ ಆಗಲಿ ಅಂತ ನಿನ್ನ ಹಣವನ್ನು ಉಪಯೋಗಿಸಿಕೊಂಡರೆ....... ನಿನಗೆ ಏನನ್ನಿಸುತ್ತೋ.......?"

"ನನಗ್ಯಾಕೆ ಏನಾದ್ರು ಅನ್ನಿಸುತ್ತೆ. ನಾನೂ ಈ ಮನೆಯವನೇ. ಮನೆಯ ಕಷ್ಟ ಸುಖಗಳಲ್ಲಿ ನನಗೂ ಸಮಪಾಲು ಇದೇ ತಾನೇ....."

"ನೀನು ತುಂಬಾ ತಿಳುವಳಿಕಸ್ಥನಾಗಿ ಬಿಟ್ಟಿದೀಯಪ್ಪಾ ಸೋಮು, ನಿನ್ನ ಅಮ್ಮ ಏನಂತಾಳೋ.......?"

"ಅಮ್ಮಂಗೆ ನಾನು ಬೇಕಾದ್ರೆ ಹೇಳ್ತೀನಿ. ಸಾಲದ ಹೊರೆ ಕಡಿಮೆ ಆಗುತ್ತೆ ಅಂದರೆ ಅಮ್ಮ ಯಾಕೆ ಬೇಡ ಎಂದಾಳು?"

ಇದ್ದಕ್ಕಿದ್ದಂತೆ ಮಾತುಗಳು ನೆನಪಾಗಿದ್ದವು. ನನ್ನ ಮದುವೆ ಆಗಿ ಹೋದರೆ, ಸಾಲ ಎಲ್ಲಿ ಹಾಗೇ ಉಳಿದು ಬಿಡುತ್ತದೆಯೋ ಅಂತ ಅಮ್ಮನಿಗೆ ಚಿಂತೆ ಇರಬಹುದೇ ಅಂತನ್ನಿಸಿದಾಗ ಪಿಚ್ಚೆನ್ನಿಸಿತ್ತು. ಸಾಲ ಮಾಡಿದ್ದು ಅಪ್ಪ. ಅದನ್ನು ತೀರಿಸಬೇಕಾದದ್ದು ಅವರ ಕರ್ತವ್ಯ. ನಾನು ಅವರಿಗೆ ಸಹಾಯ ಮಾಡ್ತಿದೀವಿ. ಆದರೆ ಹಾಗಂತ ನನ್ನ ಸ್ವಂತ ಜೀವನ ಅಂತ ಒಂದು ಇಲ್ಲವೆ? ಅಮ್ಮ ಇಷ್ಟು ಸ್ವಾರ್ಥಿಯಾದಳೇ? ಅಂತಂದುಕೊಂಡಾಗ ಮನಸ್ಸಿಗೆ ಮುಳ್ಳು ಚುಚ್ಚಿದಂತಾಗಿತ್ತು. ಸ್ವಲ್ಪ ದುಗುಡವೂ ಉಂಟಾಗಿತ್ತು.

ಈ ವಿಷಯ ಅರಿಯದ ಶಾಂತ, ಬೇಗ ಬೇಗ ಅಡಿಗೆಯನ್ನು ಬಿಸಿಮಾಡಿ, ಮಗನನ್ನು ಊಟಕ್ಕೆ ಎಬ್ಬಿಸಿದಳು.

"ಬಾರೋ ಸೋಮು, ಊಟಕ್ಕೆ...... ಅನ್ನ ಆರಿ ಹೋಗುತ್ತೋ......" ಹೆಚ್ಚಿಗೆ ಕರೆಸುಕೊಳ್ಳದೇ ಊಟಕ್ಕೆ ಬಂದು ಕೂತವನನ್ನು ಕಂಡು ಆಕೆಗೆ ಆಶ್ಚರ್ಯ.

"ಅದೇನೋ ಸೋಮು, ತಕ್ಷಣವೇ ಬಂದು ಬಿಟ್ಟೆ..... ಅಷ್ಟು ಹೊಟ್ಟೆ ಹಸಿಯುತ್ತಿತ್ತಾ? ಸಾಯಂಕಾಲ ತಿಂಡೀನ ಸರಿಯಾಗಿ ತಿಂದೆಯೋ ಇಲ್ಲವ್ಹೋ?"

"ಬೇಗ ಮಲಕ್ಕೋತೀನಿ. ಯಾಕೋ ನಿದ್ದೆ ಬರ್ತಿದೆ."

"ಯಾಕೆ ಹುಷಾರಾಗಿದೀಯ ತಾನೇ? ಎನ್ನುತ್ತಾ ಹಣೆಯ ಮೈಮೇಲೆ ಕೈ ಇಡಲು ಬಂದವಳನ್ನು ತಡೆದ."

"ಹುಷಾರಾಗಿದೀನಿ. ಬೇಗ ಬೇಗ ಬಡಿಸು.." ಮಗ ಎಂದೂ ಹೀಗೆ ಒರಟಾಗಿ ಮಾತನಾಡಿದವನಲ್ಲ ಎನ್ನುವುದನ್ನು ತಂದೆ ತಾಯಿ ಇಬ್ಬರೂ ಗಮನಿಸಿದರು. ಮುಖ ಮುಖ ನೋಡಿಕೊಂಡರು. ಅವನು ತಲೆ ಎತ್ತಿರಲಿಲ್ಲ.

ಮೌನವಾಗಿ ಊಟ ಮಾಡುತ್ತಿದವನನ್ನೇ ಆತಂಕದಿಂದ ನೋಡಿ ಗಂಡನ ಕಡೆ ತಿರುಗಿದಳು. ರಾಮಸ್ವಾಮಿ ತನ್ನ ಪಾಡಿಗೆ ತಾನು ತನ್ನ ಊಟದಲ್ಲಿ ಮಗ್ನನಾಗಿದ್ದ.

"ಪುಣ್ಯಾತ್ಮರಪ್ಪಾ. ಅಕ್ಕ ಪಕ್ಕ ಕೂಡಾ ನೋಡದೇ ತಮ್ಮ ತಟ್ಟೆ ಮಾತ್ರ ನೋಡಿಕೊಂಡು ಊಟ ಮಾಡ್ತಿದಾರಲ್ಲ" ಎಂದು ಸಿಡಿಮಿಡಿಗೊಂಡಳು.

"ಯಾಕೋ ಸೋಮು ಸರಿಯಾಗಿ ಊಟಾನೆ ಮಾಡ್ತಿಲ್ಲವಲ್ಲೋ.....?"

"ತಿಂದೆನಲ್ಲಮ್ಮಾ..... ಇನ್ನೆಷ್ಟು ತಿನ್ನೋದು......?" ಅವನೂ ರೇಗಿದ.

"ಮಾತು ಮಾತಿಗೂ ಅಪ್ಪ ಮಗ ಇಬ್ಬರೂ ರೇಗ್ತೀರಪ್ಪಾ..... ಇದ್ದಕ್ಕಿದ್ದಂತೆ ಏನಾಗುತ್ತೋ......?"

"ಆ ಮಾತಿಗೆ ಉತ್ತರಿಸದೇ ಸೋಮು ಊಟ ಮುಗಿಸಿ ಎದ್ದ. ಶಾಂತ ಗಂಡನ ಕೈ ತಿವಿದಳು." ಏನಾಯ್ತು ನಮ್ಮ ಸೋಮುಗೆ? ಇದ್ದಕ್ಕಿದ್ದ ಹಾಗೇ ಮಂಕಾಗಿದಾನಲ್ಲ?

"ಏನಿಲ್ಲ. ಸದಾ ನೀನು ಅವನನ್ನೇಕೆ ಹಾಗೆ ನೋಡ್ತೀಯ? ಏನೋ ಆಯಾಸವಿರಬಹುದು. ಆಫೀಸಿನ ಕೆಲಸಗಳಲ್ಲಿ ಏನಾದರೂ ಏರುಪೇರುಗಳಾದ್ರೂ ಮನಸ್ಸು ಕೆಟ್ಟಿರುತ್ತೆ....."

"ಚಿಕ್ಕೋನು ಪುಟ್ಟೋನು, ಆಫೀಸ್ನಲ್ಲಿ ಇವನೇನು ಹಿರಿಯ ಅಧಿಕಾರಿಯಲ್ಲ. ನಾಲ್ಕಾರು ಜನಗಳ ಜೊತೆ ಕೆಲಸ ಹಂಚಿಕೊಂಡು ಮಾಡೋನು... ಮನ ಕೆಡುವಂತಹ ಪ್ರಸಂಗ ಏನಿರುತ್ತೆ?"

"ಅದೆಲ್ಲಾ ನಿನಗೆ ತಿಳಿಯೋಲ್ಲ ಶಾಂತು. ಹಿರಿಯ ಅಧಿಕಾರಿ ಏನಾದ್ರು ಒಂದ್ಮಾತು ಆಡಿದರೂ, ನಾಲ್ಕಾರು ದಿನಗಳು ಬೇಕಾಗುತ್ತೆ, ಕೆಟ್ಟ ಮನಸ್ಸು ಸರಿ ಹೋಗಬೇಕಾದ್ರೆ..."

"ಈ ಎರಡು ವರ್ಷಗಳಲ್ಲಿ ಒಂದು ದಿನವೂ ಹೀಗೆಲ್ಲಾ ಮನಸ್ಸು ಕೆಡಿಸಿಕೊಂಡಂತೆ ಅನ್ನಿಸಿಲ್ಲ. ಏನಾಯ್ತು ಅಂತ ನಾನು ಕೇಳಿಯೇ ಬಿಡ್ತೀನಿ."

"ಬೇಡ ಶಾಂತು..... ಅದನ್ನೆಲ್ಲ ನೀನು ಕೇಳಬಾರದು."

"ಹಾಗಾದ್ರೆ ನೀವೇ ಕೇಳಿ...."

"ನಾನೂ ಕೇಳುಲ್ಲ, ನೀನೂ ಕೇಳಕೂಡದು. ಅವನೇನು ಸಣ್ಣ ಮಗುವಲ್ಲ. ಅವನ ಜವಾಬ್ದಾರಿ ಅವನಿಗೆ ತಿಳಿಯುವ ವಯಸ್ಸಾಗಿದೆ. ಈ ವಯಸ್ನಲ್ಲಿ ಏನಾದರೂ 'ಹೇಳುಕ್ಕೆ ಕೇಳುಕ್ಕೆ ನನಗ್ಯಾರೂ ಇರಲಿಲ್ಲ. ನಾನಾಗಿಯೇ ಎಲ್ಲಾ ತಿಳಿದುಕೊಂಡಿದ್ದೆ."

"ನಿಮಗಾದ್ರೆ ಅಪ್ಪ ಅಮ್ಮ ಯಾರಿದ್ರು? ಸೋಮುಗೆ ತಿಳುವಳಿಕೆ ಹೇಳುಕ್ಕೆ ನಾವುಗಳು ಇದೀವಿ."

"ನಮ್ಮಪ್ಪ ಅಮ್ಮ ಇದ್ದಿದ್ರೂ, ಅವರು ಹೇಳುವ ತಿಳುವಳಿಕೆ ನನಗೆ ರುಚಿಸುವುದಿಲ್ಲ. ಹಾಗೇ, ನಾವು ಹೇಳುವ ತಿಳುವಳಿಕೆ ಮಾತೆಲ್ಲ ಸೋಮುಗೆ ರುಚಿಸುವುದಿಲ್ಲ. ಅವನಾಗಿಯೇ ಎಲ್ಲವನ್ನು ಅರ್ಥ ಮಾಡಿಕೊಳ್ಳುವಷ್ಟು ತಿಳುವಳಿಕೆ ಅವನಿಗಿದೆ. ನಾವು ಅದನ್ನೆಲ್ಲಾ ಕೇಳುವುದು ಶುದ್ಧ ತಪ್ಪಾಗುತ್ತೆ."

"ನೀವು ಯಾವತ್ತು ಅಷ್ಟೇ. ಏನನ್ನಾದರೂ, ಕೇಳಿದರೆ ಸರಿಯಾಗಿ ಉತ್ತರ ಕೊಟ್ಟಿದೀರಾ?" ಹಂಗಿಸಿ ನುಡಿದಳು ರಾಮಸ್ವಾಮಿ ಅವಳ ಬೆನ್ನ ಮೇಲೆ ಕೈ ಇಟ್ಟ.

"ಆಚಿ ಮದುವೆಯಾಗಿ ಗಂಡನ ಮನೆಯಲ್ಲಿ ಹಾಯಾಗಿದಾಳೆ. ಸೋಮನಿಗೂ ಆದಷ್ಟು ಬೇಗ ಮದುವೆ ಮಾಡಿ ಬಿಡೋಣ. ಆಗ ನಮ್ಮ ಜವಾಬ್ದಾರಿ ತೀರುತ್ತೆ. ಅವರವರ ಸಂಸಾರವನ್ನು ಅವರುಗಳೇ ನೋಡಿಕೊಳ್ಳುವಷ್ಟು ಜವಾಬ್ದಾರಿ. ಅವರುಗಳಿಗೆ ಖಂಡಿತಾ ಇರುತ್ತೆ. ನಾವಿಬ್ರೂ ಮುದುಕರಾಗಿದೀವಿ. ನಮ್ಮ ಮಾತುಕತೆಗಳಲ್ಲಿ ಅವನಿಗೆ

ಯಾವ ಆಸಕ್ತಿ ಇರುತ್ತೆ! ಅವನ ಮಾತುಕತೆಗಳಲ್ಲಿ ಪಾಲುಗೊಳ್ಳುವ ಸಂಗಾತಿ ಅವನಿಗೆ ಬೇಕು. ಆಗ ಈ ಉದಾಸೀನತೆ ನಿರಾಸಕ್ತಿ ಯಾವುದೂ ಇರುಲ್ಲ...."

"ಮದುವೆ ಅಂತಂದರೆ ಸುಮ್ಮನೇ ಆಯ್ತೇ?... ಹಣಕಾಸು, ಒಡವೆ ವಸ್ತು, ಎಲ್ಲಾ ತಯಾರಿರಬೇಕು. ಸಾಲ ಸೋಲವೇ ಇನ್ನೂ ಬಾಕಿ ಉಳಿದಿದೆ...... ಮದುವೆಗೆ ಏನು ಅವಸರ ಅಂತ?"

"ಎಲ್ಲಾದಕ್ಕೂ ಒಂದು ಸಮಯಾ ಅಂತಿರುತ್ತೆ ಶಾಂತಾ...... ಅವಸರದ ಪ್ರಶ್ನೆಯೇ ಇಲ್ಲ. ನಾವು ಆಚಿಯ ಮದುವೆ ಮಾತುಕತೆ ಬಂದಾಗ ಹಣವನ್ನೂ ಒದಗಿಸುವ ಚಿಂತೆ ನಮಗಿತ್ತು. ಆದರೆ ಮಾರ್ಗವೊಂದು ಇದ್ದೇ ಇತ್ತು. ಹಾಗೇ ಈಗಲೂ ಒಂದು ಮಾರ್ಗ ಸಿಕ್ಕೇ ಸಿಗುತ್ತೆ. ಅಲ್ಲದೇ ಈಗ ನಾವು ಹೆಣ್ಣಿನವರಲ್ಲ. ಗಂಡಿನ ಕಡೆಯವರು ನಮ್ಮ ಖರ್ಚೇನಿರುತ್ತೆ?"

"ನಮ್ಮ ಅಂತಸ್ತಿಗೆ ತಕ್ಕಂತೆ, ಒಡವೆ, ಜವಳಿ, ಉಡುಗೊರೆಗಳನ್ನು ಖರೀದಿಸಬೇಡವೆ?"

"ಅದೆಲ್ಲಾ ಹೇಗೋ ಆಗುತ್ತೆ ಬಿಡು ಶಾಂತು..... ಮೊದಲು ನಮ್ಮ ಸೋಮುಗೆ ತಕ್ಕಂತಹ ಹುಡುಗಿಯನ್ನು ಹುಡುಕು..."

"ನನಗ್ಯಾಕೋ ಭಯವಾಗುತ್ತೇರಿ......"

"ಆಚಿಯ ಮದುವೇಲಿ ನಿನಗೆ ಭಯವಿರಲಿಲ್ಲ. ನಮ್ಮ ಮನೆಯಲ್ಲಿ ಮುದ್ದಾಗಿ ಬೆಳೆದ ಮಗಳನ್ನು ಯಾರೋ ಈ ಮೊದಲು ಪರಿಚಿತರಲ್ಲದವರ ಮನೆ ತುಂಬಿಸಿ ಕಳಿಸಿಕೊಡಲು ಭಯವಾಗಲಿಲ್ಲ. ಈಗೆಂಥ ಭಯ?"

"ಎಂಥಾ ಹುಡುಗಿ ಸಿಗ್ತಾಳೋ.... ಮುಂದೇನೇನಾಗುತ್ತೋ ಅಂತ ನೆನೆಸಿಕೊಂಡರೇ ಭಯ......" ಕೈ ಕೈ ಜೋಡಿಸಿದಳು.

"ಯಾರಾದ್ರೂ ಕೇಳಿಸ್ಕೊಂಡ್ರೆ ನಗ್ತಾರೆ. ಆಚಿ ನಮ್ಮ ಮಗಳು. ಅವಳ ಗುಣ ನಡತೆ ನಮಗೆ ಗೊತ್ತಿತ್ತು. ಅದರಿಂದ ನಮಗೆ ಧೈರ್ಯವಿತ್ತು. ಹಾಗೇ ಬರೋ ಹುಡುಗಿಯೂ ನಮ್ಮ ಆಚಿಯಂತೆಯೇ ತಾನೇ. ನಮ್ಮ ಪದ್ಧತಿ, ಸಂಪ್ರದಾಯಗಳ ಬಗ್ಗೆ ನಿಮಗೆ ಹೇಗೆ ಬೇಕೋ ಹಾಗೆ ತಿದ್ದಿಕೊಂಡರಾಯ್ತು. ಸೋಮು ನಮ್ಮ ಮಗ, ಬರುವ ಸೊಸೆ ನಮ್ಮ ಮಗಳಾಗಿರುತ್ತಾಳೆ ಅಂತ ಹಾರೈಸೋಣ " ರಾಮಸ್ವಾಮಿ ವಿಶ್ವಾಸವನ್ನು ಶಾಂತಳಲ್ಲಿ ತುಂಬಲು ನೋಡಿದ. ಅವಳನ್ನು ತನ್ನ ಭುಜಕ್ಕೆ ಒರಗಿಸಿಕೊಂಡ. ಆದರೆ ಶಾಂತಳ ಆತಂಕ ಕಡಿಮೆ ಆಗಿರಲಿಲ್ಲ. ಗಂಡನ ಅನುನಯದ ಮಾತುಗಳು ಅವಳಿಗೆ ಹಿತವನ್ನುಂಟು ಮಾಡಲಿಲ್ಲ. ನಾನು ತಾಯಿ... ನನ್ನ ಆತಂಕ ಇವರಿಗೆ ಅರ್ಥವಾಗುವುದಿಲ್ಲ. ಒಂದಲ್ಲ ಒಂದು ದಿನ ಸೋಮು ಮದುವೆಯಾಗಲೇ ಬೇಕು. ಆದರೆ ಅವನು ಎಷ್ಟು ಬೇಗ ಮದುವೆಯಾಗ್ತಾನೋ ಅಷ್ಟು ಬೇಗ ನನ್ನಿಂದ ದೂರ ಆಗ್ತಾನೆ, ಅವನ ಹೆಂಡತಿಗೆ ಹತ್ತಿರವಾಗ್ತಾನೆ. ಈ ಮಾತು ಅವಳಿಗೆ ಅಪ್ರಿಯ. ತಾನು ಹೊತ್ತು ಹೆತ್ತು ಸಾಕಿ ಸಲಹಿದ ಮಗನನ್ನು ಅಷ್ಟು ಸುಲಭವಾಗಿ ಸೊಸೆಯ ಕೈಗೆ ಒಪ್ಪಿಸಿಕೊಡಲು ಅವಳು ಸಿದ್ಧಳಾಗಿರಲಿಲ್ಲ.

ಆ ರಾತ್ರಿ ಎಷ್ಟೋ ಹೊತ್ತಿನವರೆಗೂ ಶಾಂತಳಿಗೆ ನಿದ್ದೆ ಬರಲಿಲ್ಲ. ಮಗನನ್ನು ಆದಷ್ಟು ದಿನ ತನ್ನ ಮಗನನ್ನಾಗಿಯೇ ಇಟ್ಟುಕೊಳ್ಳುವ ಹಂಬಲ ಅವಳದು. ಆತಂಕದಿಂದ ಅವಳ ನಿದ್ದೆ ದೂರವಾಗಿತ್ತು.

ಎಂದಿನಂತೆ ಅಲಾರಾಂ ಹೊಡೆದೊಡನೆ ಬಂದು ಮಗನನ್ನು ಎಬ್ಬಿಸಿದಳು. "ಸೋಮು ಏಳೋ.... ಅಲಾರಾಂ ಹೊಡೀತು....." ಈ ಕೆಲಸ ಅವಳಿಗೆ ಬೇಸರದ್ದೇನಲ್ಲ.

"ಹೂಂ ನಮ್ಮ ಎದ್ದೆ. ಐದೇ ನಿಮಿಷ. ಎದ್ದೇ ಬಿಡ್ತೀನಿ"

"ಏಳಪ್ಪಾ....... ನನಗಿನ್ನೂ ತುಂಬಾ ಕೆಲಸವಿದೆ...... ಸುಮ್ಮನೇ ಆಫೀಸಿಗೆ ಹೊತ್ತು ಮಾಡ್ಕೋತೀಯ......"

"ನೀನು ಹೋಗಿ ನಿನ್ನ ಕೆಲಸ ನೋಡ್ಕೋ ಶಾಂತ. ನಾನು ಅವನನ್ನು ಎಬ್ಬಿಸ್ತೀನಿ" ರಾಮಸ್ವಾಮಿ ನುಡಿದ.

"ನಿಮಗೆ ಎಬ್ಬಿಸೋ ವಿಧಾನ ಗೊತ್ತಿಲ್ಲ. ಅವನು ಮುಸುಕು ಜೀರಿ ಮಲಗಿದ್ರೆ ಕುಂಭಕರ್ಣ. ಮುಟ್ಟಿ ಎಬ್ಬಿಸಬೇಕು."

"ನನಗೆ ಗೊತ್ತು. ನೀನು ಹೋಗು. ಸೋಮು ಏಳಪ್ಪಾ....." ತಂದೆ ಮೈ ಮುಟ್ಟಿ ಎಬ್ಬಿಸಿದಾಗ, ಸೋಮು ಎದ್ದು ಕೂತ. ಸಮೀಪದಲ್ಲಿ ಅಪ್ಪ ನಿಂತಿದಾರೆ. ಮುಗುಳ್ನಗುತ್ತಾ, "ಗುಡ್ ಮಾರ್ನಿಂಗ್" ಎಂದ ರಾಮಸ್ವಾಮಿ.

"ಗುಡ್ ಮಾರ್ನಿಂಗ್ ಅಪ್ಪಾ..... ನಾನೇ ಏಳ್ತಿದ್ದೆ....." ಎಂದ ಸಂಕೋಚದಿಂದ.

"ಪರವಾಗಿಲ್ಲ ಐಡಪ್ಪಾ...... ಇವತ್ತು ನಿಮ್ಮಮ್ಮನ ಕೆಲಸವನ್ನು ನಾನು ವಹಿಸಿಕೊಂಡಿದೀನಿ. ಸಧ್ಯದಲ್ಲೇ ನೀನು ಮನಸ್ಸು ಮಾಡಿದರೆ, ಈ ಕೆಲಸವನ್ನು ನನ್ನ ಸೊಸೆ ವಹಿಸಿಕೊಳ್ತಾಳೆ" ತಕ್ಷಣಕ್ಕೆ ಅಪ್ಪನ ಮಾತು ಅವನಿಗೆ ಅರ್ಥವಾಗಲಿಲ್ಲ. ಅರ್ಥವಾದೊಡನೆ ಮುಖ ಕೆಂಪಾಗಿತ್ತು.

"ನಾಚ್ಕೋ ಬೇಡಯ್ಯಾ..... ಇವತ್ತೇ ನನ್ನ ಸೊಸೆ ಬರುತ್ತಿಲ್ಲ. ಆದರೆ ಆದಷ್ಟು ಬೇಗ ನಿನ್ನ ಮನಸ್ನಲ್ಲಿ ಏನಿದೆ ಅಂತ ಹೇಳು...... ನಮಗೆ ತಕ್ಕ ಸೊಸೇನ, ನಿನಗೆ ತಕ್ಕ ಹೆಂಡತಿಯನ್ನ ಹುಡುಕಿ, ಮನೆ ತುಂಬಿಸಿಕೊಳ್ಳುವ ಜವಾಬ್ದಾರಿ ನನಗಿರಲಿ" ಸೋಮು ನಾಚಿದ. ಆದರೂ ಅವನಿಗೆ ಏನೋ ಖುಷಿಯಾಗಿತ್ತು. ಅಪ್ಪ ಗುಡ್ ಮಾರ್ನಿಂಗ್ ಹೇಳಿ ಎಬ್ಬಿಸಿದಾರೆ.... ಈ ದಿನ ಖಂಡಿತಾ ಖುಷಿಕೊಡುವ ವಿಷಯ ಜರುಗಲಿದೆ ಅಂತೆನ್ನಿಸಿತ್ತು.

ನಿತ್ಯದಂತೆ ಸ್ನಾನ ಇತ್ಯಾದಿ ಮುಗಿಸಿ, ತಿಂಡಿ ಕಾಫಿಯ ನಂತರ ತಾಯಿಗೆ ಮುಗುಳ್ನಗುತ್ತಾ ಬರ್ತೀನಮ್ಮಾ ಎಂದು ಹೇಳಿ ಕೈಯಾಡಿಸಿ, ಬಾಗಿಲನ್ನು ದಾಟಿದ. ಮಗನಿಗೆ ತನ್ನ ಮೇಲಿನ ಅಸಮಧಾನ ಕಡಿಮೆ ಆಗಿದೆ ಎಂದು ಶಾಂತಳಿಗೆ ನೆಮ್ಮದಿ. ಸೀಟಿ ಹೊಡೆಯುತ್ತಾ ಬೀದಿಗಿಳಿದ. ಮಗನಿಗೆ ಕೈ ಬೀಸಿದ ರಾಮಸ್ವಾಮಿ, ಹೆಂಡತಿಯ ಕಡೆ ತಿರುಗಿ ಗೆಲುವಿನ ನಗೆಯನ್ನು ನಕ್ಕ.

* * *

ಆಫೀಸನ್ನು ತಲುಪಿದ ಕೆಲವೇ ಸಮಯಗಳಲ್ಲಿ ಸುಮಂತನಿಗೆ ತನ್ನ ಮೇಲಧಿಕಾರಿಯಿಂದ ಕರೆ ಬಂದಿತ್ತು. ಇವನನ್ನು ಕಂಡೊಡನೆಯೇ ಅವರು ಮುಗುಳ್ನಕ್ಕು 'ಕಂಗ್ರಾಟ್ಸ್' ಎಂದರು. ಇವನು ಕಕ್ಕಾಬಿಕ್ಕಿ.

"ಮಿ. ಸುಮಂತ್ ನಿಮಗೆ ಬಡ್ತಿ ಸಿಕ್ಕಿದೆ. ಹಾಗೂ ನಿಮ್ಮನ್ನು ನಮ್ಮ ಹೊಸ ಬ್ರ್ಯಾಂಚ್‌ಗೆ ವರ್ಗ ಮಾಡಿದ್ದಾರೆ" ಎಂದರು ಕೈ ಕುಲುಕಿ. ಇವನಿಗೆ ಅನಿರೀಕ್ಷಿತ ಹೊಸ ಸುದ್ದಿ. 'ಥ್ಯಾಂಕ್ಸ್' ಎಂದು ಹೇಳಿ, ವಿವರಗಳನ್ನೊಳಗೊಂಡ ಪತ್ರಗಳನ್ನು ತೆಗೆದುಕೊಂಡು ಹೊರ ಬಂದ. ವಿಷಯ ತಿಳಿದ ಸಹೋದ್ಯೋಗಿಗಳು ಕೈ ಕುಲಕಿ "ಕಂಗ್ರಾಜ್ಯುಲೇಷನ್ಸ್" ಎಂದು ಹಾರೈಸಿದರು.

ಅಪ್ಪ 'ಗುಡ್ ಮಾರ್ನಿಂಗ್' ಹೇಳಿ ಎಬ್ಬಿಸಿದರು ಎನ್ನುವ ಮಾತು ನೆನಪಾಯಿತು. ತಕ್ಷಣವೇ ತಿಳಿಸಬೇಕೆಂಬ ಮನಸ್ಸಾದರೂ, ತಕ್ಷಣಕ್ಕೆ ಹೋಗುವಂತಿಲ್ಲ. ಮನೆಯಲ್ಲಿ ಫೋನಿಲ್ಲ. ಉತ್ಸುಕತೆಯಿಂದ ಅರ್ಧದಿನ ರಜ ಹಾಕಿ ಮನೆಗೆ ಬಂದ. ಊಟ ಮುಗಿಸಿ,

ಗೊರಕೆ ಹೊಡೆಯುತ್ತಾ ಮಲಗಿದ್ದ ರಾಮಸ್ವಾಮಿಗೆ ಇದ್ದಕ್ಕಿದ್ದಂತೆ ಮಗ ಎಂದೂ ಹೀಗೆ ಬರದಿದ್ದವನು ಮನೆಗೇಕೆ ಬಂದನೋ ಎನ್ನುವ ಗಾಬರಿ. ಕಣ್ಣುಜ್ಜಿ ಕೊಂಡು ಎದ್ದು ಕುಳಿತ. ಶಾಂತಳಿಗೂ ಏನೋ ಕೌತುಕ. ಮಗನ ಹಸನ್ಮುಖವನ್ನು ಕಂಡು ನೆಮ್ಮದಿ ಎನಿಸಿದರೂ ಪ್ರಶ್ನಿಸಿದಳು.

"ಏನೋ ಸೋಮು, ಎಂದೂ ಊಟಕ್ಕೆ ಬರದಿದ್ದವನು ನೀನು, ಏನು ವಿಷಯ?"

"ಏನಿಲ್ಲಮ್ಮ..... ಅಪ್ಪನ್ನು ಎಬ್ಬಿಸು. ನಿಮ್ಮಿಬ್ಬರಿಗೂ ಒಂದು 'ಗುಡ್ ನ್ಯೂಸ್' ಅಂತಂದ. ರಾಮಸ್ವಾಮಿ ಎದ್ದು ಹೊರಗೆ ಬಂದ.

"ಅಪ್ಪಾ. ನನ್ನನ್ನು ಪ್ರಮೋಷನ್ ಮೇಲೆ, ಬೇರೆ ಬ್ರ್ಯಾಂಚ್‌ಗೆ ವರ್ಗಮಾಡಿದ್ದಾರೆ....."

"ಹೌದೇನಯ್ಯಾ...... ವೆರಿಗುಡ್... ಶಾಂತೂ ಏನಾದ್ರೂ ಸಿಹಿ ಮಾಡು...."

"ಮಾಡ್ತೀವಿ. ಮಾಡ್ದೇ ಇರ್ತೀನ್ಯೆ? ಬ್ರ್ಯಾಂಚ್ ಅಂತಂದ್ರೆ? ಇದೇ ಊರ್ನಲ್ಲೇ ತಾನೇ....?"

"ಹೂಂ. ನಮ್ಮ ಆದರೆ ಆಫೀಸು ಇನ್ನು ಸ್ವಲ್ಪ ಹತ್ತಿರವಾಗುತ್ತೆ. ಹೋಗಿ ಬರಲು ಕಷ್ಟವೇನಿಲ್ಲ."

"ನಿನಗೆ ಒಳ್ಳೇದೇ ಆಯ್ತು. ಇನ್ನೊಂದೈದು ನಿಮಿಷ ನಿಧಾನವಾಗಿ ಏಳಬಹುದು..." ತಂದೆ ತಮಾಷೆ ಮಾಡಿದಾಗ ಅವನು ಬೇಸರಿಸಲಿಲ್ಲ. ಲಘುವಾಗಿ ನಕ್ಕ. ತಾಯಿ ಅತ್ತ ಅಡಿಗೆ ಮನೆಯ ಕಡೆ ನಡೆದ ನಂತರ ತಂದೆಯ ಕಡೆ ತಿರುಗಿದ.

"ಫ್ರೆಂಡ್ಸ್‌ಗೆ, ಪಾರ್ಟಿಕೊಡಿಸೋಣ ಅಂತ, ಸ್ವಲ್ಪ ದುಡ್ಡು ಬೇಕಾಗಿತ್ತು.. ಕೊಡ್ತೀರಾ?"

"ಪಾರ್ಟಿ ಯಾವಾಗ?"

"ನಾಳೆ ಸಾಯಂಕಾಲ. ಎಲ್ಲರನ್ನು ಆಫೀಸಿನಿಂದ ಹಾಗೇ ಯಾವುದಾದರೂ ಹೋಟೆಲ್ಲಿಗೆ ಕರೆದುಕೊಂಡು ಹೋಗ್ತೀನಿ."

"ಒಳ್ಳೇದು ತಗೋ" ಎನ್ನುತ್ತಾ ಮನೆಯ ಖರ್ಚಿಗೆಂದು ಇಟ್ಟುಕೊಂಡಿದ್ದ ಹಣದಲ್ಲಿ ಐನೂರು ರುಪಾಯಿಗಳನ್ನು ಎಣಿಸಿಕೊಟ್ಟರು.

"ಸಾಕಾಗುತ್ತೆ ಅಲ್ವೇನಪ್ಪಾ...."

"ಓ ಬೇಕಾದಷ್ಟು. ಹೆಚ್ಚಿಗೆ ಫ್ರೆಂಡ್ಸ್ ಇಲ್ಲ. ಅಲ್ಲದೇ ನಾನೇನೂ ಭಾರಿ ಹೋಟೆಲ್ಲಿಗೆ ಕರೆದುಕೊಂಡು ಹೋಗಲ್ಲ. ಅಲ್ಲದೇ ಇನ್ನು ಒಂದಿಬ್ಬರಿಗೆ ಪ್ರಮೋಷನ್ ಸಿಕ್ಕಿದೆ. ಅವರೂ ನಾನು ಎಲ್ಲರೂ ಒಟ್ಟಿಗೇ ಸೇರಿಕೊಂಡು ಪಾರ್ಟಿ ಕೊಡಿಸ್ತೀವಿ. 'ಇದ್ದಕ್ಕಿದ್ದಂತೆ ಭಾವುಕನಾಗಿ, ಬಾಗಿ ತಂದೆಯ ಕಾಲಿಗೆ ನಮಸ್ಕರಿಸಿದ.' ಅಪ್ಪಾ ಆಶೀರ್ವಾದ ಮಾಡೀಪ್ಪಾ...."

"ಹೀಗೇ ಬೇಗ ಬೇಗ ಪ್ರಮೋಷನ್‌ಗಳು ಸಿಕ್ಕು ಮುಂದೆ ಮುಂದೆ ಬಾ..... ಆದಷ್ಟು ಬೇಗ ನಮ್ಮ ಮನೆಗೆ ಸೊಸೆ ಬರಲಿ" ನಗುತ್ತಾ ಆಶೀರ್ವದಿಸಿದರು. ಹಾಗೇ ನಿಮ್ಮ ಅಮ್ಮನಿಗೂ ನಮಸ್ಕಾರ ಮಾಡಿಬಿಡು.

"ಹೂಂ ನಪ್ಪಾ" ಅನ್ನುತ್ತಾ ಅಡಿಗೆ ಮನೆಯೊಳಗೆ ಬಂದ.

"ಕೈಕಾಲು ತೊಳೆದು ಕೊಂಡ್ಯಾ.....? ಅಥವಾ ಹಾಗೇ ಬಂದು ಬಿಟ್ಟೆಯೋ?"

"ಅಯ್ಯೋ ಮರತೇ ಹೋಯ್ತು. ಈಗ ತೊಳೆದುಕೊಂಡು ಬರ್ತೀನಿ." ಎನ್ನುತ್ತಾ ಬಚ್ಚಲು ಮನೆಯ ಕಡೆ ನಡೆದ. ಹಿಂದೆಯೇ ಬಂದಿದ್ದ ರಾಮಸ್ವಾಮಿ ನುಡಿದ.

"ನಿನಗೆ ನಮಸ್ಕಾರ ಮಾಡೋಕೆ ಅಂತ ಬಂದಿದ್ದ ನಿನಗಂತೂ ತಿಳಿಯೋದೇ ಇಲ್ಲ."

"ಕಾಲು ತೊಳೆದುಕೊಂಡು ಬಂದು ಮೊದಲು ದೇವರಿಗೆ ನಮಸ್ಕಾರ ಮಾಡಲಿ. ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿಟ್ಟಿದೀನಿ"

"ಅಂತೂ ನೋಡು. ನಮ್ಮ ಸೋಮನೂ ದೊಡ್ಡೋನಾಗಿ ಬಿಟ್ಟ" ರಾಮಸ್ವಾಮಿ ಹೆಮ್ಮೆಯಿಂದ ಹೇಳಿಕೊಂಡ. ಶಾಂತಳೂ ಹೆಮ್ಮೆಯಿಂದ ಬೀಗಿದಳು. ಮತ್ತೆ ಒಳಬಂದ ಮಗನಿಗೆ ಆಜ್ಞೆ ಮಾಡಿದಳು.

"ಮೊದಲು ದೇವರಿಗೆ ನಮಸ್ಕಾರ ಮಾಡು" ಸೋಮ ದೇವರಿಗೆ ನಮಸ್ಕರಿಸಿ, ತಾಯಿಗೂ ನಮಸ್ಕರಿಸಿದ.

"ಬೇಗ ಸೊಸೆ ಬರುವಂತಾಗಲಿ ಅಂತ ಆಶೀರ್ವಾದ ಮಾಡೇ"

"ಬರ್ತಾಳೆ ಬಿಡಿ. ಬಂದೇ ಎಲ್ಲ ಹೋಗ್ತಾಳೆ? ಮೊದಲು ಆಚಿಗೆ ಕಾಗದ ಬರೆದು ತಿಳಿಸು. ಅವಳಿಗೂ ಸಂತೋಷವಾಗುತ್ತೆ."

"ಹೌದು. ನನಗೆ ಹೊಳೀಲೇ ಇಲ್ಲ."

"ನಿಮಗೆ ಏನು ತಾನೇ ಸರಿಯಾದದ್ದು ಹೊಳೆಯುತ್ತೆ? ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಅನ್ನೋ ಗಾದೇನ ನಿಮಗೇ ಅಂತಲೇ ಮಾಡಿರಬಹುದು. ಮದುವೆಯಾಗಿ ಹೋದದ್ದೇ ಸಾಕು ಅನ್ನೋ ತರಹ ಮರತೇ ಬಿಟ್ಟಿದೀರಿ...... ಅವಳನ್ನ"

"ಏನೇನೋ ಆಡಬೇಡ. ನಾನು ಆಚಿಯ ತಂದೆ. ಮಗಳನ್ನು ಮರೆಯೋಕೆ ಸಾಧ್ಯಾನ? ತೋಚಿದ್ದನ್ನ ಆಡಿ ಬಿಡ್ತೀಯಲ್ಲ" ರೇಗಿದ.

"ಸರಿ, ಸರಿ ಅವಳಿಗೆ ಟೆಲಿಗ್ರಾಂ ಕೊಡಿ. ಊರಿಗೆ ಬರಲಿ" ನಾಲ್ಕುದಿನ ಮಕ್ಕಳೊಡನೆ ಇಲ್ಲಿರಲಿ.

"ಸ್ಕೂಲು, ಪರೀಕ್ಷೆ ಎಲ್ಲಾ ಬಿಟ್ಟು ದಿಢೀರನೇ ಬರೋಕಾಗುತ್ತೇನಮ್ಮಾ. ನೀನೂ ಸರಿಯಾಗಿದೀಯ" ಸೋಮು ಆಕ್ಷೇಪಣೆ ಮಾಡಿದ.

"ಟೆಲಿಗ್ರಾಂ ಏನೂ ಬೇಡ. ಸುಮ್ಮನೇ ಗಾಬರಿ ಆಗುತ್ತೆ. ವಿಶದವಾಗಿ ಪತ್ರ ಬರಿ. ರಜ ಬಂದಾಗ ಖಂಡಿತಾ ಬಂದು ಹೋಗು ಅಂತ ಬರದ್ರೆ ಸಾಕು. ಹೇಗೂ ರಜದಲ್ಲಿ ಬಂದು ಹೋಗ್ತಾಳಲ್ಲ."

"ಅವಳಿಗೆ ತಾನೇ ಬೇರೆ ಯಾವ ಜಾಗ ಇದೆ? ರಜದಲ್ಲಿ ಇಲ್ಲಿಗೆ ಬರದೇ ಇನ್ನೆಲ್ಲಿಗೆ ಹೋಗಬೇಕು ಆ ಮಕ್ಕಳು!"

"ಬಿಟ್ನಲ್ಲಿ ನನ್ನ ಮಾತಲ್ಲಿ ನೀನು ಒಂದು ಕೊಂಕು ತೆಗೀದೇ ಇದ್ದರೆ ನಿನಗೆ ಸಮಾಧಾನವೇ ಇಲ್ಲ. ನಿನ್ನ ಸೊಸೆನೇ ನಿನ್ನ ಬಾಯಿ ಮುಚ್ಚಿಸಬೇಕು."

ಸೋಮು ಎದ್ದು ಒಳರೂಮಿಗೆ ಹೋದ. ಸೊಸೆ ಮಾತನ್ನೆತ್ತಿದಿರಿ ಅವನು ಎದ್ದು ಹೋದ.

"ಎಲ್ಲೋ ನಾಚಿಕೆ ಆಗಿರಬೇಕು. ಮೊದಲನೇ ಮದುವೆ ನೋಡು."

"ನಿಮಗೆ ಎಲ್ಲಾ ತಮಾಷೆ. ಅವನೇನು ಎರಡನೇ ವರನಷ್ಟು ದೊಡ್ಡವನಾಗಿ ಬಿಟ್ನಾ?"

"ಇಲ್ಲ ಕಣೇ.. ಅದಕ್ಕೇ ಅವನಿಗೆ ನಾಚಿಕೆ. ನನ್ನ ಮದುವೆ ಆದಾಗ, ನಾನು ಇವನಿಗಿಂತ ದೊಡ್ಡವನಾಗಿದ್ದೆ. ಅದಕ್ಕೆ ನನಗೆ ನಾಚಿಕೆ ಸಂಕೋಚ ಒಂದೂ ಇರಲಿಲ್ಲ. ನಿನಗೆ ಅತ್ತೆ, ಮಾವ, ಅತ್ತಿಗೆ ಮೈದುನ, ನಾದಿನಿ ಎಲ್ಲಾ ನಾನೇ ಆಗಿದ್ದೆ. ನಾಚಿಕೊಂಡಿದ್ರೆ ನಿನ್ನ ಹತ್ತಿರ ಬರೋಕೆ ಆಗ್ತಿರಲಿಲ್ಲ."

"ಸಾಕು. ನಿಮ್ಮ ಮದುವೆ ಪುರಾಣ. ದಿನದಲ್ಲಿ ಒಂದು ದಿನವಾದರೂ ಆ ವಿಷಯವನ್ನು ನೆನೆಸಿಕೊಳ್ಳದಿದ್ರೆ ನಿಮಗೆ ತಿಂದ ಅನ್ನ ಅರಗುಲ್ಲ ಅಂತ ಕಾಣಿಸುತ್ತೆ."

"ನಿಜ ಹೇಳು ಶಾಂತು. ನಮ್ಮ ಆ ಹೊಸ ಜೀವನ ರಸಮಯವಾಗಿರಲಿಲ್ವಾ? ರೋಮಾಂಚನವಾಗಿರಲಿಲ್ವಾ?" ಶಾಂತ ಕೆಂಪಾದಳು.

ಸಮಯ ಸಂದರ್ಭ ಒಂದೂ ತಿಳಿಯುಲ್ಲ ನಿಮಗೆ. ಮದುವೆಯ ವಯಸ್ಸಿಗೆ ಬಂದಿರುವ ಮಗನ ಎದುರಿಗೇ ಹೀಗೆಲ್ಲಾ ಮಾತಾಡ್ತೀರಲ್ಲ.

"ಅದರಲ್ಲಿ ತಪ್ಪೇನು?.... ಅಪ್ಪ ಅಮ್ಮ ಎಷ್ಟು ರಸಿಕರಾಗಿದ್ದರು ಅಂತ ಅವನಿಗೂ ತಿಳೀಲಿ....."

"ರಸಿಕತನ ಬಿಟ್ಟು ಬೇರೆ ಏನೇನಿತ್ತು ಅಂತ ಅವನಿಗೂ ಗೊತ್ತು."

"ಸಂಸಾರ ಅಂದ ಮೇಲೆ, ಎಷ್ಟೋ ಮಾತು ಬರುತ್ತೆ ಹೋಗುತ್ತೆ. ಅದೆಲ್ಲಾ ಯಾವ ದೊಡ್ಡ ವಿಷಯ......?"

"ನಾನು ಸ್ವಲ್ಪ ಬಗಿಯದಾಗಿಲ್ಲದೇ ಇದ್ದಿದ್ದರೆ ಎಲ್ಲಾ ದೊಡ್ಡ ವಿಷಯವೇ ಆಗಿರುತ್ತಿತ್ತು. ಈಗ್ಯಾಕೆ ಆ ಮಾತು. ನನ್ನ ಮಕ್ಕಳ ತಂದೆ ಅಂತ ನಿಮ್ಮನ್ನು ಕ್ಷಮಿಸಿದೀನಿ. ಇಲ್ಲದೇ ಇದ್ದಿದ್ದರೆ....."

"ನಾನು ಯಾವ ತಪ್ಪನ್ನು ಮಾಡಿಲ್ಲ. ನೀನು ಯಾರು ಕ್ಷಮಿಸೋಕೆ? ನೀನೂ ಅಷ್ಟೇ ತಿರುಗೀ ತಿರುಗಿ ಅದೇ ಮಾತಿಗೆ ಬರ್ತೀಯಲ್ಲ. ರವೆಸೀಯ್ತಾ ಇದೆ. ಬೇಗ ಬೇಗ ಸಜ್ಜಿಗೆ ಮಾಡು" ರಾಮಸ್ವಾಮಿ ಮಾತನ್ನು ಕಟ್ ಮಾಡಿ ಹೊರಬಂದ. ಯಾವುದೋ ವಾರಪತ್ರಿಕೆಯನ್ನು ತಿರುವಿ ಹಾಕುತ್ತಿದ್ದ ಸೋಮ ತಂದೆಯ ಕಡೆ ನೋಡಿ ನಸುನಕ್ಕ.

"ನಿಮ್ಮಮ್ಮ ಒಂದು ಜಾತಿಯ ಜಿಗಣೆ ತರಹ...."

"ಏನಾಯ್ತೀಗ?" ಅಸಹನೆಯಿಂದ ಪ್ರಶ್ನಿಸಿದ.

"ಯಾವುದೋ ಹಳೇ ಮಾತು ತೆಗೆದು, ಆಡದೇ ಇದ್ದರೆ ಅವಳಿಗೆ ಸಮಾಧಾನವೇ ಇಲ್ಲ. ಒಂಥರ ದುರಾಭ್ಯಾಸ ಮಾಡಿಕೊಂಡಿದಾಳೆ. ಹೋಗಲಿ ಬಿಡು. ಕಾಗದ ಬರೆದಾಯ್ತಾ?"

"ಬರೀತೀನಿ. ನೀವು ಸಾಯಂಕಾಲ ವಾಕಿಂಗ್‌ಗೆ ಹೋಗೋ ಹೊತ್ತಿಗೆ ಬರೆದು ರೆಡಿ ಮಾಡ್ತೀನಿ. ಪೋಸ್ಟ್ ಮಾಡಿ ಬಿಡಿ"

"ನಾನು ಬಂದುಗಳಿಗೆ ಉರುಳಿರ್ತೀನಿ. ಆಮೇಲೆ ಎಬ್ಬಿಸಿ ಬಿಡು."

"ಈಗ್ಯಾಕೆ ಮತ್ತೆ ಮಲಗಬೇಕು. ಸಜ್ಜಿಗೆ ಆರಿ ತಣ್ಣಗಾಗುತ್ತೆ ಅಷ್ಟೇ. ಬಿಸಿ ಬಿಸಿಯಾಗಿಯೇ ತಿಂದುಬಿಡಿ" ಎನ್ನುತ್ತಾ ಶಾಂತ ಒಳಗಿನಿಂದ ತಿಂಡಿಯ ತಟ್ಟೆಗಳನ್ನು ತಂದಿತ್ತಳು.

"ಖಾರ ಏನೂ ಇಲ್ವಾ?"

"ಉಪ್ಪಿನ ಕಾಯಿ ಬಡಿಸ್ಲಾ?"

"ಚಿಪ್ಸ್, ಪುರಿ ಏನಾದ್ರೂ ಇದ್ದಿದ್ರೆ ಚೆನ್ನಾಗಿತ್ತು..."

"ಆಲೂಗಡ್ಡೆ ಇದ್ದಿದ್ರೆ ಬೋಂಡಾ ಮಾಡ್ತಿದ್ದೆ......"

"ಹೋಗಲಿ ಬಿಡಮ್ಮ. ಇಷ್ಟೇ ಸಾಕು.... ನೀವಿಬ್ರೂ ಯಾಕಿಷ್ಟು ಮಾತಾಡ್ತೀರಿ ಅಂತ....."

"ನಿಮ್ಮಪ್ಪನಿಗೆ ಹೊತ್ತು ಹೋಗುಲ್ಲ. ನನ್ನನ್ನ ಬಿಟ್ಟರೆ ಬೇರೆ ಯಾರೂ ಇಲ್ಲ ಅವರಿಗೆ"

"ಬೇರೆ ಯಾರ ಹತ್ತಿರಾನಾದ್ರೂ ಹೋಗುಕ್ಕೆ ಬಿಟ್ಟಿದ್ರೆ ತಾನೇ?"

"ಈಗ ಅನಿಸ್ತಾ ಇದೆ ಬಿಟ್ಟು ಬಿಡಬೇಕಾಗಿತ್ತು ಅಂತ."

"ಅಂತೂ ನಿನ್ನದೇ ತಪ್ಪು...."

"ಹೀಗೇ ಮೂವತ್ತು ಮೂವತ್ತೈದು ವರ್ಷ ಸಂಸಾರ ಮಾಡಿದೀರಲ್ಲ. ಇನ್ನೂ ಬೇಜಾರಾಗಿಲ್ವಾ ನಿಮ್ಮಿಬ್ಬರಿಗೂ?" ಮಗ ಕೇಳಿದಾಗ ರಾಮಸ್ವಾಮಿ ನಕ್ಕ.

"ಇದೇ ನಮ್ಮ ಸಂಸಾರದ ರಹಸ್ಯ ಕಣಯ್ಯಾ...... ಮೇಲು ನೋಟಕ್ಕೆ ನಾವಿಬ್ರೂ ಜಗಳ ಆಡ್ತೀವಿ ಅಂತ ಅನಿಸುತ್ತೆ ಅಷ್ಟೇ. ಆದರೆ ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸ್ತೀವಿ ಅನ್ನೋದೂ ಅಷ್ಟೇ ನಿಜ."

"ಸಾಕು ಸುಮ್ಮನಿರಿ......" ಶಾಂತ ನಾಚಿದಳು. ಸೋಮ ನಸುನಕ್ಕ.

"ಅಮ್ಮ, ಸಜ್ಜಿಗೆ ತುಂಬಾ ಚೆನ್ನಾಗಿದೆ. ಇನ್ನು ಸ್ವಲ್ಪ ಹಾಕ್ತೀಯ?"

"ಹುಂ" ಎನ್ನುತ್ತಾ ಅಮ್ಮ ಅಡಿಗೆ ಮನೆಯೊಳಗೆ ನಡೆದಳು.

ಈ ಅಪ್ಪ ಅಮ್ಮ ಇಬ್ಬರೂ ಸದಾ ಮಾತನಾಡ್ತಾನೇ ಇರ್ತಾರೆ. ಅದೇನು ಜಗಳವ್ರೋ ಪ್ರೀತಿಯೋ ಅವರಿಗೇ ಗೊತ್ತು. ಕೇಳುಕ್ಕೆ ಕೆಲವೊಮ್ಮೆ ರಂಜನೀಯವಾಗಿದ್ದರೆ, ಕೆಲವೊಮ್ಮೆ ಸಾಕಪ್ಪಾ ಅಂತನ್ನಿಸುತ್ತೆ. ಅಪ್ಪನಿಗೆ ಹೊತ್ತು ಹೋಗುಲ್ಲ. ಅಮ್ಮನ್ನ ಕೆಣಕ್ತಾರೆ. ಅಮ್ಮ ಸುಮ್ಮನಿರುಲ್ಲ ವಚಾಯಿಸ್ತಾಳೆ. ಇದಿಷ್ಟೇ ಅವರ ಸಾಮ್ರಾಜ್ಯ. ರಿಟೈರ್ ಆದ ಮೇಲೆ ಅಪ್ಪ ಮತ್ತೇಕೆ ಯಾವುದಾದರೂ ಕೆಲಸಕ್ಕೆ ಸೇರಲಿಲ್ಲವ್ರೋ? ಮನೆಯಲ್ಲಿ ಹಣ ಕಾಸಿಗೆ ತಾಪತ್ರಯ ಇದ್ದದ್ದೇ. ಆದರೂ ಅದನ್ನೆಂದೂ ತನ್ನ ಎದುರಿಗೆ ಆಡಿಲ್ಲ. ಈ ವಿಷಯದಲ್ಲಿ ನಿಜಕ್ಕೂ ನನ್ನ ಅಪ್ಪ ಅಮ್ಮ ಒಳ್ಳೆಯವರು ಎಂತಂದುಕೊಂಡ.

ಶಾಂತ ಮತ್ತು ಸ್ವಲ್ಪ ಸ್ವಲ್ಪ ಸಜ್ಜಿಗೆಯನ್ನು ಇಬ್ಬರಿಗೂ ಹಾಕಿದಳು.

"ನೀನು ತಿಂದ್ಯಾ ಶಾಂತು.....?"

"ಇಲ್ಲ, ನಾನು ಆಮೇಲೆ ತಿಂತೀನಿ."

"ತಗೋ..... ಸ್ವಲ್ಪ ತಿನ್ನು..... ತಂದೆ ಒಂದು ತುತ್ತು ಅವಳಿಗೆ ಕೊಡಲು ಹೋದುದನ್ನು ಸೋಮ ಗಮನಿಸಿದರೂ ಗಮನಿಸದವನಂತೆ ಸುಮ್ಮನಿದ್ದ."

ಬೇಡಾಂದ್ನಲ್ಲ. ನನಗೆ ಹಾಗೆಲ್ಲಾ ಹೊತ್ತಿಲ್ಲದ ಹೊತ್ನಲ್ಲಿ ತಿಂದು ಅಭ್ಯಾಸವಿಲ್ಲ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ಊಟ ಆಗಿತ್ತಲ್ಲ."ಶಾಂತ ತುತ್ತನ್ನು ತೆಗೆದುಕೊಳ್ಳಲಿಲ್ಲ. ಸೋಮ ಎದ್ದು, ತಟ್ಟೆಯನ್ನಿಟ್ಟು ಕೈ ತೊಳೆದು ಬಂದ."

"ಅಮ್ಮಾ.... ಆಚೆಗೆ ಬರೆಯೋ ವಿಚಾರ ಏನಾದ್ರೂ ಇದ್ದರೆ ಹೇಳು. ನಾನೀಗ ಕಾಗದ ಬರೀತಿದೀನಿ..."

"ನನ್ನ ಕಡೆಯಿಂದ ಏನೂ ಇಲ್ಲ. ಎಲ್ಲಾ ಕ್ಷೇಮ ಅಂತ ಬರಿ ರಜಕ್ಕೆ ಬಾ ಅಂತ ಬರಿ.. ಬರೋಕೆ ಮುಂಚೆ, ಎಲ್ಲಾ ವಿಷಯವನ್ನು ಸರಿಯಾಗಿ ತಿಳಿಸು ಅಂತ ಬರಿ......" ಸೋಮ ನಗುತ್ತಾ ಒಳರೂಮಿಗೆ ಹೋದ.

ಮರೆಯದೇ ಸೋಮ ತನ್ನ ಸ್ನೇಹಿತರಿಗೆ ಪಾರ್ಟಿಕೊಡಿಸಿದ. ಒಂದಿಬ್ಬರೂ ತನ್ನ ಕಾಲೇಜಿನ ಸಹಪಾಠಿಗಳಿಗೂ ಹೇಳಿದ್ದ. ಅವರುಗಳಲ್ಲಿ ಸ್ವಲ್ಪ ಆತ್ಮೀಯನಾಗಿದ್ದವನು ಹೇಮಂತ.

"ಹೇಮಂತ–ಸುಮಂತ" ಜೋಡಿ ತುಂಬಾ ಚೆನ್ನಾಗಿದೆ. ಅಂತ ಉಳಿದವರು ಚುಡಾಯಿಸುತ್ತಿದ್ದರು. ಹೇಮಂತ ಬೇರೆ ಒಂದು ಕಂಪೆನಿಯಲ್ಲಿ ಕೆಲಸದಲ್ಲಿದ್ದವನು. ಮರೆಯದೇ ಸ್ನೇಹಿತನ ಸಂತೋಷ ಕೂಟದಲ್ಲಿ ಪಾಲ್ಗೊಂಡಿದ್ದ.

ಪರಿಚಯ, ಶುಭಾಶಯಗಳ ನಂತರ, ಬೇಕು ಬೇಕೆನಿಸಿದ ತಿಂಡಿಗಳಿಗೆ ಆರ್ಡರ್ ಕೊಟ್ಟು ಹರಟಲಾರಂಭಿಸಿದರು. ಸಮಯ ಹೋದುದೇ ತಿಳಿಯಲಿಲ್ಲ. ವೈಟರ್ ಬಿಲ್

ತಂದಿತ್ತಾಗ ಎಲ್ಲರೂ ಎದ್ದರು. ಮತ್ತೊಮ್ಮೆ ಒಬ್ಬರಿಗೊಬ್ಬರು ಕೈ ಕುಲುಕಿ ಅಲ್ಲಿಂದ ಹೊರಬಿದ್ದರು.

ಮಗ ಮನೆಗೆ ಬರುವುದನ್ನೇ ಎದುರು ನೋಡುತ್ತಿದ್ದಳು ಶಾಂತ.

"ಯಾಕೋ ಇಷ್ಟು ಹೊತ್ತು?"

"ಹೇಳಿದ್ನಲ್ಲಮ್ಮ ಪಾರ್ಟಿ ಇದೆ ಅಂತ"

"ಪಾರ್ಟಿ ಅಂದ್ರೆ ಇಷ್ಟು ಲೇಟಾಗುತ್ತಾ?"

"ಕೆಲವು ಸಾರಿ ಇನ್ನು ಲೇಟಾಗುತ್ತೆ. ಅದಕ್ಯಾಕೆ ಗಾಬರಿ?"

'ದಿನಾ ನೆಟ್ಟಗೆ ಆಫೀಸ್ನಿಂದ ಮನೆಗೆ ಬರ್ತೀಯ.... ಹೀಗೆ ಲೇಟಾದರೆ ಆತಂಕವಾಗುತ್ತೆ."

"ನಾನು ಎಷ್ಟು ಹೇಳಿದೆ. ನನ್ನ ಮಾತೆಲ್ಲಿ ಕೇಳ್ತಾಳೆ. ಜಗಿಲಿಗೆದುರಾಗೇ ಕೂತಿದ್ದಾಳೆ. ಇವಳಿಗೋಸ್ಕರ ನಾನೂ ಕೂತಿರಬೇಕಾಯ್ತು." ಅಪ್ಪ ನುಡಿದಾಗ ಸೋಮ ಮುಖ ಸಿಂಡರಿಸಿದ.

"ನಾನೀಗ ಚಿಕ್ಕವನಲ್ಲ. ನನಗೂ ಜವಾಬ್ದಾರಿ ಇದೆ." ತಟಾರನೆ ಮಗ ಹೀಗೆ ನುಡಿದಾಗ ಶಾಂತ ಪೆಚ್ಚಾದಳು.

"ನೀನು ಎಷ್ಟೇ ದೊಡ್ಡವನಾದ್ರೂ ನಮಗೆ ಚಿಕ್ಕವನೇ. ನಮ್ಮ ಆತಂಕ ನಮಗೆ"

"ಬಿಡಮ್ಮ... ಅಪ್ಪ ಹೇಳೋ ಹಾಗೆ ನಿಂದು ಅತಿ ಅತಿಯಾಯ್ತು. ಎಲ್ಲಾದಕ್ಕೂ ನಿಂದೇ ಸರಿ. ಅನ್ನೋ ತರಹ ಮಾತನಾಡ್ತೀಯ....." ಮಗ ಸರ್ರನೆ ಒಳ ಬಂದು ಷೂಸುಗಳನ್ನು ಬಿಚ್ಚಿ ಬಚ್ಚಲು ಮನೆಯ ಕಡೆ ನಡೆದಾಗ ಶಾಂತ ಪೆಚ್ಚಾದಳು.

"ನಡೀ ಶಾಂತ, ಮಲಕ್ಕೋ ಹೋಗು...... ನಾನು ಬಾಗಿಲು ಸರಿಯಾಗಿ ಹಾಕಿ ಬರ್ತೀನಿ."

ಶಾಂತ ಮೊಟ್ಟ ಮೊದಲ ಬಾರಿಗೆ, ಯಾವ ಮಾತೂ ಆಡದೇ, ತನ್ನ ಪಾಡಿಗೆ ತಾನು ಹೋಗಿ ಮಲಗಿದಳು. ನನ್ನ ಮಗನಿಗೇನಾಯ್ತು? ಒಂದು ಪ್ರಮೋಷನ್ ಸಿಕ್ಕಿದ್ದಕ್ಕೆ ಪ್ರತಿಷ್ಠೆ ಹೆಚ್ಚಾಯಿತೆ? ಎಂದೂ ಹೀಗೆಲ್ಲಾ ರೇಗಿದವನಲ್ಲ. ಅವಳಿಗೆ ಅವಮಾನವಾದಂತಾಗಿತ್ತು. ರೆಕ್ಕೆ ಪುಕ್ಕ ಬೆಳೆದು ಬಲಿತಿದೆ. ಇನ್ನು ಇವನಿಗೆ ನಾನ್ಯಾಕೆ, ಅಂತಂದುಕೊಂಡಾಗ ಅಳು ಬರುವಂತಾಗಿತ್ತು. ಬಿಕ್ಕಿದಳು. ಮಡದಿಯ ಮನಸ್ಸು ರಾಮಸ್ವಾಮಿಗೆ ಅರ್ಥವಾಗಿತ್ತು. ಅವಳನ್ನು ರಮಿಸಿ ಸಾಂತ್ವನ ಹೇಳಿದ.

"ಮಕ್ಕಳು ಬೆಳೆದು ದೊಡ್ಡವರಾದ ಮೇಲೆ, ಅವರಿಗೂ ಕೆಲವು ಸ್ವತಂತ್ರ ಬೇಕಾಗುತ್ತೆ. ಅದನ್ನು ಅರಿತುಕೊಂಡರೆ ಎಲ್ಲರಿಗೂ ನೆಮ್ಮದಿ...."

"ಹಾಗಾದ್ರೆ ಮಕ್ಕಳ ಬಗ್ಗೆ ಆತಂಕವೂ ಇರಬಾರದೇ....."

"ನಿನ್ನ ಆತಂಕ ಅವನಿಗೆ ಅತಿರೇಕವಾಗಿ ಕಾಡಿರಬಹುದು. ಅವನಿಗೆ ಬೇಡಾಂದ್ರೆ ಬೇಡ....."

"ಇಷ್ಟು ಬೇಗ ಇಷ್ಟು ಕೆಟ್ಟೋನಾಗ್ತಾನೆ ಅಂತ ನಾನಂದು ಕೊಂಡಿರಲಿಲ್ಲ."

"ಇದು ಕೆಟ್ಟತನ ಅಲ್ಲ ಶಾಂತು...... ಸಲುಗೆ ನಿನ್ನ ಮೇಲೆ ಸಲುಗೆ ಇರೋ ಹೊತ್ತಿಗೆ ರೇಗ್ತಾನೆ. ನೀನೂ ಹಾಗೇ ತಾನೇ..... ನನ್ನ ಮೇಲೆ ರೇಗ್ತಾನೇ ಇರ್ತೀಯ....." ಆದರೂ ಶಾಂತಳಿಗೆ ಸಮಾಧಾನವಾಕಿರಲಿಲ್ಲ. ಆದರೆ ಇಷ್ಟು ಬೇಗ ಸುಲಭವಾಗಿ ಮಗನನ್ನು ಬಿಟ್ಟು ಕೊಡಲು ತಯಾರಿರಲಿಲ್ಲ. ತಾನೇ ಸರಿಹೋಗಿಸಿಕೊಂಡಳು.

ಈಗ ಸೋಮನ ದಿನಚರಿ ಬದಲಾಗಿತ್ತು. ಹೊಸಾ ಆಫೀಸು ಮೊದಲಿನ ಆಫೀಸಿಗಿಂತ ಹತ್ತಿರವಿದ್ದುದರಿಂದ ನಿಧಾನವಾಗಿ ನಡದೇ ಹೋಗುತ್ತಿದ್ದ. ಹೊಸ

ಸಹೋದ್ಯೋಗಿಗಳೊಡನೆ ಆದ ಪರಿಚಯ ಸ್ನೇಹಕ್ಕೆ ತಿರುಗಲಾರಂಭಿಸಿತ್ತು. ಕ್ರಮೇಣ ಹೊಸ ಪರಿಸರಕ್ಕೆ ಹೊಂದಿಕೊಂಡ.

ಕೆಲವೇ ತಿಂಗಳುಗಳಲ್ಲಿ ಮನೆಯಲ್ಲಿಯೂ ಸಾಕಷ್ಟು ಮಾರ್ಪಾಟುಗಳಾಗಿದ್ದವು. ಮನೆಗೆ ಸೋಫಾಸೆಟ್ಟು ಬಂದಿತ್ತು. ಕಲರ್ ಟಿ.ವಿ. ಯನ್ನು ಖರೀದಿಸಿದ್ದರು. ಸೋಮ ತನಗಾಗಿ ಒಂದು ಕಂಪ್ಯೂಟರ್ ಕೊಂಡಿದ್ದ. ಹಾಗೂ ಟೆಲಿಫೋನ್‌ಗಾಗಿ ಬುಕ್ ಮಾಡಿಯಾಗಿತ್ತು.

ಶಾಂತಳಿಗೆ ಏನೋ ಆನಂದ. ಅಂತೂ ಮಗನ ಕಾಲದಲ್ಲಾದರೂ, ನಾವೂ ನಾಲ್ಕು ಜನರಂತೆ, ಮನೆಗೆ ಬೇಕಾದ ಅಗತ್ಯ ವಸ್ತುಗಳನ್ನು ಕೊಂಡು ಕೊಂಡೆವೆಂಬ ಸಮಾಧಾನ.

ಬೇಸಗೆಯ ರಜ ಶುರುವಾಗುತ್ತಿದ್ದಂತೇ ಆಚಿ ತನ್ನ ಮಕ್ಕಳೊಡನೆ ಬಂದಿಳಿದಳು. ಮಕ್ಕಳು ಮಾಮಾ. ಮಾಮಾ ಅಂತ ಸೋಮ ಇದ್ದೆಡೆಗೆ ಸಂಭ್ರಮದಿಂದ ಹೊರಟವು.

"ಸುಮ್ನೇ ಅವನನ್ನು ಗೋಳು ಹುಯ್ದುಕೊಳ್ಳಬೇಡಿ. ಅವನಿಗೀಗ ಆಫೀಸಿನ ಕೆಲಸದ ಮಧ್ಯೆ ಪುರಸೊತ್ತೇ ಇಲ್ಲ.... ಪಾಪ ಮಲಗಿದಾನೇ ಏನೋ....." ಮಕ್ಕಳು ಅಜ್ಜಿಯ ಮಾತಿಗೆ ಬೆದರಿ ನಿಂತವು.

"ನಿನ್ನ ಮಗ ಆಫೀಸರ್ ಆಗಿದಾನೆ ಅನ್ನೋ ಜಬರ್ದಸ್ತು. ನಿನ್ನ ಮುಖದಲ್ಲಿ ಎದ್ದು ಕಾಣುತ್ತಿದೆ." ಮಗಳು ತಾಯಿಯನ್ನು ಕೆಣಕಿದಳು.

"ಮತ್ತೆ...... ಮಗ ಅಂತಂದ್ರೆ....." ಗಂಡೋ ಮುತ್ತಿನ ಚೆಂಡೋ ಅನ್ನೋ ಹಾಗೆ ಹೆಮ್ಮೆ ಪಡುವ ವಸ್ತೂನೇ. ನೀನೂ ನೋಡ್ತಿರು ನಿನ್ನ ಮಗ ಬೆಳೆದು ದೊಡ್ಡ ಆಫೀಸರನಾದ ಮೇಲೆ ನನಗಿಂತ ಹೆಚ್ಚು ಬೀಗ್ತೀಯ......"

"ಈಗಲೇ ಹೀಗೆ ಬೀಗುತ್ತಿರುವ ನೀನು ನಿನ್ನ ಮಗ ಹಸೆಮಣೆ ಏರಿದ ಕೂಡಲೇ ಎಷ್ಟು ಬೀಗ್ತೀಯೊ...?"ಮಗಳು ನಕ್ಕಳು.

"ನಿನ್ನ ತಮ್ಮ ಈಗ ಬದಲಾಗಿ ಹೋಗಿದಾನೆ. ನನ್ನ ಮಾತನ್ನೆಲ್ಲಿ ಕೇಳ್ತಾನೆ....... ನನ್ನ ಆಸೆಗೆ ತಕ್ಕಂತಹ ಸೊಸೆ ಬರ್ತಾಳೋ ಇಲ್ಲವೋ ಅಂತ. ನನಗೆ ಅದೇ ಆತಂಕ....."

"ಅಚಿಯನ ಬಗ್ಗೆ ನಿನಗೆ ಆತಂಕವಿರಲಿಲ್ಲ. ಆಚೀ ಆಚೀ ಅಂತ ಕರೆದು ಆಚೆ ತಳ್ಳಿ ಬಿಟ್ಟೆ......ನನ್ನನ್ನು ಈಗ ನೋಡು......"

"ನೀನೂ ನಿಮ್ಮಪ್ಪನ ಹಾಗೆ ಸದಾ ನನ್ನನ್ನ ದೂಷಿಸ್ತೀಯ ಕಣೇ..... ನೀವೆಲ್ಲಾ ಒಂದು ನಾನೇ ಒಂದು....."

"ಆದರೂ ನೀನೇನು ಕಡಿಮೆ ಇಲ್ಲ ಬಿಡು...... ಹೋಗಲಿ ಅಪ್ಪ ಹೇಗಿದಾರೆ? ಹೇಗೆ ಕಾಲ ಕಳೀತಾರೆ ಹೇಳು...."

"ಏನೇ ಆಚಿ ಹೇಗಿದೀಯೇ?" ಎನ್ನುತ್ತಾ ಸೋಮ ಅಕ್ಕನ ಬಳಿ ಕುಳಿತ. ಮಾಮಾ...... ಮಾಮಾ...... ಎನ್ನುತ್ತ ಮಕ್ಕಳು ಅವನ ಬಳಿ ಕುಳಿತವು.

"ಏನೋ ಸೋಮ...... ಅಮ್ಮ ನಿನ್ನನ್ನು ತುಂಬಾ ಹೊಗಳ್ತಾ ಇದಾಳೆ. ಪುರುಸೊತ್ತೇ ಇಲ್ವಂತೆ ನಿನಗೆ....."

"ಹಾಗೇನಿಲ್ಲ. ನಾನು ಇವತ್ತಿಗೂ ಸೋಮಾರಿ ಸೋಮನೇ....." ಮಕ್ಕಳು ಚಪ್ಪಾಳೆ ತಟ್ಟಿ ನಕ್ಕವು.

"ನಿನ್ನ ಸೋಮಾರಿತನದಿಂದಲೇ ನಿನಗೆ ಈ ಹೆಸರು ಬಂದದ್ದು. ಆಫೀಸ್ನಲ್ಲಿ ಸೋಮನೋ ಸುಮಂತನೋ......?"

"ಆಫೀಸ್ನಲ್ಲಿ ಸೋಮಾರಿತನ ಮಾಡಿದ್ರೆ ನಡೆಯುತ್ತಾ? ಅಲ್ಲಿ ಯಾರಿಗೂ ನಾನು

ಸೋಮನಲ್ಲ."

"ಸುಮಂತ ಅನ್ನೋ ಹೆಸರನ್ನು ಬಿಟ್ಟು ಅದ್ಯಾಕೆ ಸೋಮ ಸೋಮ ಅಂತ ಕರೀತೀರೋ.....? ಶಾಂತ ನುಡಿದಾಗ ರೇಗಿದಳು."

"ಆಚಿ ಎನ್ನೋ ಹೆಸರು ಹೇಗೋ, ಹಾಗೇ ಸೋಮ ಅನ್ನೋ ಹೆಸರು" ಆಚಿ ನುಡಿದಾಗ ಮಕ್ಕಳು ಮತ್ತೆ ನಕ್ಕವು.

"ಈ ಸಾರಿ ಒಂದೇ ವಾರದ ಮೇಲೆ ಬಂದಿದೀನಿ. ಮುಂದಿನ ವಾರದಲ್ಲಿ ನಮ್ಮ ಅತ್ತೆ ಮನೆಯ ಕಡೆ ನಾಲ್ಕಾರು ಮದುವೆ ಮುಂಜಿಯ ಕಾರ್ಯಕ್ರಮಗಳಿವೆ. ನಾವು ಹೋಗಲೇ ಬೇಕು."

"ಬರ್ತಿದ್ದಾ ಹಾಗೇ ಹೊರಡೋ ಮಾತು.... ನಿಮ್ಮ ಅಪ್ಪ ಬಂದ್ರು ನೋಡು...."

ರಾಮಸ್ವಾಮಿ ಮಗಳನ್ನು ಮಾತನಾಡಿಸಿ ಮೊಮ್ಮಕ್ಕಳನ್ನು ಮುದ್ದಾಡಿದ ಶಾಂತ ಎದ್ದು ಒಳಗೆ ಹೋದ ಕೂಡಲೇ ನುಡಿದ.

"ನಿನ್ನ ತಮ್ಮನಿಗೆ ತಕ್ಕಂತಹ ಹುಡುಗಿಯನ್ನು ಹುಡುಕುವ ಕೆಲಸ ನಿನ್ನದು." ಮಗನ ಕಡೆ ನೋಡಿದ.

"ಏನೋ ಸೋಮ? ನಿನಗೆಂತಹವಳು ಬೇಕೋ.......? ಸರಿಯಾಗಿ ಹೇಳು. ಆಮೇಲೆ ಹಾಗೇ ಹೀಗೇ ಅಂತ ಅನಬೇಡ....."

"ನೋಡೋಕೆ ಚೆನ್ನಾಗಿರಬೇಕು. ತೆಳ್ಳಗೆ ಬೆಳ್ಳಗೆ ಇರಬೇಕು. ನನ್ನಷ್ಟೇ ಎತ್ತರವಿದ್ದರೂ ಪರವಾಗಿಲ್ಲ. ಗ್ರಾಜುಯೇಟ್ ಆಗಿದ್ದು ಕೆಲಸದಲ್ಲಿರಬೇಕು." ಎನ್ನುತ್ತಾ ಅಕ್ಕನ ಮಗಳ ಗಲ್ಲ ಸವರಿದ.

"ನನ್ನ ಮಗಳೇ ದೊಡ್ಡೋಳಾಗುವರೆಗೂ ನೀನು ಕಾದಿರುವುದಾದರೆ ನೋಡಪ್ಪಾ...." ಎಲ್ಲರೂ ಗೊಳ್ ಅಂತ ನಕ್ಕರು. ಇದ್ದಕ್ಕಿದ್ದಂತೆ ರಾಮಸ್ವಾಮಿ ಗಂಭೀರನಾದ. ಅವನಿಗೆ ಸುಜಾತಳ ನೆನಪಾಗಿತ್ತು. ಸುಜಾತ ತನ್ನ ಅಕ್ಕನ ಮಗಳು. ಆದರೆ ಎಂದೂ ಈ ಸಲುಗೆ ಇರಲಿಲ್ಲ. ಅಂತಂದುಕೊಂಡಾಗ, ಏನೋ ವ್ಯಥೆಯಾಗಿತ್ತು.

ಆಚಿ ಊರಿಗೆ ವಾಪಸ್ಸು ಹೋಗಿದ್ದಳು. ರಾಮಸ್ವಾಮಿಗೆ ಮನೆಬೀಕೋ ಎನ್ನುತ್ತಿತ್ತು. ಆಗಾಗ್ಗೆ ಕಾಡುತ್ತಿದ್ದ ಹಳೆಯ ನೆನಪುಗಳು ಮತ್ತೆ ಮತ್ತೆ ಮರುಕಳಿಸಿದವು. ಪಂಡಿತರ ಮನೆಯ ಕಡೆ ವಾಕಿಂಗ್ ಹೋಗಿದ್ದ ಅಲ್ಲಿ ಬೇರೆ ಯಾರೋ ವಾಸವಾಗಿದ್ದರು. ಆ ಮನೆಯನ್ನು ಕೆಲವು ವರ್ಷಗಳ ಹಿಂದೆಯೇ ಮಾರಿ ಬಿಟ್ಟಿದ್ದರು. ಅವರ ಹೊಸ ವಿಳಾಸ ಸಹ ತಿಳಿದಿರಲಿಲ್ಲ. ತಿಳಿದಿದ್ದರೆ, ಒಮ್ಮೆಯಾದರೂ ಹೋಗಿ ಬರಬಹುದಾಗಿತ್ತೆನಿಸಿತು. ಆದರೆ ಹೆಂಡತಿಯ ನೂರೆಂಟು ಪ್ರಶ್ನೆಗಳಿಗೆ ಉತ್ತರವನ್ನು ಹೊಂದಿಸುವುದು ಆಗದ ಕೆಲಸ.

ಹಳೆಯ ಸಂಬಂಧವನ್ನು ಹುಡುಕಿಕೊಂಡು ಹೋದರೆ, ಸಿಗುವುದು ಸುಲಭವೇನಲ್ಲ ಅಂತನ್ನಿಸಿತ್ತು. ಈ ವಿಷಯಗಳನ್ನು ಶಾಂತಳೊಡನೆ ಪ್ರಸ್ತಾಪಿಸಿರಲಿಲ್ಲ.

ಆಚಿ ಊರಿಗೆ ಹೋದ ಕೆಲವೇ ದಿನಗಳಲ್ಲಿ ಕೆಲವಾರು ಜಾತಕಗಳನ್ನು ಫೋಟೋಗಳನ್ನು ಕಳಿಸಿದ್ದಳು. ಜಾತಕ ಕೂಡಿ ಬಂದರೂ, ಹುಡುಗಿಯ ಫೋಟೋ ಶಾಂತಳಿಗೆ ಹಿಡಿಸಿರಲಿಲ್ಲ. ಈ ವಿಷಯಗಳೊಂದೂ ತಿಳಿಯದ ಸೋಮ ನಿರಾಂತಕನಾಗಿದ್ದ. ಮಗನೊಡನೆ ಪ್ರಸ್ತಾಪ ಮಾಡಲು ಶಾಂತಳೂ ಹಿಂಜರಿದಿದ್ದಳು.

"ನಿಮಗೇನನ್ನಿಸುತ್ತೆ? ಸೋಮನಿಗೆ ಯಾವುದಾದ್ರೂ ಹುಡುಗಿ ಒಪ್ಪಿಗೆಯಾಗಬಹುದು ಅಂತನ್ನಿಸುತ್ತಾ?" ಫೋಟೋಗಳನ್ನು ತೋರಿಸಿದ್ದಳು.

"ನಾನು ಹೇಗೆ ಹೇಳಲಿ? ನೀನೇ ಒಂದ್ಮಾತು ಕೇಳು."

"ಜಾತಕ ಸರಿಯಾಗಿದ್ರೆ, ಹುಡುಗಿ ಚೆನ್ನಾಗಿಲ್ಲ, ಹುಡುಗಿ ಚೆನ್ನಾಗಿದ್ರೆ ಜಾತಕ ಹೊಂದಲ್ಲ....."

"ಅದಕ್ಯಾಕೆ ಚಿಂತೆ? ಆಗೋ ಕಾಲಕ್ಕೆ ಎಲ್ಲಾ ಸರಿ ಹೋಗುತ್ತೆ."

"ಯಾವಾಗ ಸರಿ ಹೋಗುತ್ತೋ? ಮನೆ ದೇವರಿಗೆ ಕಾಣಿಕೆ ಕಟ್ಟಿಟ್ಟಿದ್ದಂತೂ ಆಯಿತು. ಆಚೆ ಕೇಳಿದ್ರೆ ಏನು ಹೇಳಲಿ?"

"ಇನ್ನು ಸೋಮನ್ನ ಕೇಳಿಲ್ಲ ಅಂತ ಹೇಳಿದ್ರಾಯ್ತು. ನಿನಗೆ ಹೇಳಿ ಕೊಡಬೇಕೆ ಸುಳ್ಳೂ ಹೇಳೋಕೆ?"

"ಸುಳ್ಳು ಹೇಳಿ ಯಾರಿಗೆ ಮೋಸ ಮಾಡಿದೀನಿ ನಾನು? ಅದೆಲ್ಲಾ ನಿಮಗೇ ಇರಲಿ" ಹೂಂ ಎನುವಂತೆ ರಾಮಸ್ವಾಮಿ ತಲೆ ಆಡಿಸಿದ.

"ನಾನು ಇಲ್ಲೇ ಒಬ್ಬರ ಮನೆಗೆ ಹೋಗಿ ಬರ್ತೀನಿ. ಸೋಮ ಕೇಳಿದ್ರೆ ಇಲ್ಲೇ ಎಲ್ಲೋ ಹೋಗಿದಾಳೆ ಅಂತ ಹೇಳಿ" ಮತ್ತೆ ತಲೆ ಆಡಿಸಿದ. ಮಗ ಮನೆಗೆ ಬರುವುದನ್ನೇ ಕಾದಿದ್ದು, ನಂತರ ತಾನೂ ವಾಕಿಂಗ್ ಹೊರಟ.

ಮುಂಬಾಗಿಲು ಕರೆಗಂಟೆ ಸದ್ದು ಮಾಡಿತು. ಸುಮಂತ್ ಕಂಪ್ಯೂಟರ್ ಮುಂದೆ ಕೂತಿದ್ದವನು, ಬೇಸರದಿಂದ ಎದ್ದು ಬಂದು ಬಾಗಿಲು ತೆಗೆದ. ಎದುರಿಗೆ ನಿಂತಿದ್ದ ಯುವತಿಯನ್ನು ಕಂಡೊಡನೆ ಅವನ ಬೇಸರವೆಲ್ಲಾ ಮಾಯವಾಯಿತು. ಎದುರಿಗೆ ನಿಂತಿದ್ದವಳು ನಾಚಿಕೆಯಿಂದ ಕೆಂಪಾಗಿದ್ದಳು. ಎಸ್. ಎಂದ ಆದಷ್ಟೂ ಮೃದುವಾಗಿ.

"ಅರಿಶಿನ ಕುಂಕುಮಕ್ಕೆ...... ಬರಬೇಕಂತೆ........" ಅವಳು ಗಲಿಬಿಲಿಯಿಂದ ಹೇಳಿದಾಗ, ಗೊಳ್ಳನೆ ನಕ್ಕು ಬಿಟ್ಟ. ಅವಳು ಮತ್ತು ಕೆಂಪಾದಳು ಅವಮಾನವಾದಂತಾಗಿತ್ತು.

"ಸಾರಿ. ಅಮ್ಮ ಮನೇಲಿಲ್ಲ. ಬಂದಮೇಲೆ ಹೇಳ್ತೀನಿ. ಓ.ಕೆ. ಅವಳು ಹಾಗೇ ಹಿಂದಕ್ಕೆ ಸರಿದಳು."

"ಯಾರ ಮನೆ ಅಂತ ಹೇಳಬೇಕು?" ಅವನು ಪ್ರಶ್ನಿಸಿದಾಗ, ಅವಳು ಕತ್ತೆತ್ತಿ ಅವನನ್ನೇ ನೋಡಿದಳು. ಅವನ ಮುಖದ ಮೇಲಿನ ಮಂದಹಾಸ ಅವಳನ್ನು ಮೆಚ್ಚಿಸಿದವು.

"ಪಕ್ಕದಲ್ಲ, ಪಕ್ಕದ ಮನೆ... ಈ ಕಡೆ ಎನ್ನುತ್ತಾ ಬಲಗಡೆಗೆ ಕೈ ಮಾಡಿ ತೋರಿದಳು. 'ರಾಧಮ್ಮನ ಮನೆ.' ಅಷ್ಟನ್ನು ಕಷ್ಟದಿಂದ ಹೇಳಿ ಹಾಗೇ ಹಿಂದಕ್ಕೆ ಸರಿದು ಗೇಟಿನಾಚೆ ಹೊರಟೇ ಹೋದಳು. ಸುಮಂತ ಅವಳ ನಿರ್ಗಮನವನ್ನೇ ನೋಡುತ್ತಾ ನಿಂತಿದ್ದ."

"ಏನೋ ನನಗೋಸ್ಕರ ಕಾಯ್ತಾ ನಿಂತಿದ್ಯಾ? ಆಗಲೇ ಊಟದ ಹೊತ್ತಾಯ್ತಾ? ಸಾಯಂಕಾಲ ತಿಂಡಿ ಮಾಡಿಕೊಟ್ಟಿದ್ನಲ್ಲೋ.....?" ತಾಯಿ ಶಾಂತಮ್ಮನ ಮಾತು ಅವನಿಗೆ ಹಿಡಿಸಲಿಲ್ಲ.

"ನಿನಗೋಸ್ಕರ ಕಾಯ್ತಾ ನಿಂತಿದ್ದೆ ಅಂತ ನಾನು ಹೇಳಲಿಲ್ಲ. ಸ್ವಲ್ಪ ಎತ್ತರದ ಧ್ವನಿಯಲ್ಲಿ ನುಡಿದಾಗ, ಶಾಂತಮ್ಮ ಮತ್ತೆ ಕೆಣಕಿದಳು."

"ಹಾಗಾದ್ರೆ ಯಾರಿಗೋಸ್ಕರ ಕಾಯ್ತಾ ನಿಂತಿದ್ದೆ ಅಂತ ನೀನೇ ಹೇಳಿಬಿಡು....." ಎನ್ನುತ್ತಾ ಮನೆಯೊಳಗೆ ನಡೆದಳು. ಅವನೂ ತಾಯಿಯ ಹಿಂದೆ ಹಿಂದೆ ಒಳ ಬಂದ.

"ಯಾವುದೋ ಹುಡುಗಿ ನಿನ್ನನ್ನ ಅರಿಶಿನ ಕುಂಕುಮಕ್ಕೆ ಅಂತ ಕರೆಯೋಕೆ ಬಂದಿತ್ತು."

"ಯಾರೋ......? ಯಾರ ಮನೆಯೋರಂತೆ.....? ಏನಂತೆ ಅವರ ಮನೇಲಿ?"

"ನಂಗೊತ್ತಿಲ್ಲಮ್ಮ....... ಇಲ್ಲಿಂದ ಎರಡ್ನೇ ಮನೆಯಂತೆ. ರಾಧಮ್ಮನ ಮನೆಯಂತೆ......"

"ಓ...... ಅವರ ಮನೇನಾ? ಮಗೂನ ತೊಟ್ಟಿಲಿಗೆ ಹಾಕ್ತಾರೆ ಅಂತ ಹೇಳ್ತಿದ್ರು...... ಕರೆಯೋಕೆ ಯಾರು ಬಂದಿದ್ರು?"

"ನಂಗೊತ್ತಿಲ್ಲಮ್ಮ ನಾನು ಅವಳ ಹೆಸರ್ನ ಕೇಳಲಿಲ್ಲ" ರೇಗಿದ.

"ಮಾತು ಮಾತಿಗೆ ಯಾಕೆ ರೇಗ್ತೀಯೋ ಸೋಮ....." ಆಕೆ ಕೈಯಲ್ಲಿದ್ದ ಚೀಲಗಳನ್ನು ಅಡಿಗೆ ಮನೆಯ ಬಾಗಿಲ ಬಳಿ ಇಟ್ಟಳು.

"ಮಗೀನ ಕೈಗೆ ಒಂದು ಹತ್ತು ರೂಪಾಯಿನಾದ್ರೂ ಇಡಬೇಕು. ಮಾರ್ಕೆಟ್ಟಿಗೆ ತಗೊಂಡು ಹೋದದ್ದೆಲ್ಲಾ ಖರ್ಚಾಗಿ ಹೋಯ್ತು. ನಿಮ್ಮಪ್ಪ ಇನ್ನು ಮನೆಗೆ ಬಂದಿಲ್ಲ. ನಿನ್ನ ಹತ್ತಿರ ಒಂದು ಹತ್ತುರೂಪಾಯಿ ಇದ್ರೆ ಕೊಡು."

"ಏನಮ್ಮಾ..... ಒಂದು ಹತ್ತು ರೂಪಾಯಿ ಸಹ ನಿನ್ನ ಹತ್ತಿರ ಇಲ್ವಾ? ನಾಚಿಕೆ ಗೇಡು. ಅಪ್ಪ ತಮ್ಮ ಪೆನ್ಶನ್ ಹಣಾನೆಲ್ಲ ನಿನ್ನ ಕೈಗೆ ಕೊಡ್ತಾರಲ್ಲ...."

"ಆ ಮಾತೆಲ್ಲಾ ಬೇಡ. ಪೆನ್ಶನ್ ಹಣಾನ ಪೂರ್ತಿ ನನ್ನ ಕೈಗೆ ಕೊಡ್ತಾರೆ ಅಂತ ಅಂದ್ಕೊಂಡ್ಯಾ? ಅವರು ಕೊಡೋ ಹಣ ಈ ಸಂಸಾರಕ್ಕೆ ಎಲ್ಲಿ ಸಾಕಾಗುತ್ತೆ?"

'ಸರಿ ಬಿಡಮ್ಮಾ...... ಅದೇ ಹಳೇ ರಾಗಾನ ಹಾಡ್ತೀಯ. ಪಾಕೆಟ್‌ಮನಿ ಅಂತ ಇಟ್ಕೊಂಡ್ರೆ ಏನೀಗ? ತಗೋ" ಎನ್ನುತ್ತಾ ಐವತ್ತು ರೂಪಾಯಿಗಳ ನೋಟೊಂದನ್ನು ತಾಯಿಯ ಕೈಗಿಟ್ಟ.

"ಚಿಲ್ರೆ ಇಲ್ವೇನೋ? ನಾನೀಗ ಚಿಲ್ರೇನ ಎಲ್ಲಿಂದ ತರ್ಲಿ?"

"ಈ ಐವತ್ತು ರೂಪಾಯೀನೇ ಆ ಮಗೂಗೆ ಕೊಟ್ಟು ಬಿಡು"

"ಏನಂದೆ? ಐವತ್ತು ರೂಪಾಯಿ! ನಿನ್ನ ತಲೆ ಸರಿಯಾಗಿದೆ ತಾನೆ? ನಮಗೂ ಅವರಿಗೂ ಏನು ಸಂಬಂಧ? ಇನ್ನು ನೆನ್ನೆ ಮೊನ್ನೆ ಪರಿಚಯವಾದವರು. ಹತ್ತು ರುಪಾಯಿ ಸಾಕು."

"ಸಂಬಂಧ ಇಲ್ಲದಿದ್ರೇನಾಯ್ತು? ನಮ್ಮ ಪಕ್ಕದ ಮನೆಯವರು ಅವರು ಹತ್ತು ರುಪಾಯಿ ಕೊಟ್ರೆ ನಗೋಲ್ವೇನಮ್ಮಾ?"

"ಯಾರೋ ನಗೋರು? ಈಗಿನ್ನು ಹೊಸದಾಗಿ ಪರಿಚಯವಾಗಿದಾರೆ. ಯಾರೂ ನಗುಲ್ಲ. ಇದು ನಮ್ಮ ಸ್ವಂತ ವಿಷಯ" ತಾಯಿ ಸೀರೆ ಬದಲಾಯಿಸಿಕೊಂಡು ಬರಲು ಒಳಗಿನ ರೂಮಿಗೆ ಹೋದಳು. ಸುಮಂತ ತನ್ನ ರೂಮಿಗೆ ಬಂದು ಕಂಪ್ಯೂಟರ್ ಮುಂದೆ ಕೂತ. ಆದರೆ ಈಗ ಕಂಪ್ಯೂಟರ್ ಪರದೆಯ ಮೇಲೆ ಆ ಹುಡುಗಿಯ ಮುಖ ತೇಲಿಬಂತು. ಕೆಂಗುಲಾಬಿಯಂತೆ ಕೆಂಪಾಗಿದ್ದ ಅವಳ ಮುಖವನ್ನು ನೆನಪಿಸಿಕೊಂಡು ತನ್ನಲ್ಲೇ ನಕ್ಕ. ಈ ಹುಡುಗಿ ಯಾರು? ಈ ಮುಂಚೆ ನೋಡಿರಲಿಲ್ಲ.

"ಸೋಮಾ ನಾನು ಹೋಗಿ ಬರ್ತೀನಿ ಕಣೋ...... ಬಾಗಿಲ್ನ ಹಾಕ್ಕೋ ನಿನಗೆ ಕಂಪ್ಯೂಟರ್ ಮುಂದೆ ಕೂತರೆ, ಹೊರಗಿನ ಪ್ರಪಂಚವೇ ಮರೆತು ಹೋಗುತ್ತೆ...."

"ಹಾಗೇನಿಲ್ಲ. ಸುಮ್ನೆ ಅನ್ನಬೇಡ..... ಆ ಹುಡುಗಿ ಬಂದಾಗ ಎದ್ದು ಬಾಗಿಲ್ನ ತೆಗೆದ್ನೋ ಇಲ್ವೋ...." ಅದೇ ಹೆಚ್ಚುಗಾರಿಕೆ ಅವನಿಗೆ.

"ಸರಿ. ಸರಿ ಹೊತ್ತಾಯ್ತು ನಾನು ಹೊರಡ್ತೀನಿ. ಬೇಗ ಬಂದು ಬಿಡ್ತೀನಿ."ಆಕೆ ಅವಸರಿಸಿದಳು. ತಾಯಿ ಅತ್ತ ಕಡೆ ಹೊರಟ ಕೂಡಲೇ ಟೀಪಾಯ್ ಮೇಲಿದ್ದ ಐವತ್ತು ರೂಪಾಯಿನ ನೋಟು ಕಣ್ಣಿಗೆ ಬಿತ್ತು.

"ಅಮ್ಮಾ–ದುಡ್ಡು" ಜ್ಞಾಪಿಸಿದ.

"ಬೇಡ ಬಿಡು.... ನನಗೊಂದು ಹತ್ತುರೂಪಾಯಿನ ನೋಟು ಸಿಕ್ತು.. ಆಕೆ ಬಾಗಿಲನ್ನು ದಾಟಿ ಹೊರ ನಡೆದಾಗ, ಸುಮಂತ ತಲೆಯನ್ನು ಅಡ್ಡಡ್ಡ ಆಡಿಸಿದ." ಅಂತೂ

ನೀವೆಲ್ಲಾ ಈ ಜನ್ಮದಲ್ಲಿ ಬದಲಾಗುಲ್ಲ. ತನಲ್ಲೇ ಹೇಳಿಕೊಂಡು ಒಳ ಬಂದ. ಗೋಡೆಯ ಮೇಲಿನ ಗಡಿಯಾರ ಢಣ್ ಎಂದಿತು. ಕತ್ತೆತ್ತಿ ನೋಡಿದ ಏಳೂವರೆ ಗಂಟೆ. ಟಿ.ವಿ.ಯ ಸ್ವಿಚ್ ಆನ್ ಮಾಡಿದ. ರಿಮೋಟ್‌ನ್ನು ಟಕ್ ಟಕ್ ಎನಿಸಿ ಚಾನೆಲ್‌ಗಳನ್ನು ಬದಲಾಯಿಸಿದ. ಉದಯ ನ್ಯೂಸ್ ಚಾನೆಲ್‌ನ ಕನ್ನಡ ವಾರ್ತೆಯನ್ನು ಆಲಿಸಿದ. ಈ ವಾರ್ತೆಗಳು ತನಗೆ ಸಂಬಂಧಿಸಿದುದೇ ಅಲ್ಲವೆನ್ನುವಂತೆ ಆಲಿಸುತ್ತಿದ್ದ. ಮಧ್ಯೆ ಮಧ್ಯೆ ಆ ಹುಡುಗಿಯ ಕೆಂಪಡರಿದ್ದ ಮುಖ ಕಣ್ಣ ಮುಂದೆ ತೇಲಿಬಂದು, ಕಿರುನಗೆ ಮೂಡಿತು.

ತಂದೆ ಬಂದು ಬಾಗಿಲು ಬೆಲ್ ಮಾಡಿದಾಗ, ಬೇಸರಿಸದೇ ಎದ್ದು ಬಂದು ಬಾಗಿಲು ತೆಗೆದ.

"ಏನಯ್ಯಾ ಏನ್ಮಾಡ್ತಿದ್ದೆ?" ತಂದೆ ರಾಮಸ್ವಾಮಿ ವಿಶ್ವಾಸದಿಂದ ಕೇಳಿದಾಗ "ಟಿ.ವಿ. ನೋಡ್ತಿದ್ದೆ..." ಎಂದ.

"ಎಲ್ಲಿ ನಿಮ್ಮಮ್ಮ? ಏನು ಮಾಡ್ತಿದಾಳೆ?" ಎನುತ್ತಾ ಕೈಕಾಲು ತೊಳೆಯಲು ಬಚ್ಚಲು ಮನೆಯ ಕಡೆ ನಡೆದರು. ಸುಮಂತ ಮುಂಬಾಗಿಲಿಗೆ ಬಂದು ನಿಂತ. ತಂಗಾಳಿ ಹಿತವಾಗಿತ್ತು. ಗೇಟಿಗೆ ಬಂದು ನಿಂತು ಪಕ್ಕದ ಮನೆಯ ಕಡೆ ನೋಡಿದ. ಎರಡನೇ ಪಕ್ಕದ ಮನೆಯ ಮುಂದೆ ಹಲವಾರು ಹೆಂಗಸರು ನಿಂತು ಮಾತನಾಡುತ್ತಿದ್ದರು. ಅರೆ ಮಂದ ಬೆಳಕಿನಲ್ಲಿ ಆ ಹೆಂಗಸರು, ಚಿಕ್ಕವರೋ ದೊಡ್ಡವರೋ ಎಂದು ತಿಳಿಯದಿದ್ದರೂ, ಆ ಹುಡುಗಿ ಮತ್ತೆ ಕಣ್ಣಿಗೆ ಬಿದ್ದಾಳು ಎಂಬ ಆಸೆಯಿಂದ ನೋಡಿದ. ಒಳಗಿನಿಂದ ತಂದೆ ಕರೆದರು.

"ಎಲ್ಲೋ ನಿಮ್ಮಮ್ಮ? ಇನ್ನು ಮನೆಗೆ ಬಂದಿಲ್ಲ ತಾನೇ......?ಕತ್ತಲೆಯಾಯ್ತು. ಬೇಗ ಮನೆಗೆ ಬರಬೇಕು ಎನ್ನೋ ಪರಿಜ್ಞಾನ ಬೇಡವೇ ಅವಳಿಗೆ? ನಾನು ಹೋಗಿ ನೋಡಿಕೊಂಡು ಬರ್ತೀನಿ" ತಂದೆ ಚಪ್ಪಲಿ ಮೆಟ್ಟಿದಾಗ ತಡೆದ.

"ಬೇಡಾ ಅಪ್ಪ..... ಪಕ್ಕದ ಮನೆಗೆ ಅರಿಶಿನ ಕುಂಕುಮಕ್ಕೇಂತ ಹೋಗಿದಾಳೆ ಈಗ ಬರಬಹುದು."

"ಎಷ್ಟೊತ್ತಾಯ್ತು ಹೋಗಿ? ಈ ಹೆಂಗಸ್ರಿಗೆ ಮಾತಿಗೊಬ್ರು ಸಿಕ್ಕಿದ್ರೆ ಸಾಕು. ಮನೇನೇ ಮರೆತು ಬಿಡ್ತಾರೆ. ಇನ್ನೂ ಎಷ್ಟು ಹೊತ್ತೋ ಬರೋದು? ರಾತ್ರಿಗೆ ಅಡಿಗೆ ಮಾಡಿದಾಳೆ ತಾನೇ?"

"ಬಂದು ಬಿಡ್ತಾಳೆ ಮಾಡ್ತಾಳೆ ಬಿಡಿ."

"ಬೇಗ ಊಟ ಮಾಡಿದ್ರೆ ಒಳ್ಳೇದು ಅದಕ್ಕೇ ಹೇಳ್ತೀವಿ..... ವಯಸ್ಸಾಯ್ತು ನೋಡು" ಸುಮಂತ ಉತ್ತರಿಸಲಿಲ್ಲ. ಅಷ್ಟರಲ್ಲಿ ಸಡಗರ ಸಂಭ್ರಮದಿಂದ ಶಾಂತಮ್ಮ ಒಳಗೆ ಬಂದಳು. ಕೈಯಲ್ಲಿ ಎಲೆ ಅಡಿಕೆ ತಾಂಬೂಲ ಮುಖದಲ್ಲಿ ಮಂದಸ್ಮಿತ. ಗಂಡನನ್ನು ಕಂಡೊಡನೆ ಅವಳ ಹುಬ್ಬುಗಳು ಕೂಡಿಕೊಂಡವು. ನಗು ಮರೆಯಾಯಿತು. ಉಟ್ಟಿದ್ದ ರೇಶಿಮೆ ಸೀರೆಯನ್ನು ಬದಲಾಯಿಸಲೆಂದು ಒಳಗಿನ ಕೋಣೆಗೆ ನಡೆದಳು.

"ಹೊತ್ತಾಗುತ್ತೆ. ಬಾರೇ ಮೊದಲು ಬಡಿಸಿಬಿಡು. ಆಮೇಲೆ ಸೀರೆ ಬದಲಾಯಿಸೂವಂತೆ....."

"ಬಂದೇ..: ಯಾವಾಗ ನೋಡಿದ್ರೂ ನಿಮಗೆ ಊಟದ್ದೊಂದೇ ಚಿಂತೆ. ಗೊಣಗುತ್ತಾ ಶಾಂತಮ್ಮ ರೂಮಿನೊಳಕ್ಕೆ ಹೋದಾಗ, ರಾಮಸ್ವಾಮಿ ಮಗನ ಕಡೆ ನೋಡಿದರು. ಅವನು ನಕ್ಕಂತೆ ಮಾಡಿದ."

"ಊಟಕ್ಕೆ ಬಡಿಸುತ್ತಾ ಶಾಂತಮ್ಮ ತಾನು ಹೋಗಿ ಬಂದ ಮನೆಯ ಸಂಭ್ರಮವನ್ನು ವರ್ಣಿಸಿದಳು." "ಮಗು ಎಷ್ಟು ಮುದ್ದಾಗಿದೆ ಅಂತೀಯ ಸೋಮು....

ನೀನು ಮಗುವಾಗಿದ್ದಾಗ ಹಾಗೇ ಇದ್ದೆ....."

"ಎಂಥಾ ಮಗು? ಏನು ಹೆಸರನ್ನಿಟ್ರಂತೆ?"

"ಗಂಡು ಮಗುವಂತೆ. ಹೆಸರೇನು ಅಂತ ಕೇಳಲೇ ಇಲ್ಲ. ಏನೋ ಒಂದು ಹೆಸರನ್ನಿಟ್ಟಿರುತ್ತಾರೆ. ಅವರಿಗೆ ಬೇಕಾದ್ದು....."

"ಮಗೀನ ಕೈಗೆ ಏನು ಕೊಟ್ಟೆ?"

"ಹತ್ತು ರೂಪಾಯಿ ಕೊಟ್ಟೆ....." ಒತ್ತಿ ನುಡಿದಾಗ, ಸುಮಂತ ತಾಯಿಯನ್ನು ವಿಚಿತ್ರವಾಗಿ ನೋಡಿದ. ಈ ಕಾಲದಲ್ಲಿ ಹತ್ತು ರೂಪಾಯಿಗೆ ಬೆಲೆಯೇ ಇಲ್ಲ. ತಾಯಿಯೋ, ನೂರು ರೂಪಾಯಿ ಕೊಟ್ಟವಳಂತೆ ಬೀಗುತ್ತಿದ್ದಾಳೆ ಅಂತೆನಿಸಿತು.

"ಹತ್ತು ರೂಪಾಯೀನಾ? ಇಪ್ಪತ್ತೈದನ್ನಾದ್ರೂ ಕೊಡಬೇಕಾಗಿತ್ತು......" ರಾಮಸ್ವಾಮಿ ನುಡಿದಾಗ ಶಾಂತಮ್ಮ ಮಗನ ಕಡೆ ನೋಡಿದಳು.

"ಚೆನ್ನಾಗಿ ಹೇಳ್ತೀರಿ. ಅಲ್ಲಿ ನಿಮ್ಮ ಮನೇಲೇನು ದುಡ್ಡಿನ ಮರ ಇದೆಯೆ? ತಿಂಗಳ ಖರ್ಚೆಲ್ಲಾ ನೀವು ಕೊಡೋ ಹಣದಲ್ಲಿ ಸರಿ ತೂಗಿಸೋಳು ನಾನು. ಇದು ನಾವು ನಾವು ಹೆಂಗಸರ ವಿಚಾರ. ಇದಕ್ಕೆ ನೀವು ತಲೆ ಹಾಕಬೇಡಿ."

"ನಾನ್ಯಾಕೆ ತಲೆ ಹಾಕ಼್್ಲೀ..... ನಾನು ಬಾಯಿ ಹಾಕಿದೆ....."

"ತಲೆಯೋ? ಬಾಯಿಯೋ......? ವಿಪರೀತ ಮಾತನಾಡ್ತೀರಿ ನೀವು."

"ನಾನು? ನಾನು ವಿಪರೀತ ಮಾತನಾಡ್ತೀನಾ?" ಕೇಳಿದ್ಯೇನಯ್ಯಾ ನಿಮ್ಮಮ್ಮನ ಮಾತನ್ನ?

"ಅವನಿಗೇನು ಹೇಳ್ತೀರಿ? ಸುಮ್ಮನೇ ಊಟ ಮಾಡಿ. ಎದ್ದು ಹೋಗಿ." ಆಕೆ ಆಜ್ಞೆ ಮಾಡಿದಾಗ ಆತ ಮತ್ತೆ ಮಗನ ಕಡೆ ನೋಡಿದರು.

"ಅಮ್ಮಾ..... ಅಕ್ಕ ಮತ್ತೆ ಯಾವಾಗ ಬರ್ತಾಳಂತೆ?" ಸುಮ್ಮನೇ ಕೇಳಿದ.

"ನೆನ್ನೆ ಇನ್ನು ಫೋನ್ ಮಾಡಿಲ್ಲಲ್ಲೋ...... ಮಕ್ಕಳಿಗೆ ರಜ ಬಂದಮೇಲೆ ಮತ್ತೆ ಬರ್ತಾಳೆ. ಹೀಗೆ ಬರ್ತಾಳೆ. ಹಾಗೆ ಹೋಗ್ತಾಳೆ" ಶಾಂತಮ್ಮ ನಿಟ್ಟುಸಿರು ಬಿಟ್ಟಳು.

"ಅವಳಿಲ್ಲದ ಮನೆ ಬಿಕೋ ಅಂತ ಅನ್ನಿಸುತ್ತೆ. ಇನ್ನೊಂದೆರಡು ಹೆಣ್ಣು ಮಕ್ಕಳಿದ್ದಿದ್ದರೆ, ಮನೆ ಗಲಗಲಿ ಅಂತಿರುತ್ತಿತ್ತು." ತಂದೆಯ ಈ ಮಾತಿಗೆ ಸುಮಂತ ನಕ್ಕ.

"ಯಾಕೋ ನಗ್ತೀಯ?"

"ಎರಡು ಮಕ್ಕಳಿಗೇ ಅಮ್ಮ ಇಷ್ಟು ಲೆಖ್ಖಾಚಾರ ಹಾಕ್ತಾಳೆ. ನಾಲ್ಕು ಮಕ್ಕಳಾಗಿದ್ದರೆ ಏನು ಗತಿ ಅಂತ?"

"ನಿನಗೆ ಎಲ್ಲಾ ತಮಾಷೆ. ನಾನು ಲೆಖ್ಖ ಹಾಕೋದು, ನಿಮ್ಮಪ್ಪನ ಪೆನ್ಶನ್ ಹಣಾನ, ಮಕ್ಕಳನ್ನಲ್ಲ." ಸುಮಂತ ಮತ್ತೆ ನಕ್ಕ.

"ಸುಮ್ನೆ ಊಟ ಮಾಡು ನನ್ನ ಮಾತೆಲ್ಲಾ ನಿನಗೆ ತಮಾಷೆಯಾಗಿ ಕಾಣುತ್ತೆ."

"ಅಂದ್ಹಾಗೇ ಅವರ ಮನೇಲಿ ಏನು ಕೊಟ್ರೇ?"

"ನಾಲ್ಕು ನಾಲ್ಕು ಕಾಳು ಗುಗ್ಗುರಿ. ಒಬ್ಬರ ಹಲ್ಲಿಗೆ ಸಾಕಾಗುಲ್ಲ."

"ಎಷ್ಟು ಕೊಟ್ರು ಅಂತ ನಾನು ಕೇಳಲಿಲ್ಲ. ಹೋಗಲಿ. ನನಗೊಂದು ಕಾಳು, ನಿನ್ನ ಮಗನಿಗೊಂದು ಕಾಳನ್ನು ಹಾಕು. ನೀನು ಕಷ್ಟ ಪಟ್ಟು ಹೋಗಿ ತಂದಿದೀಯ. ನಿನಗೆ ಎರಡು ಕಾಳಿರಲಿ."

"ಹೊಟ್ಟೆಗೆ ಅನ್ನ ಬಿದ್ದ ಕೂಡಲೇ ಮಜವಾಗಿ ಮಾತಿಗೆ ಶುರು ಮಾಡ್ತೀರಿ. ನನಗಿನ್ನು ಬೇಕಾದಷ್ಟು ಕೆಲಸವಿದೆ. ಏಳೋ ಸೋಮಾ ಊಟ ಆಗಿದ್ರೆ ಎದ್ದು ಕೈ ತೊಳಕೋ...." ತಂದೆ ಮಗ ಮುಂದೆ ಮಾತಿಲ್ಲದೇ ಊಟ ಮುಗಿಸಿ ಎದ್ದರು. ಶಾಂತಮ್ಮ

ಅಡಿಗೆ ಮನೆಯ ಉಳಿದ ಕೆಲಸಗಳನ್ನೆಲ್ಲ ಮುಗಿಸಿ ಹೊರ ಬಂದಳು. ಅಪ್ಪ ಮಗ ಟಿ.ವಿ.ಯ ಮುಂದೆ ಕೂತಿದ್ದರು. ಸೆರಗಿನಲ್ಲಿ ಕೈ ಒರೆಸುತ್ತಾ ತಾನೂ ಕುಳಿತಳು. ಅಲ್ಲೇ ಟೀಪಾಯಿ ಮೇಲಿದ್ದ ದೊನ್ನೆಯಲ್ಲಿದ್ದ ಗುಗ್ಗುರಿಯನ್ನು ಇಬ್ಬರ ಕೈಗೂ ಚೂರು ಚೂರು ಹಾಕಿದಳು. ಅಲ್ಲಿಯ ಸಂಭ್ರಮವನ್ನು ಮತ್ತೆ ವರ್ಣಿಸಲು ಪ್ರಾರಂಭಿಸಿದಳು.

“ನ್ಯೂಸ್ ಕೇಳ್ತಾ ಇದೀನಿ. ಸ್ವಲ್ಪ ಸುಮ್ನಿರ್ತೀಯಾ?” ತಂದೆ ನುಡಿದಾಗ, ಶಾಂತಮ್ಮ ಪೆಚ್ಚಾದಳು. ಆಚಿ ಮನೇಲಿದ್ದಾಗ, ಹೀಗಿರಲಿಲ್ಲ. ನನ್ನ ಮಾತುಗಳನ್ನೆಲ್ಲ ಆಸಕ್ತಿಯಿಂದ ಕೇಳಿಕೊಳ್ಳುತ್ತಿದ್ದಳು. ಈಗ ಹಾಗಲ್ಲ, ಗಂಡನಿಗೆ ನನ್ನ ಮಾತುಗಳನ್ನು ಆಲಿಸುವ ಸಹನೆ ಇಲ್ಲ. ಮಗ ಬೆಳೆದು ದೊಡ್ಡವನಾಗಿದಾನೆ. ಅವನಿಗೆ ಈ ಮಾತುಗಳು ಬೇಕಿಲ್ಲ. ತಾನೀಗ ಒಂಟಿಯೆನಿಸಿತು. ಈ ಮನೇಲಿ ಬರೀ ಅಡಿಗೆ ಕೆಲಸಕ್ಕೆ ಮಾತ್ರ ನಾನು. ನನ್ನ ಆಸೆ ಆಸಕ್ತಿಗಳ ಬಗ್ಗೆ ಈ ಅಪ್ಪ ಮಗನಿಗೆ ಗಮನವೇ ಇಲ್ಲ. ಆಕಳಿಸಿದಳು.

“ಶಾಂತೂ, ಒಂದ್ಲೋಟ ಕುಡಿಯೋಕೆ ನೀರು ಕೊಡ್ತೀಯೇನೇ......”

“ಯಾಕೆ ಗುಗ್ಗುರಿ ಹೆಚ್ಚಾಯ್ತಾ?” ವ್ಯಂಗ್ಯವಾಗಿ ಕೇಳಿದಳು.

“ಸ್ವಲ್ಪ ಉಪ್ಪು ಖಾರ ಹೆಚ್ಚಾಗಿತ್ತು.... ಬಾಯಾರ್ತಿದೆ ಅಷ್ಟೇ....”

“ಸರಿ ತಂದು ಕೊಡ್ತೀನಿ. ನಿನಗೂ ಬೇಕೇನೋ ಸೋಮು?”

“ಏನೂ ಬೇಡ ಬಿಡು.... ಬೇಕಾದ್ರೆ ನಾನೇ ತಗೋತೀನಿ”

ರಾಮಸ್ವಾಮಿ ಪತ್ನಿ ಕೊಟ್ಟ ತಣ್ಣೀರನ್ನು ಗಟಗಟನೆ ಕುಡಿದು, ಎದ್ದು ಮಲಗುವ ಕೋಣೆಯ ಕಡೆ ನಡೆದರು. ಸುಮಂತ ಟಿ.ವಿ.ಯ ಚಾನೆಲ್ಲನ್ನು ಬದಲಾಯಿಸಿದ. ಫೋನು ರಿಂಗಾಯಿತು. ಫೋನನ್ನೆತ್ತಿ ಕೊಂಡ. ಯಾವುದೋ ಹುಡುಗಿ ಮಾತನ್ನಾಡುತ್ತಿದ್ದಳು. “ರಾಂಗ್ ನಂಬರ್” ಎಂದು ಹೇಳಿ ರಿಸೀವರ್‌ನ ಕೆಳಗಿಟ್ಟ. ಮತ್ತೆ ಆ ಹುಡುಗಿ ನೆನಪಿಗೆ ಬಂದಳು. ಮನ ಮುದಗೊಂಡಿತು. ಆ ಹುಡುಗಿ ಯಾರು? ಅವಳ ಹೆಸರೇನು? ಎಷ್ಟು ವಯಸ್ಸಿರಬಹುದು? ಮನಸ್ಸು ಅವಳ ಸುತ್ತ ಮುತ್ತ ಓಡಾಡಿತು.

“ಮಲಕ್ಕೊಳಲ್ವೇನೋ ಸೋಮು? ನಿಮ್ಮಪ್ಪ ಆಗಲೇ ಗೊರಕೆ ಹೊಡೀತಿದಾರೆ......” ತಾಯಿ ಕೇಳಿದಾಗ ತಲೆ ಆಡಿಸಿದ.

“ಇನ್ನು ಹತ್ತು ಗಂಟೆ ಸಹ ಆಗಿಲ್ಲ. ನಿದ್ದೆ ಬರುಲ್ಲ ಅಮ್ಮ”

“ಕಂಪ್ಯೂಟರ್ ಇನ್ನೂ ಉರೀತಿದೆ. ಆರಿಸೇ ಇಲ್ಲ.”

“ಹೌದಾ? ಮರತೇ ಹೋಯ್ತು” ಎನ್ನುತ್ತಾ ಎದ್ದು. ಆರಿಸಿ ಬಂದ.

“ಏನು ಹುಡುಗರೋ? ಎಲ್ಲಾ ಏಷ್ಟೆಷ್ಟೋ ಬೇಗ ಮರೀತೀರಿ. ಮುಂದೆ ನಿಮ್ಮ ಗತಿ ಏನೂಂತ? ಎಲ್ಲಾ ನೆನಪಿಸೋಕೆ ನಾನೇ ಇರ್ತೀನಾ?” ಸುಮಂತ ಬಾಯಿ ತುಂಬಾ ನಕ್ಕ.

“ಇದೇ ಮಾತನ್ನು ನೀನು ಆಚಿಗೂ ಹೇಳ್ತಿದ್ದೆ. ಅವಳೀಗ ಅವಳ ಗಂಡನ ಮನೆಯಲ್ಲಿ ಹಾಯಾಗಿದಾಳೆ.”

“ಅವಳ ಅತ್ತೇನೂ ಇದೇ ಮಾತನ್ನು ಹೇಳುತ್ತಿರುತ್ತಾರೆ. ನೀನು ಏನೇ ಹೇಳು. ನಿಮ್ಮಗಳಿಗೆ ಜವಾಬ್ದಾರಿ ಕಡಿಮೆ.......”

“ಚಿಕ್ಕೋರಿಗೆ ಜವಾಬ್ದಾರಿ ಕಲಿಸಿಕೊಡೋಕೆ ತಾನೇ ನೀವು ಹಿರಿಯೋರು ಅಂತ ಇರೋದು” ನಕ್ಕ.

“ಹುಂ....... ಹುಂ.... ನಾವುಗಳು ಸದಾ ಕಲಿಸಿಕೊಡೋದೇ ಆಯ್ತು. ಆದರೆ ನೀವುಗಳು ಮಾತ್ರ ಕಲೀಲಿಲ್ಲ. ನಿಮ್ಮಕ್ಕನಂತೂ ಇಲ್ಲಿದ್ದಾಗ ನನ್ನನ್ನ ಅಷ್ಟು ಕೆರಳಿಸುತ್ತಿದ್ಲು. ಈಗ ಎಲ್ಲಾ ಹೇಗೆ ಅನುಸರಿಸುತ್ತಾಳೋ ಶಿವನೇ ಬಲ್ಲ. ಪಾಪ..... ಅವರತ್ತೆ

ಒಳ್ಳೆಯವರು. ಒಂದು ದಿನವಾದ್ರೂ ಸೊಸೆ ಮೇಲೆ ಚಾಡಿ ಹೇಳ್ದೋರಲ್ಲ..."

"ಒಂದು ವೇಳೆ ಹೇಳ್ತಿದ್ರು ಅಂತಿಟ್ಕೋ. ಆಗೇನು ಮಾಡ್ತಿದ್ದೆ?"

"ಅದೂ ಸಿಜಾ ಅನ್ನು." ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಅಂತ ಗಾದೇನೇ ಇದೆ. ಅವರ ಮನೆ ವಿಷಯಕ್ಕೆ ನಾವು ತಲೆ ಹಾಕಬಾರದು....

"ತಲೆ ಅಲ್ಲ ಬಾಯಿ......" ನಗುತ್ತಾ ತಿದ್ದಿದ.

"ಏನೋ ಒಂದು..... ನೀವು ಅಪ್ಪ ಮಕ್ಕಳಿಗೆ ಬೇರೆ ಕೆಲಸವೇ ಇಲ್ಲ. ನನ್ನನ್ನು ತಿದ್ದೋದೇ ಆಯ್ತು..." ಮುನಿಸಿಕೊಂಡಳು.

"ಹೋಗಲಿ ಬಿಡಮ್ಮ. ಕೋಪ ಯಾಕೆ ಮಾಡಿಕೊಳ್ತೀಯ" ತಾಯಿಗೆ ಸಮಾಧಾನ ಹೇಳಿದ ಕೆಲ ನಿಮಿಷ ಸುಮ್ಮನಿದ್ದ. ತಾಯಿ ಮತ್ತೆ ಪ್ರಶ್ನಿಸಿದಳು.

"ಇಂಟರ್‌ವ್ಯೂ ಯಾವಾಗ ಅಂತಂದೆ?"

"ಯಾವ ಇಂಟರ್‌ವ್ಯೂ?"

"ಇದೇನೋ ಇಷ್ಟೇ ಬೇಗ ಮರೆತು ಬಿಟ್ಯಾ? ಕೆಲಸಕ್ಕೆ ಅರ್ಜಿ ಹಾಕಿದ್ಯಲ್ಲಾ..."

"ಓ ಅದಾ? ಮುಂದಿನವಾರ....." ಸಪ್ಪಗೆ ನುಡಿದ.

"ಈ ಸಲವಾದ್ರೂ ನಿನಗೆ ಇಷ್ಟವಾದ ಕೆಲಸ ಸಿಗಲಿ. ತಿರುಪತಿ ತಿಮ್ಮಪ್ಪನಿಗೆ ಹರಕೆ ಕಟ್ಟಿದ್ದೀನಿ."

"ಅದೇನೂ ಬೇಡ" ಅಂತ ಎಂದಿನಂತೆ ಹೇಳ ಹೊರಟವನು ಏನನ್ನೋ ನೆನೆದು ಸುಮ್ಮನಾದ. ತಾಯಿಗೆ ದೇವರ ಮೇಲೆ ನಂಬಿಕೆ. ನಾನು ಏನನ್ನಾದರೂ ಆಡಿದರೆ ಅವಳ ಮನಸ್ಸಿಗೆ ನೋವಾಗುತ್ತದೆ. ಮಾತಿಗೆ ಮಾತು ಬೆಳೆಯುತ್ತದೆ ಅಂತ ಗೊತ್ತಿತ್ತು. ಸುಮ್ಮನಾದ.

"ನಾನು ಮಲಕ್ಕೋತೀನಪ್ಪಾ..... ಬೆಳಿಗ್ಗೆ ಕೋಳಿ ಕೂಗೋ ಮೊದಲೇ ನಿಮ್ಮಪ್ಪ ಎದ್ದು ಬಿಡ್ತಾರೆ. ಆಮೇಲೆ ನನಗೂ ನಿದ್ದೆ ಮಾಡೋಕೆ ಬಿಡಲ್ಲ." ತಾಯಿ ಅತ್ತ ಹೋದರೂ, ಇವನು ಏನನ್ನೊ ಚಿಂತಿಸುತ್ತಾ ಹಾಗೇ ಕೂತಿದ್ದ. ಇದ್ದಕ್ಕಿದ್ದಂತೆ ಕರೆಂಟು ಹೋಯಿತು. ಟಿ.ವಿ. ನಿಂತಿತು. ಕತ್ತಲೆಯಲ್ಲೇ ತಡಕಾಡಿ, ಟಿ.ವಿ.ಯ ಸ್ವಿಚ್ಚನ್ನು ಆರಿಸಿ, ಹಾಲಿನ ದೀಪದ ಸ್ವಿಚ್ಚನ್ನು ಹುಡುಕಿ ಆರಿಸಿದ. ಕೆಲವೇ ನಿಮಿಷಗಳಲ್ಲಿ ಕಣ್ಣುಗಳು ಕತ್ತಲೆಗೆ ಹೊಂದಿಕೊಂಡಿತು. ಹಾಗೇ ಒಂದು ಅಂದಾಜಿನ ಮೇಲೆ ತನ್ನ ರೂಮಿಗೆ ಬಂದ. ಕಂಪ್ಯೂಟರ್‌ಗೆ ಕವರ್ ಹೊದಿಸಿ, ಮಂಚದ ಮೇಲೆ ಉರುಳಿಕೊಂಡ. ಈಗಲೇ ನಿದ್ದೆ ಹತ್ತಿರ ಸುಳಿಯುವುದಿಲ್ಲವೆನ್ನುವುದನ್ನು ಬಲ್ಲ. ಮತ್ತೆ ಆ ಹುಡುಗಿಯ ಚಿತ್ರ ಮನ ಪಟಲದ ಮುಂದೆ ಬಂದು ನಿಂತಿತು. ಮುಂಬಾಗಿಲಿನಲ್ಲಿ ನಿಂತಿದ್ದವಳ ಕೆಂಪಡರಿದ್ದ ಆ ಮುಖವನ್ನು ಮಾತ್ರ ಗಮನಿಸಿದ್ದ. "ಪಾಪ, ನನ್ನ ಮಾತಿನಿಂದ ಆ ಹುಡುಗಿಗೆ ನಾಚಿಕೆ ಆಗಿರಬೇಕು" ಎಂದುಕೊಂಡ. ವಿಪರೀತ ಸೆಕೆ ಎನಿಸಿದಾಗ, ಕಿಟಕಿಯನ್ನು ತೆಗೆದು ತಂಗಾಳಿಗೆ ಮುಖ ಒಡ್ಡಿದ. ಆ ಪಕ್ಕದ ಮನೆಯ ಬಳಿ ನಾಲ್ಕಾರು ಜನ ನಿಂತು ಮಾತಾಡುತ್ತಿದ್ದರು. ಆ ಹುಡುಗಿಯ ದನಿ ಕೇಳಿಸಬಹುದೇ ಅಂತ ಒಂದುಗಳಿಗೆ ಆಲಿಸಿದ ಆದರೆ, ಯಾರು ಯಾವ ಮಾತನ್ನಾಡುತ್ತಿದ್ದಾರೆಂದು ಸರಿಯಾಗಿ ಕೇಳಿಸದಿದ್ದಾಗ ಬೇಸರವೆನಿಸಿತು. ಮತ್ತೆ ಒಂದು ಹಾಸಿಗೆಯ ಮೇಲೆ ಉರುಳಿಕೊಂಡ. ಕಡೆಗೂ ಒಂದು ಹೊತ್ತಿನಲ್ಲಿ ನಿದ್ದೆ ಹತ್ತಿತು.

* * *

ರಾಮಸ್ವಾಮಿಗಳು, ರಾಜ್ಯ ಸರ್ಕಾರದ ಒಂದು ಕಛೇರಿಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದವರು. ಅವರ ಪತ್ನಿ ಶಾಂತಮ್ಮ ದೊಡ್ಡ ಕುಟುಂಬದಿಂದ ಬಂದವಳು. ಮನೆಯ ಕೆಲಸ ಕಾರ್ಯಗಳಲ್ಲಿ ನಿಪುಣೆ. ಮೊದಲಿನಿಂದಲೂ ಗಂಡ, ತಿಂಗಳ ಕಡೆಯಲ್ಲಿ ತಂದು

ಕೈಗೆ ಕೊಡುತ್ತಿದ್ದ ಹಣದಲ್ಲಿ ಒಪ್ಪ ಓರಣದಿಂದ ಸಂಸಾರ ನಡೆಸಿ, ಒಂದು ಪುಟ್ಟ ಕೈಗಂಟನ್ನು ಸಹ ಮಾಡಿಟ್ಟುಕೊಂಡಿದ್ದಳು. ಅದೂ, ಒಮ್ಮೊಮ್ಮೆ ಹಬ್ಬ ಹರಿದಿನಗಳಲ್ಲಿ ಸಹಾಯಕ್ಕೆ ಒದಗುತ್ತಿತ್ತು.

"ಥೂ, ನನ್ನ ಹಣೇಬರಹ ಇಷ್ಟೇ ಆಯ್ತು. ಏನಾದ್ರೂ ಒಡವೆ ವಸ್ತು ತಗೊಳ್ಳೋಣ ಅಂತಂದ್ರೆ ಆಗೋದೇ ಇಲ್ಲ" ಗೊಣಗುವಾಗ ರಾಮಸ್ವಾಮಿ ಸಮಾಧಾನ ಹೇಳುತ್ತಿದ್ದರು.

"ಒಡವೆ, ಅದೂ ಇದೂ ಅಂತ ಯಾಕೆ ಒದ್ದಾಡ್ತೀಯ? ಅದು ಇದ್ದಷ್ಟೂ ಭಯ ಜಾಸ್ತಿ ಆಗುತ್ತೆ."

"ಹಾಗಂತ ಮೈಮೇಲೆ ಚಿನ್ನ ಇರಬಾರದು ಅಂತ ಯಾರಾದ್ರೂ ಹೇಳ್ತಾರಾ?"

"ಈಗ ಇದೆಯಲ್ಲ. ಅಷ್ಟು ಸಾಕು ಅಂತ ಹೇಳ್ದೆ"

"ನೀವು ಗಂಡಸ್ರು. ನಿಮಗೆ ಗೊತ್ತಾಗುಲ್ಲ. ಹೆಂಗಸ್ರು ಸೇರಿದಾಗ, ಕತ್ತು, ಕೈ, ನೋಡಿದಾಗ ಕುತ್ತಿಗೆ ಹಿಸುಕಿಕೊಳ್ಳುವಷ್ಟು ಹಿಂಸೆ ಆಗುತ್ತೆ. ಅದೆಲ್ಲಾ ನಿಮಗೆ ಹೇಗೆ ತಿಳಿಯುತ್ತೆ..."

"ಯಾವುದು? ಕುತ್ತಿಗೆ ಹಿಸುಕೋದಾ?....." ಆತನ ತಮಾಷೆ ಮಾತು ಆಕೆಗೆ ಹಿಡಿಸುತ್ತಿರಲಿಲ್ಲ.

"ನಿಮಗೆ ಎಲ್ಲಾ ತಮಾಷೇನೇ..... ಒಡವೆ ಮಾಡಿಸಿ ಕೊಡೋಕೆ ಇಷ್ಟವಿಲ್ಲದಿದ್ದರೆ ಈಗಲೇ ಹೇಳಿಬಿಡಿ. ನಾನು ಮತ್ತೆಂದೂ ಕೇಳುವುದಿಲ್ಲ."

"ನಾನು ಹಾಗೆಲ್ಲಿ ಹೇಳಿದೆ ಚಿನ್ನಾ? ಬೋನಸ್ ದುಡ್ಡನ್ನೆಲ್ಲಾ ನಿನ್ನ ಕೈಗೆ ಕೊಡ್ತೀನಿ. ಏನು ಒಡವೆ ಬೇಕೋ ಮಾಡಿಸ್ಕೋ...." ಗಂಡ ಬಿಳಿ ಸಾರಿದಾಗ, ಆಕೆ ಕೊಸರಿಕೊಳ್ಳಲಿಲ್ಲ.

"ಅಂತೂ ನಯವಾದ ಮಾತಿನಲ್ಲೇ ನಿಮ್ಮ ಆಸೆ ಪೂರೈಸಿಕೊಳ್ತೀರಿ. ನನ್ನ ಆಸೆಗಳು ಮಾತ್ರ ಹಾಗೇ ಉಳಿದಿವೆ..."

"ನಿನ್ನ ಆಸೆಗಳು ಏನೇನು ಅಂತ ನನಗೆ ಗೊತ್ತು ಚಿನ್ನಾ..... ಮಕ್ಕಳಾಗಿಲ್ಲ ಅಂತ ನಿನಗೆಷ್ಟು ಕೊರಗೋ.. ಅಷ್ಟೇ ಬೇಸರ ನನಗೂ ಇದೆ. ನಾವಿಬ್ರೂ ಈಗ ಹಾಯಾಗಿದೀವಲ್ಲ. ಇನ್ನು ಒಂದೆರಡು ವರ್ಷ ಕಳೆಯಲಿ ಬಿಡು....."

"ನಿಮಗೆ ಹೇಗೆ ಹೇಳಲಿ ನಾನು? ಹೆಂಗಸರೆಲ್ಲ ವಿಚಿತ್ರವಾಗಿ ನೋಡೋವಾಗ ನನಗೆ ಹೇಗ್ಹೇಗೋ ಆಗುತ್ತೆ."

"ಅದಕ್ಕೇ ನಾನು ಹೇಳೋದು. ನೀನು ಅವರಿವರ ಮನೆಗೆ ಹೋಗಲೇ ಬೇಡಾಂತ...."

"ಈ ಮಾತೇ ನನಗೆ ಇಷ್ಟವಿಲ್ಲ. ಅರಿಶಿನ, ಕುಂಕುಮ, ಅದೂ ಇದು ಅಂತ ಹೆಂಗಸರನ್ನು ಕರದ್ರೆ ಅದಕ್ಕೂ ಹೊಗೋದು ಬೇಡ ಅಂತ ಅಂತೀರಲ್ಲ ನೀವು.."

"ನಾನು ಬೇಡಾಂತ ಯಾಕೆ ಹೇಳಿದೆ ಗೊತ್ತಾ? ಅವರುಗಳ ನಡೆವಳಿಕೆಯಿಂದ ನಿನಗೆ ಬೇಸರವಾಗುತ್ತಲ್ಲ ಅಂತ. ಅಷ್ಟೇ ಕಣೇ......"

"ಸಾಕು ಸಾಕು.... ನನಗೆಲ್ಲಾ ಗೊತ್ತು. ನನಗೋಸ್ಕರ ಖರ್ಚು ಮಾಡೋಕೆ ನಿಮಗೆ ಇಷ್ಟವಿಲ್ಲ. ನಾನು ಅವತ್ತೇ ಹೇಳಿದ್ದೆ. ಡಾಕ್ಟರ ಹತ್ತಿರ ಹೋಗೋಣ ಅಂತ, ಕರಕೊಂಡೇ ಹೋಗಲಿಲ್ಲ ನೀವು."

"ಡಾಕ್ಟರಾ? ಯಾತಕ್ಕೆ?...... ಆತ ಬೆಪ್ಪನಂತೆ ಕೇಳಿದ."

"ಆಗಲೇ ಮರೆತು ಬಿಟ್ರಾ? ನಮಗೆ ಮದುವೆಯಾಗ ನಾಲ್ಕು ವರ್ಷಗಳಾದವು.

ಇನ್ನು ಯಾಕೆ ಮಕ್ಕಳಾಗಿಲ್ಲ ಅಂತ.... ಡಾಕ್ಟರಿಗಾದರೆ ಏನೇ ದೋಷಗಳಿದ್ದರೂ ತಿಳಿಯುತ್ತೆ..."

"ಸರಿ. ಡಾಕ್ಟರ ಬಳಿಗೆ ಹೋಗಲೇ ಬೇಕೂಂತ ಆಸೆ ಇದ್ದರೆ ಹೋಗಿ ಬಾ. ಎಷ್ಟೇ ಖರ್ಚಾದರೂ ಪರವಾಗಿಲ್ಲ. ಇಲ್ಲೇ ಪತ್ತಿರ ಯಾರಾದ್ರೂ ಲೇಡಿ ಡಾಕ್ಟರ್ ಇದ್ದಾರಾ?"

"ದೊಡ್ಡಾಸ್ಪತ್ರೆಗೆ ಹೋಗೋಣ ಅಂತ"

"ಬೇಡ. ಗವರ್ನಮೆಂಟ್ ಹಾಸ್ಪಿಟಲ್ ಬೇಡ. ಯಾವುದಾದ್ರೂ ಪ್ರೈವೇಟ್ ನರ್ಸಿಂಗ್ ಹೋಂಗೆ ಹೋಗು."

"ಹೋಗು ಹೋಗು ಅಂತ ಅಂದರೆ..... ನೀವು ಬರೋಲ್ವಾ?"

"ಅದೆಲ್ಲಾ ಹೆಂಗಸರ ಸಮಾಚಾರ..... ನನಗೆ ಅದೆಲ್ಲಾ ತಿಳಿಯುಲ್ಲ. ಬೇಕಾದ್ರೆ ಪಕ್ಕದ ಮನೆಯವರನ್ಯಾರನ್ನಾದ್ರೂ ಕರೆದುಕೊಂಡು ಹೋಗು."

"ಊರಿಂದ ಅತ್ತಿಗೇನ ಕರೆಸ್ತೀನಿ..."

"ಅತ್ತಿಗೆಯೂ ಬೇಡ. ಅಕ್ಕನೂ ಬೇಡ. ನೆರೆಹೊರೆಯ ಹೆಂಗಸರೇ ಇಂಥಾ ವಿಷಯಗಳಲ್ಲಿ ತಿಳಿದವರಾಗಿರುತ್ತಾರೆ. ಪಕ್ಕದ ಮನೇಲಿ ಯಾರೋ ದೊಡ್ಡ ಹೆಂಗಸು ಇದ್ದಾರೆ ಅಂತ ಅಂದ್ಯಲ್ಲಾ ಅವರನ್ನ ಕೇಳಿ ನೋಡು." ಅಲ್ಲಿಗೆ ಆ ವಿಷಯ ಮುಗಿಯಿತು ಎಂಬಂತೆ ಆತ ಹಾಯಾಗಿ ನಿದ್ರಿಸಿದ.

ಶಾಂತ ಬೆಳಗಾಗುವುದನ್ನೇ ಕಾದಿದ್ದು, ಬೇಗ ಬೇಗ ಮನೆ ಕೆಲಸಗಳನ್ನು ಮುಗಿಸಿ, ಗಂಡ ಆಫೀಸಿಗೆ ಹೊರಡುವುದನ್ನೇ ಕಾದಿದ್ದು, ಮನೆಗೆ ಬೀಗ ಹಾಕಿ, ಪಕ್ಕದ ಮನೆಗೆ ಬಂದಳು.

ಅದೂ ಇದೂ ಮಾತಿನ ನಂತರ ಡಾಕ್ಟರ ಪ್ರಸ್ತಾಪ ಬಂತು. ಮನೆಯ ಹಿರಿಯ ಹೆಂಗಸು ಪಾರ್ವತಮ್ಮ ನುಡಿದರು.

"ಇದಕ್ಕೆಲ್ಲಾ ಲೇಡಿ ಡಾಕ್ಟರ್ ಯಾಕೆ? ಇಲ್ಲೊಬ್ಬರು ಪಂಡಿತರಿದ್ದಾರೆ. ಜಾತಕ ನೋಡಿ ಎಲ್ಲಾ ಹೇಳ್ತಾರೆ. ಅವರೇ ಔಷಧವನ್ನು ಕೊಡ್ತಾರೆ. ನಾನು ಬೇಕಾದ್ರೆ ಈಗಲೇ ಕರೆದುಕೊಂಡು ಹೋಗ್ತೀನಿ"

ಶಾಂತ ಪೆಚ್ಚಾದಳು. ಆಕೆ ಮತ್ತೆ ನುಡಿದರು.

"ಇಂಗ್ಲೀಷು ಡಾಕ್ಟರು, ಅದೂ ಇದೂ, ಆ ಟೆಸ್ಟು ಈ ಟೆಸ್ಟು ಅಂತ ಸಿಕ್ಕಾಬಟ್ಟೆ ಹಣ ಖರ್ಚಾಗುತ್ತೆ. ಪಂಡಿತರು ಹಾಗೇ ಬಿಟ್ಟಿ ಔಷಧಿ ಕೊಡ್ತಾರೆ. ಸಮಾಜಸೇವೆ ಅಂತ, ತಮ್ಮ ಕೈಲಾದ ಸಹಾಯ ಮಾಡ್ತಾರೆ. ನಿನಗೆ ನಂಬಿಕೆ ಇಲ್ಲದಿದ್ದರೆ ಬೇಡ ಬಿಡು. ಇವಕ್ಕೆಲ್ಲ ನಂಬಿಕೆ ಮುಖ್ಯ."

"ಹಾಗಲ್ಲ. ನಮ್ಮ ಯಜಮಾನರು ಏನಂತಾರೋ ಅಂತ...."

"ಏನಂತಾರೆ ನಿಮ್ಮ ಯಜಮಾನ? ಇಂಥ ವಿಷಯಗಳಲ್ಲಿ ಗಂಡಸರಿಗೆ ತಿಳುವಳಿಕೆ ಸಾಲದು. ಮಕ್ಕಳಾಗಿಲ್ಲ ಅಂತ ಚಿಂತೆ ಸಹ ಇಲ್ಲ, ನನ್ನ ಗಂಡನಿಗೆ ಅಂತ ನೀನೇ ಹೇಳ್ದೆ ಈಗ....."

ಶಾಂತ ದಂಗಾದಳು. "ಭಲೇ ಖಿಲಾಡಿ ಈ ಹೆಂಗಸು" ಸ್ವಲ್ಪ ಹುಷಾರಾಗಿರ ಬೇಕು ಅಂತಂದುಕೊಂಡಳು.

"ನೋಡಮ್ಮ ಇಂಥ ವಿಷಯಗಳಲ್ಲಿ ಮೀನಾ-ಮೇಷಾ ಎಣಿಸಬಾರದು. ಈಗಾಗ್ಲೇ ಮದುವೆಯಾಗಿ ನಾಲ್ಕು ವರ್ಷಗಳಾಯ್ತು ಅಂತ ಅಂತೀಯ. ನಿನಗೀಗ ಎಷ್ಟು ವರ್ಷ? ನೀವಿಬ್ರೂ ಅನ್ಯೂನ್ಯವಾಗಿ ಇದೀರೋ ಇಲ್ವೋ.....?" ಶಾಂತ ನಾಚಿದಳು.

ಗಂಡ ಅತಿ ರಸಿಕನೇ ದಾಂಪತ್ಯ ಜೀವನದಲ್ಲಿ ಯಾವ ಕೊರತೆ ಇರಲಿಲ್ಲ. ಆದರೆ ಅದನ್ನೆಲ್ಲ ಹೇಗೆ ಹೇಳೋದು?

"ನಿಮ್ಮತ್ತೆ ಬದುಕಿದ್ದಿದ್ರೆ ಇದುವರೆಗೂ ಸುಮ್ಮನೇ ಬಿಡ್ತಿದ್ರಾ? ನಿನ್ನ ಗಂಡನಿಗೆ ಇನ್ನೊಂದು ಮದುವೆ ಮಾಡಿರುತ್ತಿದ್ದರು." ಶಾಂತ ಹೌಹಾರಿದಳು. "ಹೌದು ಈಕೆಯ ಮಾತಿನಲ್ಲಿ ಅರ್ಥವಿದೆ ಅಂತನ್ನಿಸಿತು."

"ಹೌದು. ಹೀಗೇ ಅಂತ ಹೇಳೋ ಹಿರಿಯರಿಲ್ಲ... ನಮ್ಮ ಮನೇಲಿ ನಾವಿಬ್ರೂ ಚಿಕ್ಕವರು. ನಮಗೇನೂ ಅನುಭವ ಸಾಲದು....." ನನಗೀಗ ಇಪ್ಪತ್ತೆರಡು ವರ್ಷ. ನಮ್ಮವರು ನನಗಿಂತ ಎಂಟುವರ್ಷಕ್ಕೆ ದೊಡ್ಡೋರು.

"ಅಂದ್ರೆ..... ನಿನ್ನ ಗಂಡನಿಗಾಗಲೇ ಮೂವತ್ತು ವರ್ಷ.... ಇನ್ನು ತಡ ಮಾಡಬಾರದು. ಮದುವೆಯಾದ ವರ್ಷದೊಳಗೆ ಮೂರು ತಲೆ ಆಗಬಾರದು ಅಂತಂತಾರೆ. ಅದೇನೋ ಸರಿ. ಆದರೆ ನಾಲ್ಕು ವರ್ಷಗಳಾದ್ರೂ ಮಕ್ಕಳಾಗಲಿಲ್ಲ ಅಂತಂದ್ರೆ ಖಂಡಿತಾ ಏನೋ ದೋಷವಿದೆ. ನೀನು ಏನೂ ಯೋಚನೆ ಮಾಡಬೇಡ. ಒಂದೊಂದು ದೋಷಕ್ಕೂ ಒಂದೊಂದು ಪರಿಹಾರವಿದ್ದೇ ಇರುತ್ತೆ. ಮೊದಲು ನಿಮ್ಮಿಬ್ಬರ ಜಾತಕವನ್ನು ಪಂಡಿತರಿಗೆ ತೋರಿಸೋಣ. ಸಂತಾನಯೋಗ ಇದೆಯೋ ಇಲ್ಲವ್ರೋ ತಿಳಿಯುತ್ತೇ."

ಶಾಂತ ಬೆವತು ಹೋದಳು. ಪಂಡಿತರು ಏನು ಹೇಳಿ ಬಿಡುವರೋ ಎಂಬ ಆತಂಕ ಅವಳನು ಕಾಡಿತು. "ನೀನು ಮನೆಗೆ ಹೋಗಿ ಜಾತಕಗಳನ್ನು ತೆಗೆದುಕೊಂಡು ಬಾ.... ಹಾಗೇ ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿಟ್ಟು ಕೈ ಮುಗಿದು ಬಾ... ಎಲ್ಲಾ ಒಳ್ಳೇದಾಗುತ್ತೆ."

ಆಕೆಯ ಅಪ್ಪಣೆಯ ಮಾತುಗಳನು ಪಾಲಿಸುವವಳಂತೆ ಶಾಂತ ಎದ್ದಳು. ಏನೋ ಆತಂಕ. ದುಗುಡದಿಂದ ಎದೆ ಭಾರವಾಗಿತ್ತು. ಗಂಡನಿಗೆ ತಿಳಿದರೆ ಏನನ್ನುವರೋ ಎನ್ನುವ ಭಯ. ಮನೆ ದೇವರನ್ನು ನೆನೆಯುತ್ತಾ ತನ್ನ ಮನೆಗೆ ಬಂದಳು.

ದೇವರ ಮುಂದೆ ತುಪ್ಪದ ದೀಪಗಳನ್ನು ಬೆಳಗಿಸಿ ಭಕ್ತಿಯಿಂದ ದೇವರಿಗೆ ಕೈ ಮುಗಿದು ಜಾತಕದ ಪ್ರತಿಗಳನ್ನು ಹಿಡಿದು ಹೊರಟಳು. ಪಾರ್ವತಮ್ಮನೂ ಸಿದ್ಧರಾಗಿ ನಿಂತಿದ್ದರು.

ಹಣೆಯಲ್ಲಿ ಕಾಸಿನಗಲ ಕುಂಕುಮ. ಕೆನ್ನೆಗೆ ಹಚ್ಚಿದ ಅರಿಶಿನ, ಹಿರಿಯತನವನ್ನು ಎದ್ದು ತೋರಿಸುವ ಮುಖದ ಕಳೆ.... ಪಾರ್ವತಮ್ಮನನ್ನು ನೋಡಿ ಶಾಂತಮ್ಮ ಭಾವುಕಳಾದಳು. ಬಗ್ಗಿ ಕಾಲುಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡಳು.

"ದೇವರು ಒಳ್ಳೇದನ್ನ ಮಾಡಲಿ ತಾಯೀ..... ನಿನ್ನ ಆಸೆಗಳು ನೆರವೇರಲಿ" ಆಕೆ ಹಾರೈಸಿದರು.

"ಸುಶೀಲ, ನಾವು ಬರ್ತೀವಿ. ಬೇಗ ಬಂದು ಬಿಡ್ತೀವಿ... ನಿನ್ನ ಗಂಡನಿಗೆ ಏನೂ ಹೇಳೋಕೆ ಹೋಗಬೇಡ. ಹೇಗೂ ಶಾಂತ ಜತೆಗೆ ಇದಾಳೆ." ಎಂದು ಸೊಸೆಗೆ ಹೇಳಿದರು. ಇಬ್ಬರೂ ಜೀದಿಗಿಳಿದರು. ಸಮೀಪದಲ್ಲಿದ್ದ ಆಟೋ ಸ್ಟ್ಯಾಂಡಿಗೆ ಬಂದರು. ಅಲ್ಲಿದ್ದ ಆಟೋ ಹತ್ತಿದರು.

"ಗವಿಪುರಂಗೆ ಹೋಗಪ್ಪಾ" ಎಂದರು. ಆಟೋ ಹೊರಟಿತು. ಶಾಂತ ಮನದಲ್ಲೇ ದೇವರಿಗೆ ಕೈ ಮುಗಿದಳು. "ನಾವು ಹೋದ ಕೆಲಸ ಸಫಲವಾಗಲಿ. ನಿನಗೆ ಪಂಚಾಮೃತ ಅಭಿಷೇಕವನ್ನು ಮಾಡಿಸ್ತೀನಿ." ತನ್ನ ಇಷ್ಟದೇವರಲ್ಲಿ ಅರಿಕೆ ಮಾಡಿಕೊಂಡಳು.

ಒಂದು ಹಳೆಯ ದೇವಸ್ಥಾನದ ಬಳಿ ಆಟೋ ನಿಲ್ಲಿಸಿದರು. ಇಬ್ಬರೂ ಇಳಿದು ಸಮೀಪದಲ್ಲಿದ್ದ ಒಂದು ಹಳೇ ಕಾಲದ ಮನೆಗೆ ಬಂದರು. ಮನೆಯ ಬಳಿ ಈಗಾಗಲೇ

ಸಾಕಷ್ಟು ಜನ ಕಾಯುತ್ತಾ ಕೂತಿದ್ದರು.

"ನೋಡಿದ್ಯಾ, ಆಗಲೇ ಎಷ್ಟೋ ಜನ ಬಂದು ಬಿಟ್ಟಿದಾರೆ. ಪಂಡಿತರ ಕೈ ಗುಣ ಅಷ್ಟು ಹೆಸರುವಾಸಿಯಾದದ್ದು." ಶಾಂತ ಮೈಯೆಲ್ಲಾ ಮುದುರಿ ನಿಂತಳು. ಅಲ್ಲಿದ್ದ ಒಬ್ಬ ಹೆಂಗಸು, ಇಬ್ಬರಿಗೂ ಕುಳಿತುಕೊಳ್ಳಲು ಜಾಗಮಾಡಿಕೊಟ್ಟಳು. ಇವರ ಸರದಿ ಬರಲು ಸಾಕಷ್ಟು ಸಮಯ ಹಿಡಿಸಿತು.

ಪತಿ ಪತ್ನಿಯರ ಜಾತಕವನ್ನು ಕೂಲಂಕಷವಾಗಿ ಪರಿಶೀಲಿಸಿದ ಪಂಡಿತರು, ಪಾರ್ವತಮ್ಮನ ಕಡೆ ನೋಡಿ ಮುಗುಳ್ನಕ್ಕರು. ಶಾಂತ ನಿರಾಳವಾದ ಉಸಿರನ್ನು ಬಿಟ್ಟಳು.

"ಯಾವ ತೊಂದರೆಯೂ ಇಲ್ಲ. ಜಾತಕಗಳು ದಿವಿನಾಗಿವೆ. ನಲವತ್ತೆಂಟು ದಿನಗಳು ಅಶ್ವತ್ಥ ಕಟ್ಟೆಗೆ ಪ್ರದಕ್ಷಿಣೆ ಹಾಕಿ ಬನ್ನಿ."

"ಅಷ್ಟೇ ಸಾಕೇ...." ಪಾರ್ವತಮ್ಮ ಪ್ರಶ್ನಿಸಿದಳು.

"ಹಾಗೇ ಒಂದು ಮದ್ದನ್ನೂ ಕೊಡ್ತೀನಿ. ರಾತ್ರಿ ಊಟಕ್ಕೆ ಮೊದಲು ನೀವು ಸೇವಿಸಬೇಕು. ನಲವತ್ತೆಂಟು ದಿನ ಸಾಕು. ಆಮೇಲೆ ಇನ್ನೆರಡು ಮೂರು ತಿಂಗಳ ಒಳಗಾಗಿ ನೀವು ಗರ್ಭವತಿಯಾಗ್ತೀರಿ. ಇದು ಖಂಡಿತಾ...." ಪಂಡಿತರು ಹಾಗೆ ಹೇಳಿದರೂ, ಶಾಂತಳಿಗೆ ಸಮಾಧಾನವಾಗಲಿಲ್ಲ. ಆತ ಕೊಟ್ಟ ಹಸಿರು ಪುಡಿಯ ಪುಡಿಕೆಗಳ ಪೊಟ್ಟಣವನ್ನು ಕೈಗೆತ್ತಿಕೊಂಡಳು. ಪಾರ್ವತಮ್ಮ ದಕ್ಷಿಣೆ ಕೊಟ್ಟು ನಮಸ್ಕರಿಸುವಂತೆ ಹೇಳಿದಳು. ಶಾಂತ ಹಾಗೆಯೇ ಮಾಡಿದಳು. ಇಬ್ಬರೂ ಹಿಂತಿರುಗಿದರು.

"ನೀನು ಅನುಮಾನಿಸಬೇಡ ಶಾಂತ. ಪಂಡಿತರ ಹಸ್ತಗುಣ ತುಂಬಾ ಒಳ್ಳೆಯದು. ಅವರ ಬಾಯಿ ಹರಕೆ ನಿಜವಾಗಿಯೂ ನೆರವೇರುತ್ತದೆ. ಇನ್ನೊಂದು ವರ್ಷದೊಳಗೆ ನೀನು ತಾಯಿಯಾಗದಿದ್ದರೆ ನನ್ನ ಹೆಸರು ಪಾರ್ವತಮ್ಮನೇ ಅಲ್ಲ." ಪಾರ್ವತಮ್ಮ ಹಾಗೆ ಖಡಾ ಖಂಡಿತವಾಗಿ ಹೇಳಿದಾಗ, ಶಾಂತ ಬಲವಂತದ ನಗೆಯನ್ನು ನಕ್ಕಳು.

"ನಾಳೆ ಗುರುವಾರ, ದಿನ ಚೆನ್ನಾಗಿದೆ. ನಾಳೆಯಿಂದಲೇ ಪ್ರಾರಂಭಿಸಿ ಬಿಡು. ನಿನ್ನ ಗಂಡ ಏನಾದರೂ ಎರ‍್ರಾಬಿರ‍್ರಿ ಮಾತನಾಡಿದರೆ, ನನಗೆ ಹೇಳು. ನಾನು ಅವನಿಗೆ ತಿಳುವಳಿಕೆ ಹೇಳ್ತೀವಿ".

"ಆಗ್಩ಿ ಪಾರ್ವತಮ್ಮ ತುಂಬಾ ಉಪಕಾರವಾಯ್ತು ...."

"ಛೆ, ಇದರಲ್ಲಿ ಉಪಕಾರದ ಮಾತೇನು ಬಂತು! ನೀನೂ ನನಗೆ ಮಗಳಿದ್ದ ಹಾಗೆ. ಅಂದ ಹಾಗೆ ನಿಮ್ಮ ತಾಯಿ ಈ ಬಗ್ಗೆ ಎಂದೂ ನಿನ್ನನ್ನ ವಿಚಾರಿಸಲೇ ಇಲ್ಲವಾ?"

"ಇಲ್ಲ. ಇದನ್ನೆಲ್ಲ ನಮ್ಮಮ್ಮ ಕೇಳುವುದೂ ಇಲ್ಲ ; ನಾವುಗಳು ಹೇಳುವುದೂ ಇಲ್ಲ. ಇದೆಲ್ಲ ಅವರವರ ಸ್ವಂತ ವಿಷಯ ಅಂತ ನಮ್ಮಮ್ಮನ ಅಭಿಪ್ರಾಯ."

"ಚೆನ್ನಾಗಿದೆ. ಮದುವೆ ಮಾಡಿಕೊಟ್ಟು, ಮಗಳನ್ನು ಕಳಿಸಿಕೊಟ್ಟು ಬಿಟ್ಟರೆ ಆಯ್ತೆ? ಮಗಳು ಹೇಗಿದ್ದಾಳೆ? ಗಂಡ ಹೆಂಡತಿ ಅನ್ಯೋನ್ಯವಾಗಿ ಬಾಳ್ತಿದಾರೋ ಇಲ್ಲವೋ ಅಂತ ವಿಚಾರಿಸಬೇಡವೆ? ಹಾಗಾದ್ರೆ .... ಬಸಿರಿಯ ಆರೈಕೆ, ಬಾಣಂತನ ಎಲ್ಲಾ ಮಾಡೋರು ಯಾರು? ಇಲ್ಲಿಯೂ ಯಾರಿಲ್ಲ."

"ನೋಡೋಣ. ಅದಕ್ಕೆಲ್ಲ ಇನ್ನು ಸಮಯವಿದೆಯಲ್ಲ ...."

"ಹೌದು, ಹೌದು. ಕೂಸು ಹುಟ್ಟೋಕೆ ಮುಂಚೆ ಕುಲಾವಿ ಚಿಂತೆ ಯಾಕೆ? ದೇವರ ಕೃಪೆ ಇದ್ದರೆ ಎಲ್ಲಾ ಸುಸೂತ್ರವಾಗಿ ನೆರವೇರುತ್ತೆ" ಆಕೆ ಶಾಂತನನ್ನು ಕಳಿಸಿಕೊಟ್ಟಳು.

ಮುಂಬಾಗಿಲಿನ ಬೀಗ ತೆಗೆದು ಒಳ ಬಂದ ಶಾಂತಳಿಗೆ, ಮನದಲ್ಲಿ ಏನೋ ಶಂಕೆ, ಏನೋ ಆತಂಕ. ಗಂಡ ಏನನ್ನುತ್ತಾನೋ ಅನ್ನುವ ಭಯ. ನಾಲ್ಕು ವರ್ಷಗಳಾದರೂ

ಮಕ್ಕಳಾಗಲಿಲ್ಲ ಅಂತ ಒಂದು ದಿನವಾದರೂ ತಲೆ ಕೆಡಿಸಿಕೊಂಡವರಲ್ಲ. ನನ್ನ ಮಾತಿಗೆ ಕಟ್ಟು ಬಿದ್ದು ಲೇಡಿ ಡಾಕ್ಟರರ ಬಳಿಗೆ ಹೋಗಲು ಹೇಳಿದ್ದು, ಈಗ ಪಂಡಿತರ ಬಳಿಗೆ ಹೋಗಿದ್ದೆ ಅಂತಾದರೆ ಖಂಡಿತಾ ತಮಾಷೆ ಮಾಡದೇ ಬಿಡುವವನಲ್ಲ. ಈಗಲೇ ಅವನಿಗೆ ತಿಳಿಸಬಾರದು ಅಂತಂದು ಕೊಂಡಳು.

ಆ ರಾತ್ರಿ ಗಂಡ ಹೆಂಡತಿಯ ನಡುವೆ ಈ ಪ್ರಸ್ತಾಪ ಬರಲೇ ಇಲ್ಲ. ಅವನು ಆ ವಿಷಯವನ್ನೇ ಮರೆತುಬಿಟ್ಟಿದ್ದ. ಇವಳಾದರೋ, ಏನು ಮಾತನಾಡಿದರೆ ಆ ವಿಷಯವೆಲ್ಲಿ ಹೊರಬೀಳುತ್ತದೋ ಎಂದು ಬಾಯಿ ಮುಚ್ಚಿಕೊಂಡಿದ್ದಳು.

ನಿತ್ಯಕ್ಕಿಂತ ಬೇಗನೇ ಎದ್ದು, ತಲೆ ಸ್ನಾನ ಮಾಡಿ, ಮಡಿ ಬಟ್ಟೆ ಉಟ್ಟು ದೇವಸ್ಥಾನದ ಕಡೆ ಹೊರಟವಳನ್ನು ರಾಮಸ್ವಾಮಿ ಪ್ರಶ್ನಿಸಿದ.

"ಇದೇನಿದು? ಇವತ್ತು ಏನಾದ್ರೂ ಹಬ್ಬಾನಾ?"

"ಹುಂ, ಹಾಗೇ ಅಂದ್ಕೊಳ್ಳಿ ....."

"ಹಾಗಾದ್ರೆ ಏನು ಅಡಿಗೆ ಮಾಡ್ತೀಯ? ನಾನು ರಜಾ ಹಾಕ್ಲಾ?"

"ಏನೂ ಬೇಡ ...... "ಎನ್ನುತ್ತಾ, ತಾನು ಅಶ್ವತ್ಥ ಕಟ್ಟೆಗೆ ಪ್ರದಕ್ಷಿಣೆ ಹಾಕಲು ಹೊರಟಿರುವ ವಿಷಯವನ್ನು ತಿಳಿಸಿದಳು. ರಾಮಸ್ವಾಮಿ ಪಕಪಕನೆ ನಕ್ಕ.

"ದಯವಿಟ್ಟು ನಗಬೇಡಿ ....." ಶಾಂತ ಗಂಡನ ಮೇಲೆ ರೇಗಿದಳು. ಅವನು ಗಂಭೀರನಾದ.

"ಹಾಗಾದ್ರೆ ಮಕ್ಕಳು ಬೇಕೇ ಬೇಕು ಅಂತ ತೀರ್ಮಾನಿಸಿ ಬಿಟ್ಟಿದೀಯ .... ಲೇಡಿ ಡಾಕ್ಟರರ ಹತ್ತಿರ ಹೋಗು ಅಂತ ಹೇಳಿದ್ನಲ್ಲ. ಅದನ್ನು ಬಿಟ್ಟು ಯಾರೋ ಪಂಡಿತನ ಹತ್ತಿರ ಹೋಗಿದ್ಲಂತೆ. ಇದನ್ನೆಲ್ಲ ನಾನು ನಂಬುಲ್ಲ."

"ನಾನು ಪಾರ್ವತಮ್ಮನಿಗೆ ಎಷ್ಟೋ ಹೇಳಿದೆ. ಅವರೇ ಬಲವಂತ ಮಾಡಿ ಕರಕೊಂಡು ಹೋಗಿದ್ದು ..." ಹಸಿರು ಔಷಧಿಯ ಬಗ್ಗೆ ಹೇಳಲು ಧೈರ್ಯ ಬರಲಿಲ್ಲ.

"ಅಶ್ವತ್ಥ ಕಟ್ಟೆಗೆ ಪ್ರದಕ್ಷಿಣೆ ಹಾಕಿದರೆ ತಪ್ಪೇನೂ ಇಲ್ಲವಲ್ಲ."

"ತಪ್ಪು ಅಂತ ನಾನೆಲ್ಲಿ ಹೇಳಿದೆ. ಅದೇನು ಮಾಡ್ತೀಯೋ ಮಾಡ್ಕೋ ..... ಆದರೆ ಒಬ್ಬೊಬ್ಬಳೇ ತಿರುಗಾಡಬೇಡ. ಪುಂಡರು, ಪೋಕರಿಗಳು ಓಡಾಡುತ್ತಿರುತ್ತಾರೆ. ಕಾಲ ಒಂದೇ ತರಹ ಇರುಲ್ಲ"

"ಹಾಗಾದರೆ ನೀವೂ ಜತೆಗೆ ಬನ್ನಿ ....."

"ಬೇಡ ಪುಣ್ಯಾತ್ಗಿತ್ತಿ. ಅದೆಲ್ಲಾ ನಿನಗೇ ಇರಲಿ. ಹುಶಾರಾಗಿರು ಅಂತ ಹೇಳಿದೆ. ನಿನಗೇನಾದ್ರೂ ಹೆಚ್ಚು ಕಡಿಮೆ ಆದರೆ, ನಾನು ಆ ಪಾರ್ವತಮ್ಮನ್ನ ಸುಮ್ಮನೇ ಬಿಡುಲ್ಲ. ಸರಿಯಾಗಿ ವಿಚಾರಿಸಿಕೊಳ್ತೀನಿ."

ಈಗ ಶಾಂತ ನಕ್ಕಳು. "ಇದಕ್ಕೇ ಏನೋ ಪಾರ್ವತಮ್ಮ ಏನಂದ್ರು ಗೊತ್ತಾ? ನಿನ್ನ ಗಂಡ ಏನಾದ್ರೂ ಎರ್ರಾ ಬಿರ್ರಿ ಮಾತನಾಡಿದ್ರೆ, ನನಗೆ ಹೇಳು. ಸರಿಯಾಗಿ ಮಾತನಾಡ್ತೀನಿ ಅಂತಂದ್ರು. ಅವರನ್ನ ಕರೀಲಾ?"

"ನೋಡು, ನನ್ನನ್ನ ರೇಗಿಸಬೇಡ. ನೀನೀಗ ಮಡಿಲಿದೀಯ ಬೇಗ ಹೋಗಿ ಬಾ. ಆಮೇಲೆ ನಿನ್ನನ್ನ ವಿಚಾರಿಸಿಕೊಳ್ತೀನಿ" ರಾಮಸ್ವಾಮಿ ನಗುತ್ತಾ ನುಡಿದಾಗ ಶಾಂತ ಕಿಲಕಿಲನೆ ನಕ್ಕಳು.

"ಫ್ಲಾಸ್ಕಿನಲ್ಲಿ ಕಾಫಿ ಇದೆ. ಡಬ್ಬೀಲಿ ತಿಂಡಿ ಹಾಕಿಟ್ಟಿದೀನಿ. ಬಿಸಿಯಾಗಿದೆ. ಬೇಗ ಸ್ನಾನ ಮಾಡಿ ತಿಂದು, ರೆಡಿಯಾಗ್ತಿರಿ. ಅಷ್ಟು ಹೊತ್ತಿಗೆ ನಾನು ಬಂದೇ ಬಿಡ್ತೀನಿ."

"ಬೇಗ ಬರದಿದ್ರೆ ನಾನು ನಾಳೆಯಿಂದ ಆಫೀಸಿಗೇ ಹೋಗುಲ್ಲ."

"ಇದೊಳ್ಳೆ ಚೆನ್ನಾಗಿದೆ. ಒಳ್ಳೆ ಮಗೂ ತರಹ ಆಡ್ತೀರಲ್ಲ."

"ಅದಕ್ಕೇ ಚಿನ್ನಾ ನಾನು ಹೇಳೋದು, ನಾವೇ ಇನ್ನು ಮಕ್ಕಳು. ನಮಗೆ ಈಗಲೇ ಮಕ್ಕಳು ಆಗೋದು ಯಾಕೆ ಅಂತ ...."

"ಛಿ, ಬಿಡ್ತು ಅನ್ನಿ ಮಕ್ಕಳು ಆಗೋ ವಯಸ್ಸಿನಲ್ಲಿ ಆಗಿ ಬಿಡಬೇಕು. ನಮ್ಮ ವೃದ್ಧಾಪ್ಯದ ಹೊತ್ತಿಗೆ ಮಕ್ಕಳು ನಮ್ಮ ಕೈಗೆ ಬಂದಿರಬೇಕು ....."

"ಜವಾಬ್ದಾರಿ ಹೆಚ್ಚುತ್ತಲ್ಲೇ ಶಾಂತು ....."

"ನೀವು ಈಗಲಿಂದ ಚಿಂತಿಸಬೇಡಿ. ನಿಮಗೆ ಯಾವುದೂ ಹೊರೆ ಆಗುವುದಿಲ್ಲ. ನಾನು ಎಲ್ಲವನ್ನೂ ನೋಡಿಕೊಳ್ತೀನಿ."

"ಹಾಗಾದ್ರೆ ಒಂದೇ ಒಂದು ಮಗು ಸಾಕು. ಅದನ್ನೇ ಸರಿಯಾಗಿ ಬೆಳೆಸೋಣ ....."

"ಒಂದು ಮಗು ಆಗೋಕೆ ಇಷ್ಟು ತಡ. ಮೊದಲು ಒಂದು ಆಗಲಿ. ಆಮೇಲೆ ಮುಂದಿನ ಮಾತು. ಈಗ ನಾನು ಹೋಗಿ ಬರ್ಲಾ?"

"ಹೂಂ, ಬೇಗ ಬಂದು ಬಿಡು." ಹೆಂಡತಿ ಅತ್ತ ಹೋದ ಕೂಡಲೇ ರಾಮಸ್ವಾಮಿ ಚಿಂತಿಸಿದ. ಈ ಹೆಂಗಸರಿಗೆ ಮಕ್ಕಳಾಗಲಿಲ್ಲ ಅನ್ನುವ ಕೊರಗು ಯಾಕೋ? ನಮಗೇನು ರಾಜ್ಯ ಇದೆಯೆ? ಕೋಶ ಇದೆಯೆ? ಅದೆಲ್ಲಾ ಕಂಡೋರ ಪಾಲು ಆಗಿ ಹೋಗುತ್ತಲ್ಲ ಅಂತ ವ್ಯಥೆ ಪಡೋಕೆ? ಮಕ್ಕಳಾದರೆ ಎಷ್ಟು ಜವಾಬ್ದಾರಿ ಹೆಚ್ಚುತ್ತೆ ಇದಕ್ಕೆ ತಿಳೀದು. ಏನೋ ಆಸೆ ಪಡುತ್ತೆ .... ಅಲ್ಲದೇ ನಾನು ಈ ಪಂಡಿತರ ಮಾತನ್ನು ನಂಬೋನಲ್ಲ. ನಿಧಾನವಾಗಿ ನಾನೇ ಶಾಂತನಿಗೆ ತಿಳುವಳಿಕೆ ಹೇಳ್ತೀವಿ" ಎಂದು ತನ್ನಲ್ಲೇ ಹೇಳಿಕೊಂಡು ಸ್ನಾನದ ಮನೆಯ ಕಡೆ ನಡೆದ.

ಆ ರಾತ್ರಿ ಊಟಕ್ಕೆ ಮೊದಲು ಶಾಂತ ಮರೆಯದೇ, ಪಂಡಿತರು ಕೊಟ್ಟ ಹಸಿರು ಪುಡಿಯನ್ನು ಜೇನುತುಪ್ಪಕ್ಕೆ ಬೆರೆಸಿ ತಿಂದಳು. ಅರ್ಧ ಲೋಟ ತಣ್ಣನೆಯ ಹಾಲನ್ನು ಕುಡಿದಳು. ಮನೆಯೆಲ್ಲಾ ಘಂ ಎನ್ನುವ ವಾಸನೆ ತುಂಬಿ ಕೊಂಡಿತು. ಕಹಿಯಾಗಿ, ಅಸಹ್ಯವಾಗಿರುತ್ತೇನೋ ಅಂತಂದುಕೊಂಡಿದ್ದೆ. ಪರವಾಗಿಲ್ಲ ಒಂಥರಾ ವಾಸನೆ ಚೆನ್ನಾಗಿದೆ ಅಂತಂದು ಕೊಂಡಳು.

"ಏನೇ ಅದು, ಅಡಿಗೆ ಮನೆಯೆಲ್ಲಾ ಘಂ ಅಂತಿದೆ. ಏನಡಿಗೆ ಮಾಡಿದೀಯ ..... ಊಟಕ್ಕೆ ಬಡಿಸ್ತೀಯ?"

"ಏನಿಲ್ಲ ನಿತ್ಯದ್ದೇ ಅಡಿಗೆ. ಪಕ್ಕದ್ಮನೇಲಿ ಏನೋ ವಿಶೇಷ ಅಡಿಗೆ ಇರಬೇಕು. ಅದೇ ವಾಸನೆ."

"ನೀನಿವತ್ತು ಪಾಯಸ ಮಾಡ್ತಿಯೇನೋ ಅಂತಂದು ಕೊಂಡಿದ್ದೆ"

"ನಾಳೆ ಮಾಡ್ತೀನ್ರೀ ..... ಇವತ್ತು ಆಗಲಿಲ್ಲ."

"ಸುಮ್ಮನೇ ಕೇಳಿದೆ. ಏನು ಮಾಡಿದೀಯೋ ಅದನ್ನೇ ಬಡಿಸು ಹೊಟ್ಟೆ ಹಸಿದು ಹೋಗ್ತಿದೆ ...."

"ಸದಾ ಹೊಟ್ಟೇದೇ ಚಿಂತೆಯಲ್ಲ ನಿಮಗೆ ... ಬೇರೆ ಏನೂ ಹೊಳೆಯೋದೇ ಇಲ್ವೇ."

"ಅದನ್ನೆಲ್ಲ ನಿನಗೇ ಬಿಟ್ಟು ಬಿಟ್ಟಿದೀನಿ ಶಾಂತು. ನೀನುಂಟು ನಿನ್ನ ಹೊಳೆಯೋ, ಬಾವಿಯೋ ಅದು ನಿನಗೆ ಸೇರಿದ್ದು ...."

"ಮಾತು ಮಾತ್ರ ಬಾಯಿ ತುಂಬ ಆಡ್ತೀರಿ ...."

"ಯಾಕೇ ... ಬಾಯಿ ತುಂಬಾ ನಿನ್ನನ್ನ ಚಿನ್ನ ಅಂತ ಕರೆಯೋಲ್ವಾ?"

"ಹೌದು, ನಾನೇ ಚಿನ್ನ, ಬೆಳ್ಳಿ, ಮುತ್ತು, ಮಾಣಿಕ್ಯ ಎಲ್ಲಾ ನಿಮಗೆ. ಯಾರಾದ್ರೂ ಕೇಳಿಸ್ಕೊಂಡ್ರೆ ನಗ್ತಾರೆ ಅಷ್ಟೇ ...."

"ಯಾರೂ ನಗುಲ್ಲ. ಎಲ್ರೂ ಅವರವರ ಹೆಂಡತಿಯರನ್ನ ಮೆಚ್ಚಿಸೋದೇ ಹೀಗೇ ......"

"ನಿಮಗೆ ಹೇಗೆ ಗೊತ್ತು ....?"

"ಕತೆ ಪುಸ್ತಕಗಳಲ್ಲಿ, ಸಿನಿಮಾಗಳಲ್ಲಿ ನಾಯಕ ನಾಯಕಿಯರು ಹೀಗೇ ತಾನೇ ಮಾತನಾಡೋದು ......"

"ಥೂ, ಸಿನಿಮಾದೋರ ತರಹ ನಾವುಗಳು ಆಡಿದ್ರೆ ಏನು ಚೆನ್ನ? ಅವರುಗಳು ಬರೀ ನಟಿಸ್ತಾರೆ. ನಿಜ ಜೀವನದಲ್ಲಿ ಹೇಗಿರ್ತಾರೋ ಯಾರಿಗೆ ಗೊತ್ತು?"

"ಅದೂ ನಿಜ ಅನ್ನು .... ಆದ್ರೂ ಅದರಲ್ಲಿ ಒಂಥರಾ ಮಜಾ ಇರುತ್ತೆ. ನೀನೇನಂತೀಯ? ವಯಸ್ಸಾದ ಮೇಲೆ ಹೀಗೆಲ್ಲಾ ಆಡೋಕೆ ಆಗುತ್ತಾ?" ಎನ್ನುತ್ತಾ ಶಾಂತಳನ್ನು ಬರಸೆಳೆದು ಕೆನ್ನೆಗೆ ಮುತ್ತಿಟ್ಟು ತನ್ನೆದೆಗೆ ಒರಗಿಸಿ ಕೊಂಡ. ಶಾಂತ ಹಿಂದೆ ಸರಿದು ನಿಂತಳು. ನಾಚಿಕೆಯಿಂದ ಅತ್ತಿತ್ತ ನೋಡಿದಳು. ಗಂಡನ ಕಡೆ ಹುಸಿ ಕೋಪದ ನೋಟವನ್ನು ಬೀರಿದಳು.

"ನಾನೇ ಕಣೇ ..... ಇನ್ಯಾರೂ ಅಲ್ಲ. ನಮಗೆ ಮದುವೆಯಾಗಿ ನಾಲ್ಕು ವರ್ಷ ಆಯ್ತು ಅಂತ ಅನ್ನಿಸೋದೇ ಇಲ್ಲ. ನೀನಂತೂ ಹಾಗೇ ಇದೀಯ. ನಾನೇ ಸ್ವಲ್ಪ ಗುಂಡಾಗಿದೀನಿ. ನಿನ್ನ ಕೈನ ಅಡಿಗೆ ಉಂಡೂ ಉಂಡೂ."

"ಅಂತೂ, ಯಾವ ಮಾತನಾಡಿದ್ರೂ ಕಡೆಗೆ ಅಡಿಗೆ ಊಟದ ಮಾತಿಗೇ ಬರ್ತೀರಿ. ಅನ್ನ ಆರಿ ಹೋಗುತ್ತದೆ. ಬೇಗ ಬೇಗ ಊಟ ಮಾಡಿ ಬಿಡಿ. ಹೆಂಡತಿ ಪ್ರೀತಿಯಿಂದ ಬಡಿಸಿದುದನ್ನು ಗಂಡ ಅಕ್ಕರೆಯಿಂದ ಉಂಡ.

## - - 6 - -

ನಲವತ್ತೆಂಟು ದಿನಗಳ ವ್ರತ ಪೂರೈಸುತ್ತಿದ್ದಂತೆಯೇ ಶಾಂತ ಗರ್ಭಿಣಿಯಾಗಿರುವ ಸೂಚನೆಗಳು ಕಂಡು ಬಂದವು. ಅವಳ ಸಂತಸಕ್ಕೆ ಮಿತಿ ಇಲ್ಲ.

"ನೋಡಿದ್ರಾ .. ನನ್ನ ವ್ರತ ಫಲಿಸಿತು .... ಪಂಡಿತರ ಮಾತು ನಿಜವಾಯಿತು."

"ಅಂದ್ರೆ .... ನಿನಗೆ ನನ್ನ ಪ್ರೀತಿಯ ಮೇಲೆ ನಂಬಿಕೆ ಇರಲಿಲ್ಲ ಅಂತಾಯ್ತು ..." ಕೆಣಕಿ ನುಡಿದ.

"ಛಿ ... ಪ್ರೀತಿಯಿಲ್ಲದೇ ಇದ್ದರೆ ಹೇಗೆ ಸಾಧ್ಯ ...?" ನಾಚುತ್ತಾ ನುಡಿದಳು.

"ಹೋಗಲಿ ಬಿಡು. ನಿನ್ನ ಆಸೆ ಪೂರೈಸ್ತಲ್ಲ. ನನಗೇನು ಕೊಡ್ತೀಯ ....?" ತಮಾಷೆಯಾಗಿ ಕೇಳಿದ.

"ನನ್ನನ್ನೇ ಪೂರ್ತಿಯಾಗಿ ನಿಮಗೆ ಸಮರ್ಪಿಸಿಕೊಂಡು ಬಿಟ್ಟಿದೀನಲ್ಲ. ಇನ್ನೇನಿದೆ ನನ್ನ ಬಳಿ?"

"ಕವಳ ... ಏನು ಮಾಡಿದೀಯ ಸ್ಪೆಶಲ್ .....?"

"ಅಂತೂ ತಿನ್ನೋ ಚಿಂತೇನೇ. ನಾನು ಏನನ್ನು ಮಾಡಿಲ್ಲ. ಪಕ್ಕದ ಸ್ವೀಟ್ ಅಂಗಡಿಯಿಂದ ಏನನ್ನಾದರೂ ಕಟ್ಟಿಸಿಕೊಂಡು ಬನ್ನಿ."

"ಇದು ಮೋಸ ಶಾಂತು ... ಅಂಗಡಿ ಸ್ವೀಟ್ಸ್ ಏನು ಚೆನ್ನಾಗಿರುತ್ತೆ ನೀನೇ ಹೇಳು

...."

"ಇನ್ನು ಮುಂದೆ ನಾನು ಹೆಚ್ಚು ಕೆಲಸ ಮಾಡಿ ಆಯಾಸ ಮಾಡಿಕೊಳ್ಳುವಂತೆಯೇ ಇಲ್ಲ. ಹಾಗಂತ ಪಾರ್ವತಮ್ಮ ಹೇಳಿ ಬಿಟ್ಟಿದಾರೆ ...."

"ಅಂದ್ರೆ ... ನನಗಿಂತ ಮುಂಚೆ ಈ ಸುದ್ದೀನ ಪಾರ್ವತಮ್ಮಂಗೆ ಹೇಳಿ ಬಂದ್ಯಾ?"

"ಹುಂ, ಪಂಡಿತರು, ನಲವತ್ತೆಂಟು ದಿನಕ್ಕೆ ಔಷಧಿ ಕೊಟ್ಟಿದ್ದರು. ಅದು ಮುಗಿದ ನಂತರ ಮತ್ತೆ ಬನ್ನಿ ಅಂತ ಹೇಳಿದ್ರು ... ಅದಕ್ಕೇ ನಾನೂ ಪಾರ್ವತಮ್ಮ ಇಬ್ಬರೂ ಪಂಡಿತರ ಮನೆಗೆ ಹೋಗಿ ಬಂದೆವು..."

"ಅಂದ್ರೇ ... ಪಂಡಿತಂಗೂ ಈ ವಿಷಯ ತಿಳಿದು ಹೋಯ್ತು ಅನ್ನು ...." ಅವನ ಮಾತಿನಲ್ಲಿ ಕಾವಿತ್ತು.

"ಏನೀಗ? ಅವರೇ ನಾಡಿ ಹಿಡಿದು ನೋಡಿ ಈ ಸುದ್ದಿ ಹೇಳಿದ್ದು. ಇಲ್ಲದಿದ್ದರೆ ನನಗೆ ಹೇಗೆ ಗೊತ್ತಾಗ್ತಿತ್ತು?"

"ಅಂತೂ ಪಂಡಿತ ನನ್ನ ತಲೆ ಮೇಲೆ ಚಪ್ಪಡಿ ಎಳೆದುಬಿಟ್ಟ."

"ಥೂ, ಹೀಗೆಲ್ಲಾ ಹಗುರವಾಗಿ ಮಾತನಾಡಬೇಡಿ. ಇದರಿಂದ ನಿಮಗೆ ಅನ್ಯಾಯವಾದದ್ದು ಏನು?"

"ಅಲ್ಲ ಶಾಂತು, ನಾಲ್ಕು ವರ್ಷಗಳಿಂದ ನಾನು ಹಾಯಾಗಿದ್ದೆ. ಈಗ ಈ ಪಂಡಿತನಿಂದ ನನ್ನ ಜವಾಬ್ದಾರಿ ಹೆಚ್ಚಾಯ್ತು ...."

"ಹೀಗೆಲ್ಲ ಯೋಚಿಸೋರು ನೀವು ಮದುವೇನೇ ಆಗಬಾರದಾಗಿತ್ತು" ಕೋಪದಿಂದ ಶಾಂತ ನುಡಿದಾಗ ಅವನು ನಕ್ಕ.

"ಆಗ ... ನಿನಗೆ ನಾನೆಲ್ಲಿ ಸಿಕ್ತಿದ್ದೆ?"

"ಸಿಕ್ಕದೇ ಇದ್ದಿದ್ದರೆ ಚಿಂತೆ ಏನೂ ಇರಲಿಲ್ಲ. ಬೇರೆ ಯಾರಾದ್ರೂ ಮದುವೆ ಆಗಿರುತ್ತಿದ್ದರು. ನಾನೂ ತಕ್ಕಮಟ್ಟಿಗೆ ಚೆನ್ನಾಗಿಯೇ ಇದೀನಿ. ಅಡಿಗೆ ಕೆಲಸ ಬರುತ್ತೆ. ಇನ್ನೇನು ಬೇಕು ಒಳ್ಳೆಯ ಪತ್ನಿ ಆಗುಕ್ಕೆ?"

"ಹಾಗಾದ್ರೆ ನಾನು ಒಳ್ಳೆಯ ಪತಿ ಅಲ್ಲ ಅನ್ನು ..."

"ಅಲ್ಲ ಅಂತ ಯಾವ ಬಾಯಲ್ಲಿ ಹೇಳಲಿ? ಹಾಗೇ ನೀವು ಒಳ್ಳೆಯ ತಂದೆ ಕೂಡ ಆಗಬೇಕು" ಶಾಂತಳ ದನಿ ನಡುಗಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

"ಛಿ, ಅಳೋಕೆ ಏನಾಯ್ತು ಈಗ? ಕಟ್ಟಿಕೊಂಡ ಹೆಂಡತಿಗೆ, ಹುಟ್ಟುವ ಮಗುವಿಗೆ ಎಂದೂ ಅನ್ಯಾಯ ಮಾಡೋನಲ್ಲ ನಾನು."

"ನೀವು ಒಂಥರಾ ವಿಚಿತ್ರವಾಗಿ ಮಾತನಾಡ್ತೀರಿ. ನನಗೆ ಭಯವಾಗುತ್ತೆ ..."

"ನಿನ್ನನ್ನ ರೇಗಿಸೋಕೆ ಹಾಗೆ ಮಾತಾಡ್ತೀನಿ ಚಿನ್ನ.. ಇನ್ನು ಮೇಲಿಂದ ಈ ಮಾತೆಲ್ಲಾ ಬಂದ್ .... ಹಾಗೇ ಇನ್ನು ಮೇಲೆ ಏನೇನು, ಹೇಗ್ಹೇಗೆ ಮಾತನಾಡ್ಬೇಕು ಅಂತ ಟಿಪ್ಪಣಿ ಹಾಕಿಕೊಡು. ಹಾಗೇ ಮಾಡ್ತೀನಿ ...."

"ಸಾಕು ಸಾಕು. ಊಟ ಮಾಡಿ ..... ಇನ್ನು ಸ್ವಲ್ಪ ಅನ್ನ ಹಾಕ್ಲಾ ..."

"ಹುಂ, ಹಾಕು. ಇನ್ನು ಮುಂದೆ ನಾನು ಇನ್ನು ಸ್ವಲ್ಪ ಹೆಚ್ಚಾಗಿ ಊಟ ಮಾಡಬೇಕು.... ಇಬ್ಬಿಬ್ಬರ ಯೋಗಕ್ಷೇಮ ನೋಡಿಕೊಳ್ಳಬೇಕು ...."

" ಈ ಮಾತನ್ನು ನೀವು ನನಗೆ ಹೇಳಬೇಕು ..."

"ನಿನಗೆ ಹೇಳೋಕೆ ಪಾರ್ವತಮ್ಮ ಇದಾರಲ್ಲ .... ನನಗೆ ಯಾರಿದ್ದಾರೆ ಹೇಳು" ಪೆಚ್ಚು ಮುಖ ಹಾಕಿ ಹೇಳಿದ.

"ನಾನು ಅಮ್ಮಂಗೆ ಕಾಗದ ಬರೆದು, ಕರೆಸಿ ಕೊಳ್ತೀನಿ"

"ಈಗಲೇ ಏನೂ ಬೇಡ. ನಾನು ನಿನ್ನನ್ನು ಚೆನ್ನಾಗಿ ನೋಡಿಕೊಳ್ಳೀನಿ. ಬಾಣಂತನಕ್ಕೆ ಕರೆಸಿಕೊಂಡ್ರಾಯ್ತು."

"ಬಾಣಂತನಕ್ಕೆ ನಾನು ಅಲ್ಲಿಗೇ ಹೋಗ್ತೀನಿ ..."

"ಏನೂ ಬೇಡ. ಎಲ್ಲಿಗೂ ಹೋಗಕೂಡದು ...." ಅವನ ಮಾತಿಗೆ ಅವಳು ಮುಖ ಊದಿಸಿದಳು.

"ಚೊಚ್ಚಲು ಬಾಣಂತನ ತವರು ಮನೇಲೇ ಆಗಬೇಕು. ಅಮ್ಮ ಇಲ್ಲಿಗೆ ಬರೋಕೆ ಖಂಡಿತಾ ಒಪ್ಪೊಲ್ಲ"

"ಬರದಿದ್ರೆ ಬಿಡು. ನಾನೇ ಬಾಣಂತನ ಮಾಡ್ತಿನಿ" ಶಾಂತ ಸೊರ ಸೊರ ಅಳತೊಡಗಿದಾಗ ಅವನು ಬೆಪ್ಪಾದ.

"ಏಯ್. ಅದಕ್ಕೇ ಮಾತು ಬೇಡ ಅಂತ ಅನ್ನೋದು. ಮಾತು ಎಲ್ಲಿಂದೆಲ್ಲಿಗೋ ಹೋಗುತ್ತೆ .... ನೀನೀಗ ಸರಿಯಾಗಿ ಊಟ ಮಾಡು ..... ಇನ್ನು ಸ್ವಲ್ಪ ಮಜ್ಜಿಗೆ ಹಾಕ್ಲಾ ....." ಬೇಡ ಎನ್ನುವಂತೆ ಅವಳು ಕೈ ಅಡ್ಡ ಹಿಡಿದಳು. ತಾನು ಗರ್ಭಿಣಿಯಾಗಿರುವುದು ಗಂಡನಿಗೆ ಬೇಸರವಾಗಿದೆ ಎಂದೇ ಭಾವಿಸಿದಳು. ಹೃದಯ ಭಾರವಾಯಿತು. ಅನ್ನದ ತುತ್ತು ಗಂಟಲಿನಿಂದ ಕೆಳಗಿಳಿಯಲಿಲ್ಲ. ರಾಮಸ್ವಾಮಿ ಅದನ್ನು ಗಮನಿಸಲಿಲ್ಲ. ಅಲ್ಲಿಂದ ಹೊರಟು ಹೋಗಿದ್ದ. ಅವಳು ಅಡಿಗೆ ಮನೆಯ ಕೆಲಸಗಳನ್ನು ಮುಗಿಸಿ, ಮಲಗುವ ಮನೆಗೆ ಬಂದಾಗ, ಗಂಡ ಏನನ್ನೋ ಯೋಚಿಸುತ್ತಾ ಇರುವವನಂತೆ ಕಂಡಿತು. ಮಾತನಾಡಿಸುವ ಮನಸ್ಸಾಗಲಿಲ್ಲ. ನಿಟ್ಟುಸಿರು ಬಿಡುತ್ತಾ ಮಲಗಿದಳು. ಗಂಡ ಬಳಿಗೆ ಬರದಿದ್ದಾಗ, ಆತಂಕ ಇಮ್ಮಡಿಸಿತ್ತು. ನಮ್ಮಿಬ್ಬರ ಪ್ರೀತಿಗೆ ಅಡ್ಡ ಬರುವ, ಈ ಮಗು ಹುಟ್ಟದಿದ್ದರೆ ಏನಂತೆ ಅಂತ ಸಹ ಅನ್ನಿಸದಿರಲಿಲ್ಲ.

ದಿನಗಳು ಮುಂದೆ ಮುಂದೆ ಸರಿದವು. ಬಳಲಿಕೆ, ಸಂಕಟ, ಸುಸ್ತಿನಿಂದ ಶಾಂತ ಸಪ್ಪಗಾದಳು. ರಾಮಸ್ವಾಮಿಯೇ ತಿಂಡಿ ಅಡಿಗೆ ಮಾಡಿಟ್ಟು ಆಫೀಸಿಗೆ ಹೋಗುತ್ತಿದ್ದ. ಪಾರ್ವತಮ್ಮ ಶಾಂತಳ ಯೋಗಕ್ಷೇಮವನ್ನು ಚೆನ್ನಾಗಿ ವಿಚಾರಿಸಿಕೊಳ್ಳುತ್ತಿದ್ದರು.

"ಏನಾದ್ರೂ ತಿನ್ನೋ ಬಯಕೆ ಇದ್ದರೆ ನನಗೆ ಹೇಳೇ ತಾಯಿ. ಬಸಿರಿ ಹೆಂಗಸು, ಬಯಕೆಯನ್ನು ಮುಚ್ಚಿಟ್ಟುಕೊಳ್ಳಬಾರದು."

"ಪರವಾಗಿಲ್ಲ ಬಿಡಿ ಪಾರ್ವತಮ್ಮ. ನನಗ್ಯಾಕೋ ಏನನ್ನು ತಿನ್ನುವ ಆಸೇನೇ ಆಗುಲ್ಲ."

"ಹಾಗೆನ್ನ ಬೇಡ. ಹುಟ್ಟುವ ಮಗು ಚೆನ್ನಾಗಿರಬೇಕೋ ಇಲ್ಲವೋ?"

"ಹೇಗೇ ಇದ್ದರೂ, ನನ್ನ ಗಂಡನ ಹಾಗೆ ತಿಂಡಿಪೋತನಾಗುವುದು ಮಾತ್ರ ಗ್ಯಾರಂಟಿ ..." ಶಾಂತ ನಕ್ಕಳು.

"ನಿನ್ನ ಗಂಡನಿಗೂ ತಿಂಡಿ ಕಡಿಮೆಯಾಗಿ ಹೋಗಿದೆ. ನಾನು ನಿಮ್ಮಿಬ್ಬರಿಗೂ ಕಳಿಸ್ತೀನಿ" ಎನ್ನುತ್ತಾ ಪಾರ್ವತಮ್ಮ ಕೆಲವೇ ನಿಮಿಷಗಳಲ್ಲಿ ಮೊಮ್ಮಗಳೊಡನೆ ಕರಿದ ತಿಂಡಿಗಳನ್ನು ಕಳಿಸಿದಳು.

ಆಫೀಸಿನಿಂದ ಬಂದ ರಾಮಸ್ವಾಮಿ, ತಿಂಡಿಗಳನ್ನು ಕಂಡ, ಬಾಯಲ್ಲಿ ನೀರೂರಿತು. "ಅರೇ ಚಿನ್ನಾ ... ಕೈಲಾಗುಲ್ಲ ಅಂತಂದ್ರೂ ಏನೇನನ್ನೋ ಮಾಡಿದೀಯ. ಬಾಯಲ್ಲಿ ನೀರೂರುತ್ತಿದೆ."

"ನಾನು ಮಾಡಿದ್ದಲ್ಲ. ಪಾರ್ವತಮ್ಮ ನನಗೆ ಅಂತ ಕಳಿಸಿದ್ದರು. ನನಗೆ ಸೇರುಲ್ಲ.

ನೀವೇ ತಿನ್ನಿ."

"ನಾನು ತಿಂದರೆ ಬೇಜಾರು ಮಾಡಿಕೊಳ್ಳಲ್ಲ ತಾನೇ?"

"ಇಲ್ಲಪ್ಪಾ ಇಲ್ಲ ..... ಇನ್ನೊಂದೆರಡು ದಿನ ಕಳೀಲಿ. ನಾನೇ ನಿಮಗೇನು ಬೇಕೋ ಅದನ್ನೆಲ್ಲ ಮಾಡಿಕೊಡ್ತಿವಿ" ರಾಮಸ್ವಾಮಿ ಕರಿದ ಅವಲಕ್ಕಿಯನ್ನು ಬಾಯಿಗೆ ಹಾಕಿಕೊಂಡ.

"ಫಸ್ಟ್‌ಕ್ಲಾಸಾಗಿದೆ. ನೀನೂ ಒಂದು ಚೂರು ರುಚಿ ನೋಡು ....."

"ಬೇಡಾಂದ್ನಲ್ಲ, ವಾಕರಿಕೆ ಬರ್ತಿದೆ ...." ರಾಮಸ್ವಾಮಿ ಕೆಲವೇ ನಿಮಿಷಗಳಲ್ಲಿ ಪ್ಲೇಟನ್ನು ಖಾಲಿ ಮಾಡಿದ. ಶಾಂತ ಕೆಟ್ಟ ಮುಖ ಮಾಡಿದಳು. ಗಂಡನ ಮೇಲೆ ಕೋಪ ಬಂದಿತ್ತು.

"ನಾನು ಸ್ವಲ್ಪ ಪಾರ್ವತಮ್ಮನ ಮನೆಗೆ ಹೋಗ್ತೀನಿ" ಶಾಂತ ಎದ್ದಾಗ ಅವನು ತಡೆದ.

"ನಾನಿನ್ನು ಈಗ್ತಾನೇ ಬರ್ತಿದೀನಿ. ಒಂದು ಮಾತಿಲ್ಲ ಕತೆಯಿಲ್ಲ. ಈ ನಡುವೆ ನನ್ನಿಂದ ದೂರ ಆಗ್ತಿದೀಯ."

"ನನ್ನಿಂದ ದೂರ ದೂರ ಇರೋರು ನೀವೇ ...... ಹೇಗಿದೀಯ ಏನು ಎತ್ತ ಅಂತ ವಿಚಾರಿಸದೇ, ಗಬಗಬ ಅಂತ ತಿಂಡಿ ತಿಂದೋರು ನೀವು ... ನಾನು ಅವರಿಗೆ ಥ್ಯಾಂಕ್ಸ್ ಹೇಳಿ ಬರ್ತೀನಿ."

"ಬಿಡು, ನಾಳೆ ಹೇಳಿದ್ರಾಯ್ತು. ಈಗ ವಾಕಿಂಗ್ ಹೋಗೋಣ ಬರ್ತೀಯಾ? ವಾಕಿಂಗ್ ಹೋಗಬೇಕೂಂತ ಡಾಕ್ಟರು ಹೇಳಿದಾರೆ ತಾನೇ?"

"ಡಾಕ್ಟರರ ಹತ್ತಿರ ಹೋಗೇ ಇಲ್ಲ ನಾನು ....?"

"ಮತ್ತೆ? ನಿನಗೆ ಸಲಹೆ ಯಾರು ಕೊಡ್ತಾರೆ?"

"ಪಾರ್ವತಮ್ಮ .. ಅವರಿಗೆ ಎಂಟು ಮಕ್ಕಳು, ಹತ್ತೋ ಹನ್ನೆರಡು ಮೊಮ್ಮಕ್ಕಳು. ಅವರಿಗಿರುವ ಅನುಭವ ಯಾವ ಡಾಕ್ಟರಿಗೂ ಇಲ್ಲ. ಪಂಡಿತರೇ ಔಷಧಿ ಕೊಡ್ತಿದಾರೆ ..."

"ಈ ಕಾಲಕ್ಕೆ ಅದೆಲ್ಲಾ ತಕ್ಕದ್ದಲ್ಲ. ನಾಳೇನೇ ನಾನು ನಿನ್ನನ್ನ ಲೇಡಿ ಡಾಕ್ಟರರ ಹತ್ತಿರ ಕರೆದುಕೊಂಡು ಹೋಗ್ತೀನಿ. ಪಂಡಿತರ ಔಷಧಿ, ಪಾರ್ವತಮ್ಮನ ಸಲಹೆಯೆಲ್ಲಾ ಬಂದ್ ...."

"ಸರಿ ಬಿಡಿ. ಪಂಡಿತರ ಔಷಧಿ ಬೇಡ. ನನಗೂ ಅದನ್ನು ತಿಂದೂ ತಿಂದೂ ಬೇಸರ ಬಂದಿದೆ. ಆದರೆ ಪಾರ್ವತಮ್ಮನ ಸಲಹೆ ಬೇಡಾಂತ ಅನ್ನ ಬೇಡಿ. ಅವರಿಗೆ ಬೇಸರವಾದರೆ, ನಿಮಗೆ ಒಳ್ಳೊಳ್ಳೆ ತಿಂಡಿ ಸಿಕ್ಕಲ್ಲ." ಮೆಲುನಗೆ ನಕ್ಕಳು.

"ಹೌದಲ್ವೇನೇ ... ನನಗೆ ಹೊಳೀಲೇ ಇಲ್ಲ. ನನ್ನ ಮಗ ಹೀಗೆ ನನ್ನ ಹಾಗೆ ದಡ್ಡವಾಗಬಾರದು. ನಿನ್ನ ಹಾಗೆ ಜಾಣನಾಗಬೇಕು."

"ಜಾಣನೋ, ದಡ್ಡನೋ ಗೊತ್ತಿಲ್ಲ. ಆದರೆ ತಿಂಡಿಪೋತನಾಗುವುದು ಮಾತ್ರ ಗ್ಯಾರಂಟಿ ....."

"ಇದರಿಂದ ನಿನಗೆ ಬೇಸರಾನಾ?"

"ಖಂಡಿತಾ ಇಲ್ಲ. ನನ್ನ ಮಗು ಹೇಗೇ ಇದ್ದರೂ ನನಗೆ ಪ್ರಿಯವೇ ....." ಖುಷಿಯಿಂದ ಹೇಳಿಕೊಂಡಳು.

"ನೋಡಿದ್ಯಾ ಶಾಂತ .... ನನ್ನ ಮಗು ಅಂತ ಮಾತ್ರ ಹೇಳಿ ಕೊಳ್ತೀಯಲ್ಲ.

ಇದರಲ್ಲಿ ನನ್ನ ಪಾಲು ಏನೂ ಇಲ್ವಾ?"

"ನಾನು ತಾಯಿ, ನೀವು ತಂದೆ. ತಾಯಿ ತೋರುವಷ್ಟೇ ಪ್ರೀತೀನ ತಂದೆ ತೋರಿಸುಕ್ಕೆ ಸಾಧ್ಯಾನಾ?"

"ನೋಡ್ತಿರು. ನಾನು ನಮ್ಮ ಮಗೂನ ನಿನಗಿಂತ ಹೆಚ್ಚಾಗಿ ಪ್ರೀತಿಸ್ತೀನಿ. ಆಗ ನಿನಗೇ ಗೊತ್ತಾಗುತ್ತೆ ...." ಗಂಡ ನಮ್ಮ ಮಗು ಅಂತ ಮೊದಲ ಬಾರಿಗೆ ಹೇಳಿದ್ದು ಅವಳಿಗೆ ಖುಷಿಯನ್ನು ಕೊಟ್ಟಿತು. ಗಂಡನ ಬೇಸರ ದಿನ ದಿನಕ್ಕೆ ಕಡಿಮೆ ಆಗುತ್ತಿದೆ ಎಂದೇ ಭಾವಿಸಿದಳು.

ಮಗಳು ಗರ್ಭಿಣಿ ಎಂದು ತಿಳಿದ, ತಂದೆ ತಾಯಿ, ಅವಳನ್ನು ಬಾಣಂತನಕ್ಕೆ ಕರೆದೊಯ್ಯಲು ಬಂದರು.

"ಚೊಚ್ಚಿಲು ಬಸಿರಿ. ಈಗಾಗಲೇ ಏಳು ತಿಂಗಳು ನಡೀತಿದೆ. ತವರಿಗೆ ಬಾಣಂತನಕ್ಕೆ ಬರೋದು ಧರ್ಮ.." ಗಂಡ ಕಳಿಸಲು ಒಪ್ಪುತ್ತಿಲ್ಲವೆಂದು ಶಾಂತ ನುಡಿದಳು.

"ಹೋಗಲಿ ಬಿಡಮ್ಮ. ಅವರಿಗೂ ಊಟ ತಿಂಡಿಗೆ ಕಷ್ಟವಾಗುತ್ತೆ. ನೀನೇ ಒಂದೆರಡು ತಿಂಗಳು ಇಲ್ಲಿದ್ದು ಬಿಡು."

"ಅದ್ಹೇಗೇ ಆಗುತ್ತೆ ಶಾಂತಾ ... ನಮ್ಮ ಮನೆ ಮಠ ಬಿಟ್ಟು ಇಲ್ಲಿ ಎರಡು ಮೂರು ತಿಂಗಳು ಇರೋಕ್ಕೆ ಆಗುತ್ತೇನೆ? ನಮ್ಮ ಮನೆ ನಮ್ಮ ಕೆಲಸ ನಮಗೇ ಗೊತ್ತು. ಸುಮ್ಮನೇ ಹೇಳಿದಷ್ಟು ಕೇಳು. ಐದಾರು ತಿಂಗಳಿಗೆ ನಿನ್ನ ಗಂಡನೇನೂ ಬಡವಾಗಿ ಹೋಗುಲ್ಲ. ಆಗ ಈಗ ರಜಾ ಹಾಕಿ ಬರಲಿ. ಅವರ ಬೇಸರವೂ ಕಳೆಯುತ್ತೆ."

ತಂದೆ ತಾಯಿಯರ ಒತ್ತಾಯಕ್ಕೆ ಮಣಿದು ಶಾಂತ ತವರಿಗೆ ಹೊರಟಳು. ರಾಮಸ್ವಾಮಿ ಪೆಚ್ಚಾಗಿದ್ದ.

"ಇದಕ್ಕೇ ನಾನು, ಈ ಮಗು ಗಿಗೂ ಬೇಡಾಂತ ಅಂದಿದ್ದು. ಈಗ ನೋಡು ಇದರ ದೆಸೆಯಿಂದ ನಾವಿಬ್ಬರೂ ಅಗಲಿರಬೇಕಾಗಿದೆ."

"ಮೂರು ನಾಲ್ಕು ತಿಂಗಳು ಅಷ್ಟೇ ಬೇಗ ಕಳೆದು ಹೋಗುತ್ತೆ. ಆಗ ನನಗೋಸ್ಕರ ಬನ್ನಿ. ನಿಮ್ಮ ಬೇಸರವೂ ಕಳೆಯುತ್ತೆ."

"ಇಲ್ಲ ಶಾಂತು. ನಾನು ಬರುಲ್ಲ. ನಿಮ್ಮ ಮನೇಲಿ ಮನೆ ತುಂಬಾ ಜನ. ಒಂದು ಗಳಿಗೆ ಆರಾಮವಾಗಿ ಕುಳಿತು ಮಾತನಾಡುಕ್ಕೂ ಬಿಡುಲ್ಲ."

"ಹಾಗೆ ಮಾಡಬೇಡಿ. ತಿಂಗಳಿಗೆ ಒಂದು ಸಲವಾದರೂ ಬನ್ನಿ. ಕಾಗದ ಬರೀರಿ ... ನನಗೂ ನಿಮ್ಮನ್ನು ನೋಡಬೇಕೂಂತ ಅನ್ನಿಸುತ್ತಿರುತ್ತೆ." ಶಾಂತ ದೈನ್ಯದಿಂದ ಕೇಳಿಕೊಂಡಾಗ, ರಾಮಸ್ವಾಮಿ ತಲೆ ಆಡಿಸಿದ.

"ಆಗಲಿ, ರಜ ಸಿಕ್ಕರೆ ಬರ್ತೀನಿ."

"ಮೆಣಸಿನಪುಡಿ, ಚಟ್ನಿಪುಡಿ, ಹುಳಿಪುಡಿ ಎಲ್ಲಾ ಅಮ್ಮ ತಂದು ಕೊಟ್ಟಿದ್ದಾಳೆ. ನೀವೇ ಅಡಿಗೆ ಮಾಡ್ಕೊಳ್ಳಿ. ಹೋಟೆಲ್ಲು ಅದೂ ಇದೂ ಅಂತ ಹೊರಗೆ ತಿನ್ನಬೇಡಿ. ಮೈಗೆ ಒಳ್ಳೇದಲ್ಲ. ನಾನು ಪಾರ್ವತಮ್ಮನಿಗೆ ಹೇಳಿ ಬಂದುಬಿಡ್ತೀನಿ." ಶಾಂತ ತಾಯಿಯೊಡನೆ ಪಾರ್ವತಮ್ಮನ ಮನೆಗೆ ಬಂದಳು.

ಅರಿಶಿನ ಕುಂಕುಮದೊಂದಿಗೆ, ಹಸಿರು ಖಣ, ಹಸಿರು ಬಳೆ, ಹೂವು, ಹಣ್ಣುಗಳನ್ನಿತ್ತು ಆಶೀರ್ವಾದ ಮಾಡಿದರು.

"ಸುಖವಾಗಿ ಮೈ ಕಳೆದು, ಬಾಣಂತಿ ಮಗು ಕ್ಷೇಮವಾಗಿ ಬನ್ನಿ."

"ಗಂಡು ಮಗುವಾಗಲಿ ಅಂತ ಆಶೀರ್ವಾದ ಮಾಡಿ ಪಾರ್ವತಮ್ಮನೋರೇ" ತಾಯಿ

ಹೇಳಿದಾಗ ಶಾಂತ ಮುಖ ಸಿಂಡರಿಸಿದಳು. ಆಕೆಯೇ ಹೇಳಿದಳು "ಮಗು ಹೆಣ್ಣಾದರೇನು? ಗಂಡಾದರೇನು? ಆರೋಗ್ಯವಾಗಿದ್ದರೆ ಸಾಕು. ದೇವರು ಎಂಥಾ ವರ ಕೊಡ್ತಾನೋ ಅದನ್ನು ಸ್ವೀಕರಿಸಬೇಕು."

"ಹಾಗಲ್ಲ. ಮೊದಲನೇ ಮಗು ಗಂಡಾದರೆ ನೆಮ್ಮದಿ. ಆಮೇಲೆ ಮತ್ತೆ ಗಂಡೋ, ಹೆಣ್ಣೋ ಯಾವ ಮಗು ಹುಟ್ಟಿದರೂ ಪರವಾಗಿಲ್ಲ. ಅದೇ, ಮೊದಲನೇದೆ ಹೆಣ್ಣಾಗಿ ಬಿಟ್ಟರೆ, ಎರಡನೇ ಮಗು ಗಂಡಾದರೆ ಪರವಾಗಿಲ್ಲ. ಹೆಣ್ಣು ಎಲ್ಲಿ ಹುಟ್ಟಿ ಬಿಡುತ್ತೋ ಅನ್ನೋ ಆತಂಕ ಇದ್ದೇ ಇರುತ್ತೆ."

"ಅದೆಲ್ಲ ಅರ್ಥವಿಲ್ಲದ ಮಾತು. ನಿಮ್ಮ ತರ್ಕ ಸರಿ ಅಂತ ನನಗನ್ನಿಸುಲ್ಲ. ಮಕ್ಕಳು ಮಕ್ಕಳೇ .. ಹೆಣ್ಣಾದರೇನು? ಗಂಡಾದರೇನು? ನಿಮ್ಮ ಮಗಳ ತಲೇಲಿ ಏನೇನೋ ತುಂಬ ಬೇಡಿ" ಪಾರ್ವತಮ್ಮ ಕಟುವಾಗಿ ನುಡಿದಾಗ ಆಕೆ ಕಹಿಮುಖ ಮಾಡಿದಳು.

"ನಡಿಯೇ ಶಾಂತ ಹೊತ್ತಾಯ್ತು ...." ಅವಸರಿಸಿದಳು.

"ಪಾರ್ವತಮ್ಮ .... ನಮ್ಮ ಯಜಮಾನರು ಒಬ್ಬರೇ ಇರ್ತಾರೆ ... ಆಗ ಈಗ ಸ್ವಲ್ಪ ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿರಿ"

"ಏನಮ್ಮಾ ಶಾಂತ, ನನಗೆ ಅಷ್ಟು ತಿಳಿಯಲ್ವೆ? ಇಲ್ಲಿಯ ವಿಚಾರಾನೇ ಯೋಚಿಸುತ್ತಿರಬೇಡ. ಹದಿನೈದು ದಿನಕ್ಕೆ ಒಂದು ಸಾರಿ ಅವನು ಅಲ್ಲಿಗೆ ಹೋಗಿ ಬರುವಂತೆ ಹೇಳ್ತೀನಿ."

"ಅಷ್ಟು ಮಾಡಿ .. ಇಲ್ಲದಿದ್ದರೆ ಅವರು ಬರೋದೇ ಇಲ್ಲ." ಶಾಂತ ಕಣ್ಣಲ್ಲಿ ನೀರನ್ನು ತುಳುಕಿಸುತ್ತಾ ಹೊರಟಳು. ರೈಲ್ವೇ ಸ್ಟೇಷನ್‌ನಲ್ಲಿ ರೈಲು ಹೊರಡುವವರೆಗೂ ಕಾದಿದ್ದು, ರಾಮಸ್ವಾಮಿ ಮನೆಗೆ ಹಿಂತಿರುಗಿದ.

ಹೆಂಡತಿ ಇಲ್ಲದ ಮನೆ ಬಿಕೋ ಅಂತೆನಿಸಿತು. ದಿನಗಳು ಬೇಗ ಕಳೆಯಲಿ, ಶಾಂತ ಬೇಗ ಮನೆಗೆ ಬರುವಂತಾಗಲಿ ಎಂದು ಹಾರೈಸುತ್ತಾ ಮಲಗಿ ನಿದ್ರಿಸಲು ಪ್ರಯತ್ನಿಸಿದ.

ಶನಿವಾರ ಬರುವುದನ್ನೇ ಕಾದಿದ್ದು, ರಾತ್ರಿಯ ರೈಲಿಗೆ ಹತ್ತಿದ. ಹೀಗೆ ಹದಿನೈದು ದಿನಗಳಿಗೊಮ್ಮೆ ಹೆಂಡತಿಯ ತವರಿಗೆ ಬರುತ್ತಿದ್ದ. ದಿನ ದಿನಕ್ಕೆ ಶಾಂತ ಕಂಗೊಳಿಸುತ್ತಿದ್ದಳು. ಮೊದಲಿಗಿಂತ ಚೆನ್ನಾಗಿ ದಪ್ಪಗಾಗಿದ್ದಳು. ಬಯಸಿದ್ದನ್ನು ಮಾಡಿಕೊಡುತ್ತಿದ್ದರು, ತಾಯಿ. ಚೆನ್ನಾಗಿ ತಿಂದು ನಿರಾತಂಕವಾಗಿ ಮಲಗಿ ನಿದ್ರಿಸುತ್ತಿದ್ದಳು. ರಾಮಸ್ವಾಮಿ ರೇಗಿಸಿದ.

"ನನ್ನ ಚಿಂತೇನೇ ನಿನಗಿಲ್ಲ ಶಾಂತು. ನೀನಿಲ್ಲದೇ ನಾನು ಕೊರಗಿ ಕೃಶವಾಗಿ ಹೋಗಿದೀನಿ ಅಲ್ವಾ?"

"ಹಾಗೇನೂ ಅನ್ನಿಸುಲ್ಲ... ಪಾರ್ವತಮ್ಮ ತಂದು ಕೊಡೋ ತಿಂಡೀನೆಲ್ಲಾ ಒಬ್ಬರೇ ತಿಂತೀರಲ್ಲ."

"ಅವರ ಮನೆಯಿಂದ ನನಗೆ ಯಾವ ತಿಂಡಿನೂ ಸಿಗುತ್ತಿಲ್ಲ ನನಗೀಗ ...." ನಗುತ್ತಾ ನುಡಿದ.

"ಯಾಕೆ? ಪಾರ್ವತಮ್ಮ ಹುಶಾರಾಗಿದಾರೆ ತಾನೆ?"

"ಅವರಿಗೇನಾಗಿದೆ ಧಾಡಿ? ಕಡಿದರೆ ನಾಲ್ಕಾಳು ಆಗೋ ಹಾಗಿದಾರೆ"

"ಥೂ, ಹಾಗೆಲ್ಲ ಯಾಕೆ ಅಂತೀರಿ .... ಆಕೆ ಒಳ್ಳೆ ಹೆಂಗಸು."

"ಒಳ್ಳೆಯವರೋ ಕೆಟ್ಟವರೋ ಅದೆಲ್ಲ ನನಗ್ಯಾಕೆ? ನನಗೂ ಅವರಿಗೂ ಯಾವ ಸಂಬಂಧ?"

"ಏನ್ರೀ ಹೀಗೆ ಮಾತನಾಡ್ತೀರಿ?"

"ಮತ್ತಿನ್ನೇನು? ನಮ್ಮ ವಿಷಯವನ್ನು ಬಿಟ್ಟು ಏನೋ ಪುರಾಣ ಕೇಳ್ತೀಯಲ್ಲ. ನನ್ನ ಬಗ್ಗೆ ಏನಾದ್ರೂ ವಿಚಾರಿಸಿದೆಯಾ?"

"ನಿಮ್ಮ ಬಗ್ಗೆ ನೀವೇ ಹೇಳಿ ...." ಅವನು ಸುಮ್ಮನೇ ನೋಡಿದ. ಮತ್ತೆ ಅವಳೇ ಮಾತನ್ನಾಡಿದಳು. ಪಾರ್ವತಮ್ಮ ತುಂಬಾ ಒಳ್ಳೆಯವರು. ನನಗೆಷ್ಟು ಸಹಾಯ ಮಾಡಿದ್ರು .. ಅವರಿಗೆ ನಾನಿಲ್ಲದೇ ತುಂಬಾ ಬೇಜಾರಾಗಿರಬೇಕು ಅಲ್ವಾ?"

"ಅದೇನೋ ನಂಗೊತ್ತಿಲ್ಲ. ನಾನ್ಯಾಕೆ ಕೇಳಲಿ?"

"ಅದ್ಯಾಕೆ ಹೀಗೆ ಒರಟಾಗಿ ಮಾತನಾಡ್ತೀರಿ? ನಾನಂತೂ ಪಾರ್ವತಮ್ಮನ್ನ ಈ ಜನ್ಮದಲ್ಲಿ ಮರೆಯೋಕೆ ಆಗುಲ್ಲ...". ಅವಳ ಕಣ್ಣುಗಳು ತುಂಬಿ ಬಂದವು.

"ಶಾಂತ ಅಳಬೇಡ ...." ಎನ್ನುತ್ತಾ ತಾನು ಮನೆಯನ್ನು ಬದಲಾಯಿಸಿರುವ ವಿಷಯವನ್ನು ತಿಳಿಸಿದ. ಈಗ ಆಮನೆ ಸಾಕಾಗುಲ್ಲ. ಸ್ವಲ್ಪ ದೊಡ್ಡ ಮನೆಯನ್ನು ಮಾಡಿದಿನಿ ಅಂತಂದ.ಅವಳು ನಂಬಿದಳು.

"ನೀವು ಊರಿಗೆ ಹೋದ ತಕ್ಷಣ ಪಾರ್ವತಮ್ಮನ ಮನೆಗೆ ಹೋಗಿ ನಾನು ಅವರನ್ನ ಕೇಳಿದೆ ಅಂತ ಹೇಳಲೇ ಬೇಕು."

'ಹುಂ' ಎಂದು ಬಾಯಿ ಮಾತಿಗೆ ಹೇಳಿದ. ಶಾಂತ ಮತ್ತೆ ಮತ್ತೆ ಅದೇ ಮಾತುಗಳನ್ನು ಆಡಿದಾಗ ಮೆಲ್ಲಗೆ ರೇಗಿದ್ದ.

"ನನಗೆ ಅದಕ್ಕೆಲ್ಲ ಬಿಡುವಿಲ್ಲ. ಮೊದಲ್ನಿಂದ ನನಗೆ ಇದೆಲ್ಲ ಅಭ್ಯಾಸವಿಲ್ಲ."

"ನನಗೋಸ್ಕರ ಇಷ್ಟನ್ನೂ ಮಾಡುಕ್ಕಾಗುಲ್ಲವಾ ನಿಮ್ಮ ಕೈಲಿ ..."

"ಅದ್ಯಾಕೆ ಹೀಗಾಡ್ತೀಯೋ .... ಹೇಳಿದ್ರಾಯ್ತು ಅಂತಂದ್ನಲ್ಲ. ನಿನಗೆ ನಂಬಿಕೆ ಇಲ್ಲವಾ ನನ್ನ ಮೇಲೆ?" ಅಷ್ಟರಲ್ಲಿ ಯಾರೋ ಇಣುಕಿ ನೋಡಿದ್ದರಿಂದ ಮಾತು ಅಲ್ಲಿಗೇ ನಿಂತಿತು.

ಅದೇ ರಾತ್ರಿ ಶಾಂತ ಒಂದು ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಮಗುವನ್ನು ನೋಡಿದ ನಂತರವೇ ರಾಮಸ್ವಾಮಿ ಊರಿಗೆ ಹೊರಟಿದ್ದ.

"ಹೆಣ್ಣು ಮಗುವಾಯ್ತು ಅಂತ ನಿಮಗೆ ಬೇಸರವಾಯ್ತೆ?" ಶಾಂತ ಕೇಳಿದ್ದಳು.

"ಛೆ, ಛೆ. ಹಾಗೇನಿಲ್ಲ ಹಾಗ್ಯಾಕೆ ಕೇಳ್ತೀಯ?"

"ನನಗೇ ಸಮಾಧಾನವಿಲ್ಲ... ಹೆಣ್ಣು ಮಗಳು ಎಷ್ಟಾಗಲೀ ಪರರ ವಸ್ತು. ನಾಳೆ ಮುಂದೆ ಬೆಳೆದು ದೊಡ್ಡವಳಾಗಿ, ಕಂಡವರ ಮನೆ ಸೇರೋಳು ....."

"ಅದನ್ನೆಲ್ಲ ಈಗಲಿಂದ ಯಾಕೆ ಚಿಂತಿಸ್ತೀಯಾ ಬಿಡು ..." ಹೆಂಡತಿಗೆ ಸಮಾಧಾನ ಹೇಳಿದ್ದ. ಮುಂದಿನ ವಾರ ಮತ್ತೆ ಬರ್ತೀನಿ ಅಂತ ಹೇಳಿ ಹೊರಟಿದ್ದ.

## - - 7 - -

ಹೆಂಡತಿಯ ಮಾತಿಗೆ ಇಲ್ಲವೆನ್ನಲಾಗದೇ, 'ನಾಮಕರಣ' ಸಮಾರಂಭಕ್ಕೆ ಬರಲು ಒಪ್ಪಿಕೊಂಡ.

"ಈ ಶಾಸ್ತ್ರ, ಈ ಸಂಪ್ರದಾಯ ಇದರಲ್ಲೆಲ್ಲಾ ನನಗೆ ನಂಬಿಕೆ ಇಲ್ಲ. ಮಗೂನ ಸ್ಕೂಲಿಗೆ ಸೇರಿಸೋ ಹೊತ್ತಿಗೆ ಒಂದು ಹೆಸರನ್ನು ಹುಡುಕಿ ಇಟ್ಟರಾಯ್ತು ..."

"ಛೆ, ಏನು ಮಾತೂಂತ ಆಡ್ತೀರಿ. ನಮಗೆ ಹುಟ್ಟಿರೋ ಮೊದಲ ಮಗು. ಶಾಸ್ತ್ರೋಕ್ತವಾಗಿ ನಾಮಕರಣ ಮಾಡಿದ್ರೇನೇ ಶ್ರೇಯಸ್ಸು. ದಯವಿಟ್ಟು ಬೇಡ

ಎನ್ನಬೇಡಿ."

"ನಿನ್ನ ಮಾತಿಗೆ ಹೂಂ ... ಹೂಂ ಅಂತ ಅನ್ನೋದೇ ಆಗಿ ಹೋಗಿದೆ ನನಗೀಗ. ಮೊದಲೇ ಸರಿ. ನಿನಗೀಗ ನಿನ್ನ ಮಗಳ ಸಪೋರ್ಟ್ ಬೇರೆ" ಗಂಡನ ಮಾತಿಗೆ ಶಾಂತ ಮೆಲುವಾಗಿ ನಕ್ಕಳು.

"ಒಂದು ಮಗುವಿನ ತಾಯಿ ಅಂತ ಹೇಳೋಕೇ ಆಗುಲ್ಲ ಕಣೇ ಶಾಂತು ... ಮೊದಲ್ಗಿಂತ ಚೆನ್ನಾಗಿ ಕಾಣ್ತೀಯ" ಬಳಿ ಸರಿದ ಗಂಡನನ್ನು ಶಾಂತ ತಳ್ಳಿದಳು.

"ಇದು ನಿಮ್ಮ ಮನೆಯಲ್ಲ ; ಅಪ್ಪನ ಮನೆ. ಯಾರಾದ್ರೂ ನೋಡಿದ್ರೆ ಏನಂದುಕೊಳ್ತಾರೆ ... ಸ್ವಲ್ಪ ದೂರ ಕೂತ್ಕೊಳ್ಳಿ ..."

"ಬಿಡೇ .... ನಾನೇಕೆ ಹೆದರಬೇಕು? ನಾನು ನನ್ನ ಹೆಂಡತಿ ಜೊತೆ ಚಕ್ಕಂದ ಆಡಿದರೆ ತಪ್ಪೇನು?"

"ಹಾಗಲ್ಲ .... ಬಾಣಂತಿ ರೂಮಿಗೆ ಗಂಡಸರು ಬರಲೇ ಬಾರದು ಅಂತ ..... ಅದಕ್ಕೇ ......"

"ನಂಗೊತ್ತಿತ್ತು ನೀನು ಹೀಗೇ ಆಡ್ತೀಯ ಅಂತ. ನನ್ನನ್ನ ದೂರ ಇಡೋಕೆ ನಿನಗೊಂದು ನೆವ."

"ಕೋಪಿಸ್ಕೋ ಬೇಡ್ರೀ ...... ಇರೋ ವಿಷಯ ಹೇಳಿದೆ."

"ನಂಗೊತ್ತು ಶಾಂತೂ ...... ಒಂದು ಮಗುವಾದ್ರೆ, ನನ್ನನ್ನು ದೂರ ಮಾಡಬಹುದು ಅಂತ ಕಾಯುತ್ತಿದ್ದೆ ನೀನು. ಅದಕ್ಕೆ ಮಗುವಾಗಲಿಲ್ಲ ಅಂತ ಹಂಬಲಿಸ್ತಾ ಇದೆ."

"ಥೂ ಏನೇನೋ ಮಾತನಾಡಬೇಡಿ. ಮದುವೆಯಾದ ಎಲ್ಲಾ ಹೆಂಗಸೂ ತಾಯಿಯಾಗಬೇಕೂಂತ ಹಂಬಲಿಸುತ್ತಾಳೆ. ನಿಜ ಹೇಳಿ, ನಿಮಗೆ ನೀವು ತಂದೆ ಆದೆ ಅಂತ ಖುಷಿ ಇಲ್ಲಾ?"

"ಇಲ್ಲಾ ನನಗೆ ಹಾಗೇನೂ ಅನ್ನಿಸೋಲ್ಲ ......" ಓರೆಗಣ್ಣಿನಿಂದ ಅವಳನ್ನು ನೋಡಿದ. ಅವಳ ಕಣ್ಣುಗಳಲ್ಲಾಗಲೇ ನೀರು ಜಿನುಗಿದ್ದನ್ನು ಗಮನಿಸಿದ. ಎಚ್ಚೆತ್ತುಕೊಂಡ.

"ಸುಮ್ಮನೇ ತಮಾಷೆ ಮಾಡಿದೆ. ಇದು ನಮ್ಮಿಬ್ಬರ ಮಗು. ನನಗೆ ಖುಷಿಯಾಗದೇ ಇರುತ್ತಾ?" ಎನ್ನುತ್ತಾ ಮಗುವನ್ನು ಮುದ್ದಿಸುವಂತೆ ಬಾಗಿದವನು, ಮಡದಿಯ ಕೆನ್ನೆಗೆ ಮುತ್ತನ್ನಿತ್ತ. ಶಾಂತ ಸಣ್ಣಗೆ ಚೀರಿ, ತೆರೆದ ಬಾಗಿಲ ಕಡೆ ನೋಡಿದಳು. ರಾಮಸ್ವಾಮಿ ಹಿಂದೆ ಸರಿದ.

"ಬೇಗ ನನ್ನ ಮನೆಗೆ ಬಂದು ಬಿಡು ಶಾಂತು. ನಿನ್ನ ಬಿಟ್ಟು ನಾನಿರಲಾರೆ ...."

"ಅತಿಯಾಯ್ತು ನಿಮ್ಮ ರಸಿಕತನ. ಬಾಣಂತಿಯ ಹತ್ತಿರ ಹೀಗೆಲ್ಲಾ ಮಾತನ್ನೇ ಆಡಬಾರದಂತೆ ....."

"ಈಗ ನಿನ್ನ ಕಾಲ... ನಿನ್ನ ತವರು ಮನೇಲಿದೀಯ. ಮಗ್ಗುಲಲ್ಲಿ ಮಗಳಿದಾಳೆ ..... ಆಗಲಿ ಆಗಲಿ ... ಈ ಕಾಲವೂ ಮುಗಿಯುತ್ತೆ. ಆಗ ನಿನಗೆ ನಾನೇ ಗತಿ ...."

"ಅಳಿಯಂದ್ರೆ ... ಸ್ವಲ್ಪ ಹೊರಗೆ ಬರ್ತೀರಾ?" ಮಾವ ಕರೆದಾಗ ರಾಮಸ್ವಾಮಿ ಪೆಚ್ಚಾದ. ಶಾಂತ ಕಿಸಿ ಕಿಸಿ ನಗುತ್ತಿದ್ದಳು. ಹೊರಗೆ ಬಂದ.

"ನಿಮ್ಮ ಕಡೆಯ ನೆಂಟರಿಷ್ಟರಿಗೆ ಆಹ್ವಾನ ಪತ್ರ ಬರೀತಿದೀನಿ. ಸ್ವಲ್ಪ ಅವರುಗಳ ಅಡ್ರೆಸ್ ಹೇಳ್ತೀರಾ?"

"ನನ್ನ ಕಡೆ ಹತ್ತಿರದವರು ಯಾರೂ ಇಲ್ಲ ಉಳಿದವರು ಈ ಸಣ್ಣ ಪುಟ್ಟ

ಸಮಾರಂಭಕ್ಕೆ ಬರುವುದಿಲ್ಲ."

"ಯಾಕೆ ಹಾಗಂತೀರಿ? ಕೆಲವರಿಗಾದ್ರೂ ತಿಳಿಸೋಣ."

"ಏನೂ ಬೇಡ" ಎಂದ. ಒಳಗಿದ್ದ ಶಾಂತಳಿಗೆ ಅವನ ಮಾತು ಕೇಳಿಸಿತ್ತು. ಅವನ ವಿಚಿತ್ರ ವರ್ತನೆ ಅವಳಿಗೆ ಅರ್ಥವಾಗಲಿಲ್ಲ.

ನಾಮಕರಣ ಸರಳ ಸಮಾರಂಭವಾದರೂ, ಕೆಲವರನ್ನಾದರೂ ಕರೆಯಲೇ ಬೇಕೂಂತ ಶಾಂತಳ ಆಸೆ. ಮದುವೆಯಾಗಿ ನಾಲ್ಕು ವರ್ಷಗಳಾದರೂ ಮಕ್ಕಳಾಗಿಲ್ಲ. ಬಂಜೆ ಅಂತ ಯಾರಾದ್ರೂ ಖಂಡಿತಾ ಅಂದು ಕೊಂಡಿರಲೇ ಬೇಕು. ಅವರುಗಳಿಗೆ ನಾನು ತಾಯಿಯಾದೆ ಅಂತ ತಿಳಿಸಬೇಡವೇ? ಇದು ಶಾಂತಳ ಅನ್ನಿಸಿಕೆ. ಆದರೆ ಅದರ ಬಗ್ಗೆ ಹೆಚ್ಚು ವಾದ ಮಾಡಲಿಲ್ಲ. ಗಂಡನಿಗೇ ಅವರುಗಳು ಬೇಡವಾದ ಮೇಲೆ, ತಾನೇಕೆ ಹಚ್ಚಿಕೊಳ್ಳಬೇಕು ಅಂತಂದುಕೊಂಡಳು.

ಮಗುವಿಗೆ 'ನಾಗಲಕ್ಷ್ಮಿ' ಎಂದು ಹೆಸರನ್ನಿಡಬೇಕೆಂದು ಶಾಂತ ಹೇಳಿದಾಗ ರಾಮಸ್ವಾಮಿ ಸಿಟ್ಟಾದ. "ನಮ್ಮಮ್ಮನ ಹಳೇಕಾಲದ ಹೆಸರು .... ಯಾವುದಾದರೂ ನವೀನವಾದ ಹೆಸರನ್ನಿಡೋಣ" ಎಂದ.

ಶಾಂತ ವಾದಿಸಿದಳು. "ನಾನು ಅಶ್ವತ್ಥಕಟ್ಟೆಗೆ ಪ್ರದಕ್ಷಿಣೆ ಹಾಕುವಾಗಲೇ, ಗಂಡಾದರೆ, ನಾಗರಾಜ ಅಂತ, ಹೆಣ್ಣಾದರೆ ನಾಗಲಕ್ಷ್ಮಿ ಅಂತ ಹೆಸರನ್ನಿಡ್ತೀನಿ ಅಂತ ಮನಸ್ಸಿನಲ್ಲೇ ಅಂದುಕೊಂಡಿದ್ದೆ. ದಯವಿಟ್ಟು ಬೇಡಾಂತ ಅನ್ನಬೇಡಿ ...."

"ಹಾಗಾದರೆ ಏನನ್ನಾದರೂ ಹೇಳುವ ಹಕ್ಕು ಸಹ ನನಗಿಲ್ವಾ?"

"ಹಕ್ಕಿನ ಪ್ರಶ್ನೆ ಎಲ್ಲಿಂದ ಬರುತ್ತೆ. ಮಗಳ ಮೇಲೆ ಸಂಪೂರ್ಣ ಹಕ್ಕು ನಿಮ್ಮದೇ. ಮೊದಲು ಈ ದೇವರ ಹೆಸರನ್ನು ಇಡೋಣ. ಆಮೇಲೆ ಕರೆಯೋಕೆ ಏನಾದರೂ ಇಡೋಣ. ಆ ಹೆಸರನ್ನು ನೀವೇ ಯೋಚಿಸಿ ಹೇಳಿ."

"ಏನೂ ಬೇಡ ಇಡಕ್ಕೊಂದು, ಕರೆಯಕ್ಕೊಂದು ಅದೆಲ್ಲಾ ಏನೂ ಬೇಡ." ಅವನು ಅಲ್ಲಿಂದ ಎದ್ದು ಹೋಗಿದ್ದ. ಗಂಡ ಸಿಟ್ಟಾದರೂ ಶಾಂತ ತನ್ನ ನಿಲುವನ್ನು ಬದಲಾಯಿಸಿಕೊಳ್ಳಲಿಲ್ಲ. ಮಗುವಿಗೆ ನಾಗಲಕ್ಷ್ಮಿ ಎಂದೇ ನಾಮಕರಣ ಮಾಡಿದರು. ಈ ಶಾಸ್ತ್ರ ಸಂಪ್ರದಾಯಗಳ ಬಗ್ಗೆ ರಾಮಸ್ವಾಮಿಗೆ ಅಷ್ಟಕ್ಕಷ್ಟೇ. ಆದರೂ ಮಗುವಿನ ಮುಖ ನೋಡಿದಾಗ ಏನೋ ಆನಂದ. ಶಾಸ್ತ್ರಿಗಳು ಹೇಳಿದಂತೆ ಕೇಳಿದ. ಸಮಾರಂಭ ಮುಗಿಯಿತು.

ಅದೇ ರಾತ್ರಿ ಊರಿಗೆ ಹೊರಟ. ಹೊರಡುವ ಮೊದಲು ಹೆಂಡತಿಗೆ ಖಡಾಖಂಡಿತವಾಗಿ ಹೇಳಿದ.

"ಇನ್ನೂ ನಾನು ಮತ್ತೆ ಮತ್ತೆ ಬರುಲ್ಲ. ಈ ತಿಂಗಳು ಕಳೆಯುತ್ತಿದ್ದ ಹಾಗೆ ಊರಿಗೆ ವಾಪಸ್ಸು ಬಂದು ಬಿಡು."

"ಅಮ್ಮ ಅಪ್ಪ ಏನಂತಾರೋ .......? ಅನುಮಾನಿಸಿದಳು.

"ನಾನೇ ನಿನ್ನ ತಂದೆಗೆ ಹೇಳ್ತೀನಿ ....."

"ಬೇಡ ಬೇಡ. ನಾನೇ ಹೇಳ್ತೀನಿ ......" ಅವಳು ಮೆತ್ತಗೆ ನುಡಿದಾಗ, ಅವನು ಮುಗುಳ್ನಕ್ಕು, ಮಗುವನ್ನು ಮುದ್ದಿಸಿ, ಹೊರಟ. ನಾಲ್ಕು ವರ್ಷಗಳಿಂದ ಇದ್ದ ಹಾಗೆ ಇವನು ಇಲ್ಲ. ಈ ನಾಲ್ಕು ತಿಂಗಳಲ್ಲಿ ಬದಲಾಯಿಸಿ ಹೋಗಿದ್ದಾನೆ ಎಂಬ ಅನುಮಾನ ಮೂಡಿತು. ಆದರೆ ಅದನ್ನು ಯಾರೊಡನೆಯೂ ಹೇಳಿಕೊಳ್ಳುವಂತಿಲ್ಲ.

"ಅಮ್ಮಾ ... ಅವರಿಗೆ ಊಟ ತಿಂಡಿಗೆ ಕಷ್ಟವಾಗುತ್ತಂತೆ. ಈ ತಿಂಗಳು ಕಳೆದ

ಕೂಡಲೇ ನಾನು ವಾಪಸ್ಸು ಹೋಗ್ತೀನಿ" ಶಾಂತ ತಾಯಿಯೊಡನೆ ಹೇಳಿದಳು.

"ಇನ್ನೆರಡು ತಿಂಗಳು ಕಳೀಲಿ ಸುಮ್ಮನಿರು. ಅಲ್ಲಾ, ಈ ಎರಡು ತಿಂಗಳ ಮಗೂನ ಕಟ್ಟಿಕೊಂಡು ಅಡಿಗೆ ಕೆಲಸ ಹೇಗೆ ಮಾಡ್ತೀಯಾ?"

"ಹೇಗೋ ಆಗುತ್ತೆ ಬಿಡಮ್ಮ. ನಮ್ಮ ಮನೆಯ ಹತ್ತಿರ ಎಲ್ಲಾ ಅನುಕೂಲವಿದೆಯಂತೆ. ಆದರೆ ಪಾರ್ವತಮ್ಮನಂಥೋರು ಇದಾರೋ ಇಲ್ಲವೋ ಗೊತ್ತಿಲ್ಲ."

"ಆ ಮನೇನ ಯಾಕೆ ಬಿಟ್ಟರಂತೆ... ನಿನಗೊಂದು ಮಾತನ್ನೂ ತಿಳಿಸಲಿಲ್ಲವಲ್ಲ ಏಕೆ?"

"ಈಗ ನಮ್ಮ ಸಂಸಾರ ದೊಡ್ಡದಾಯ್ತಲ್ಲ. ಅದಕ್ಕೇ ದೊಡ್ಡ ಮನೆ ಮಾಡಿದಾರೆ...." ಮಗಳ ಮೃದುವಾದ ಕೆನ್ನೆಯನ್ನು ಸವರುತ್ತಾ ನುಡಿದಳು.

"ನೀವು ಗಂಡ ಹೆಂಡತಿ ಅನ್ಯೋನ್ಯವಾಗಿದೀರಿ ತಾನೇ?" ತಾಯಿ ಕತ್ತೆತ್ತದೇ ಪ್ರಶ್ನಿಸಿದಾಗ ಶಾಂತ ಚಕಿತಳಾದಳು.

"ಏನಮ್ಮಾ ಹೀಗೆ ಕೇಳ್ತೀಯಾ? ಯಾಕೆ?"

"ನಾಲ್ಕು ವರ್ಷದಿಂದ ಮಕ್ಕಳಾಗಿರಲಿಲ್ಲ. ಈಗ ಮಗುವಾದರೂ ನಿನ್ನ ಗಂಡನಿಗೆ ಸಂತೋಷವಿಲ್ಲ ಅಂತನ್ನಿಸ್ತು ... ಅದಕ್ಕೆ ಕೇಳಿದೆ."

"ಹಾಗೇನಿಲ್ಲಮ್ಮ ನನ್ನ ಗಂಡ ತುಂಬಾ ಒಳ್ಳೆಯವರು. .ಒಂದು ದಿನವಾದರೂ ಮಕ್ಕಳಾಗಲಿಲ್ಲ ಅಂತ ಬೇಸರ ತೋರಿಸಿರಲಿಲ್ಲ. ಆದರೆ ಮಗುವಾಗಲಿ ಅಂತ ನಾನು ವ್ರತ, ಪೂಜೆ ಮಾಡಿದ್ದು ಅವರಿಗೆ ಅಷ್ಟೇನೂ ಇಷ್ಟವಿರಲಿಲ್ಲ. ಅದಕ್ಕೇ ನಾಗಲಕ್ಷ್ಮಿ ಅನ್ನೋ ಹೆಸರೂ ಸಹ ಅವರಿಗೆ ಇಷ್ಟವಾಗಲಿಲ್ಲ ಅಷ್ಟೇ ..."

"ಅವರಿಗೆ ಬೇಡವಾದ ಮೇಲೆ ನೀನ್ಯಾಕೆ ಹೀಗೆ ಮಾಡಿದೆ? ಸುಮ್ಮನಿರಬಾರದಾಗಿತ್ತಾ?"

"ಹೆಣ್ಣಾಗಿ ನೀನೂ ಇಂಥಾ ಮಾತಾಡ್ತೀಯ? ಯಾಕೆ ನಾನು ತಾಯಿಯಾಗಿದ್ದು ನಿನಗೂ ಇಷ್ಟವಾಗಲಿಲ್ಲಾ? ಅಥವಾ ಬಾಣಂತನ ಮಾಡುಕ್ಕೆ ಬೇಸರವೋ ....." ಶಾಂತಳ ಕಣ್ಣುಗಳು ಕೆಂಪಾಗಿದ್ದವು.

"ಛೇ, ಅದಲ್ಲವೇ ನಾಗಲಕ್ಷ್ಮಿ ಅಂತ ಹೆಸರನ್ನಿಡಬೇಕೂಂತ ಯಾಕೆ ಹಠ ಅಂತಾ?"

"ಬಿಡಮ್ಮಾ .... ನಾಮಕರಣ ಮಾಡಿದ್ದಾಯ್ತು. ಇಷ್ಟವಿಲ್ಲದಿದ್ದರೆ ಬೇರೆ ಹೆಸರ್ನಿಂದ ಕರೆದರಾಯ್ತು. ಸ್ಕೂಲಿಗೆ ಸೇರಿಸೋ ಹೊತ್ತಿಗೆ ಹೊಸಾ ಹೆಸರನ್ನು ಹುಡುಕ್ತೀನಿ ...."

"ಹಾಗಲ್ಲ ಕಣೇ ... ಗಂಡಸರನ್ನು ನಂಬಬಾರದು. ಅವರ ಮನಸ್ಸು ಯಾವಾಗ, ಯಾತಕ್ಕೆ ಬದಲಾಗುತ್ತೆ ಅಂತ ಹೇಳೋಕೇ ಆಗುಲ್ಲ. ನಿನ್ನ ಮಾತೇ ನಡೀಬೇಕು ಅನ್ನೋ ಹಠ ನಿನಗ್ಯಾಕೆ?"

"ನನಗೆ ಹೇಳ್ತೀಯ. ನೀನು ಅಪ್ಪನ ಜತೆ ವಾದಿಸುಲ್ವಾ?"

"ನಾನು ಎಷ್ಟೇ ವಾದಿಸಿದರೂ, ನಡೆಯೋದು ಅಪ್ಪನ ಮಾತೇ ತಾನೆ? ಇಲ್ಲದಿದ್ದರೆ, ನಮ್ಮ ಸಂಸಾರ ಇಷ್ಟು ದೊಡ್ಡದಾಗಿ ಬೆಳೀತಿರಲಿಲ್ಲ."

ಶಾಂತ ನಕ್ಕು ಬಿಟ್ಟಳು. "ಹೌದು. ಅಪ್ಪ ನಿನ್ನ ಮಾತು ಕೇಳಿದ್ದರೆ, ನಾನೇ ಹುಟ್ಟುತ್ತಿರಲಿಲ್ಲ. ನನಗೆ ಈ ಮಗುವೂ ಹುಟ್ಟುತ್ತಿರಲಿಲ್ಲ."

"ಹೋಗಲಿ ಬಿಡು. ಅದೆಲ್ಲಾ ಬೇಡದ ಮಾತು. ಹುಟ್ಟೋ ಮಕ್ಕಳು ಹುಟ್ಟಿಯೇ ಬಿಡುತ್ತವೆ. ಅವಕ್ಕೆ ಬೇಕೋ ಬೇಡವೋ ನಾವೇನು ಕೇಳಿರುತ್ತೀವಾ? ಆದರೆ ಈ

ಜವಾಬ್ದಾರಿಗಳನ್ನು ಪೂರೈಸುವಾಗ, ಕರ್ತವ್ಯವನ್ನು ನಿಭಾಯಿಸುವಾಗ, ನಾವು ತಪ್ಪು ಮಾಡೀದೀವೇನೋ ಅಂತನ್ನಿಸುತ್ತೆ." ಅಮ್ಮನ ಮಾತಿನ ಮೇಲೆ ಅವಳಿಗೆ ಗಮನವಿರಲಿಲ್ಲ. ಗಂಡನ ಬಗ್ಗೆ ಚಿಂತಿಸುತ್ತಿದ್ದಳು. ಗಂಡನಿಗೆ ನನ್ನ ಮೇಲೆ ಅಸಮಾಧಾನವಿರಬಹುದೆ? .... ಗಂಡನಿಗೆ ನನ್ನನ್ನು ಬಿಟ್ಟು ಇರುವುದು ಕಷ್ಟವೆನಿಸುತ್ತಿರಬಹುದು. ಅಮ್ಮ ಏನೇ ಹೇಳಲಿ, ಆದಷ್ಟು ಬೇಗ ನಾನು ಇಲ್ಲಿಂದ ಹೋಗುವುದೇ ಒಳ್ಳೆಯದು ಎಂದು ನಿರ್ಧರಿಸಿದಳು.

ಒಂದು ಒಳ್ಳೆಯ ದಿನವನ್ನು ಪ್ರಯಾಣಕ್ಕೆ ಗೊತ್ತು ಮಾಡಿದರು. ಶಾಂತ ಮಗುವಿನೊಂದಿಗೆ, ಗಂಡನ ಮನೆಗೆ ಹಿಂತಿರುಗಿದಳು. ರೈಲ್ವೇ ನಿಲ್ದಾಣಕ್ಕೆ ರಾಮಸ್ವಾಮಿ ಬಂದಿದ್ದ. ಎಲ್ಲರೂ ಟ್ಯಾಕ್ಸಿ ಹತ್ತಿದರು. ಮನೆಯ ಬಳಿ ಟ್ಯಾಕ್ಸಿ ನಿಂತಾಗ, ರಾಮಸ್ವಾಮಿ ಇಳಿದು, ಮುಂಬಾಗಿಲಿಗೆ ಹಾಕಿದ ಬೀಗವನ್ನು ತೆಗೆದಾಗ, ಶಾಂತಳಿಗೆ ಪಿಚ್ಚೆನ್ನಿಸಿತು. ತಾಯಿ ಹೇಳಿದಳು,"ಮಗು ಬಾಣಂತಿಗೆ, ಆರತಿ ಎತ್ತಿ ಬರ ಮಾಡಿಕೊಳ್ಳಲು ಸಹ ಯಾರು ಇಲ್ಲವಲ್ಲೇ .... ಕೇಳು ನಿನ್ನ ಗಂಡನ್ನ ....." ಶಾಂತಳಿಗೆ ಕಸಿವಿಸಿ ಆಯಿತು. ಅದೇ ಹಳೇ ಮನೆಯಲ್ಲಿ ಇದ್ದಿದ್ದರೆ ಪಾರ್ವತಮ್ಮ ಸಡಗರದಿಂದ ಓಡಿ ಬಂದಿರುತ್ತಿದ್ದರು ಅಂತೆನ್ನಿಸಿತ್ತು.

"ಪಕ್ಕದ ಮನೇಲಿ ಯಾರಾದ್ರೂ ಹೆಂಗಸರಿದ್ರೆ ಕರೀರಿ. ಮಗೂಗೆ ಹೊಸ್ತಿಲ ಬಳಿ ಆರತಿ ಎತ್ತ ಬೇಕಂತೆ."

"ನನಗೆ ಇಲ್ಲಿ ಯಾರೂ ಪರಿಚಯವಿಲ್ಲ."

"ಹೋಗಿ ಕರದ್ರೆ ಯಾರಾದ್ರೂ ಬಂದೇ ಬರುತ್ತಾರೆ... ಕೇಳಿ ನೋಡಿ."

"ಶಾಂತ, ನನ್ನ ಕೈಲಿ ಇದೆಲ್ಲಾ ಆಗುಲ್ಲ ....." ಶಾಂತ ಪೆಚ್ಚಾದಳು.

"ನಾನೇ ನೋಡ್ತಿನಿ ....." ಶಾಂತನ ತಾಯಿ ಪಕ್ಕದ ಮನೆಯ ಕಡೆ ತಿರುಗಿದರು. ಕೆಲವೇ ನಿಮಿಷಗಳಲ್ಲಿ ಮಧ್ಯವಯಸ್ಸಿನ ಹೆಂಗಸೊಬ್ಬಳು ಆರತಿ ತಟ್ಟೆಯೊಂದಿಗೆ, ಆಕೆಯೊಡನೆ ಬಂದಳು. ಅಂತೂ ಶಾಸ್ತ್ರೋಕ್ತವಾಗಿ, ಶಾಂತ ಮಗುವಿನೊಂದಿಗೆ ಮನೆಯೊಳಗೆ ಕಾಲಿಟ್ಟಳು. ಮನೆಯ ಅವ್ಯವಸ್ಥೆ ಕಂಡು ಅವಳಿಗೆ ಹೇಗೆ ಹೇಗೋ ಆಯಿತು. "ಹೆಂಗಸರಿಲ್ಲದ ಮನೆ ಎಂದರೆ ಹೀಗೇನೇ. ನಾನು ಬರ್ತೀನಿ ಅಂತ ತಿಳಿದಿತ್ತಲ್ಲ. ಆದರೂ ಯಾಕೆ ಹೀಗೆ ಹೀಗೇ ಬಿದ್ದಿದೆಯೋ .. ನಾನಂತೂ ಈಗ ಇದನ್ನೆಲ್ಲ ಮಾಡುವುದಕ್ಕಾಗುವುದಿಲ್ಲ ಎಂದುಕೊಂಡಳು. ಪಕ್ಕದ ಮನೆಯ ಹೆಂಗಸೇ ತನ್ನ ಪರಿಚಯವನ್ನು ಹೇಳಿಕೊಂಡು, ಮಗುವನ್ನು ನೋಡಿ ಕೈಗೆ ಐದು ರೂಪಾಯಿನ ನೋಟೊಂದನ್ನು ಇಟ್ಟು ಹೊರಟಳು. ಶಾಂತನ ತಾಯಿ ಕುಂಕುಮದ ಭರಣಿಯನ್ನು ಹುಡುಕಿ ಕುಂಕುಮವನ್ನು ಕೊಟ್ಟರು. "ನಾನು ಎಲ್ಲರಿಗೂ ಕಾಫಿ ತಂದು ಕೊಡ್ತೀನಿ ...." ಎಂದಾಗ ರಾಮಸ್ವಾಮಿ ಬೇಡಾಂತ ಹೇಳಿದ.

"ನಾನು ಕಾಫಿ ಬೆರೆಸ್ತಿದೀನಿ ನೀವೂ ಕುಡಿದು ಹೋಗಬೇಕು" ಎಂದ.

"ಪರವಾಗಿಲ್ಲ. ನೀವುಗಳು ಕುಡಿಯಿರಿ. ಏನಾದರೂ ಬೇಕಾಗಿದ್ದರೆ ಸಂಕೋಚವಿಲ್ಲದೇ ಕೇಳಿ. ಇದುವರೆಗೂ ಪರಿಚಯವಿರಲಿಲ್ಲ. ಈಗ ನೀವು ಬಂದದ್ದು ಒಳ್ಳೇದಾಯ್ತು." ಆಕೆ ಅತ್ತ ಹೊರಟು ಹೋದ ಕೂಡಲೇ ಶಾಂತ ಗಂಡನನ್ನು ತರಾಟೆಗೆ ತೆಗೆದುಕೊಂಡಳು.

"ಇದೇನು ಮನೇನ ಹೀಗೆ ಇಟ್ಟುಕೊಂಡಿದೀರಿ. ನೋಡಿದೋರು ನಗೋ ಹಾಗೆ ...."

"ಇನ್ನು ನೀನು ಬಂದೆಯಲ್ಲ. ಅದು ಹೇಗೆ ಇಟ್ಟುಕೋತೀಯೋ ಅದು ನಿನ್ನ ಕೆಲಸ."

ಅವನು ಅತ್ತ ಹೊರಟು ಹೋದ.

"ಬೇಡ ಶಾಂತ. ಈಗಲಿಂದ ಆಯಾಸ ಮಾಡ್ಕೋ ಬೇಡ. ಎದ್ದ ಬಾಣಂತಿ. ನಿನಗೆ ಹೆಚ್ಚು ಕಡಿಮೆ ಆದರೆ, ಮಗೂಗೂ ತೊಂದರೆ ಆಗುತ್ತೆ. ಇಲ್ಲಂತೂ ಗಂಡ ಹೆಂಡತಿ ನೀವಿಬ್ರೇ .... ಹಿರಿಯೋರು ಅಂತ ಯಾರಿಲ್ಲ."

"ನೀನೇ ಒಂದೆರಡು ತಿಂಗಳು ಇಲ್ಲಿ ನಮ್ಮ ಜತೆ ಇರು."

"ಅದಂತೂ ಆಗದ ಮಾತು. ನಮ್ಮ ಮನೇಲಿ ನೋಡೋರು ಯಾರೂ ಇಲ್ಲ. ಎರಡು ದಿನ ಮನೆಗೆ ಬೀಗ ಹಾಕಿದ್ದರೆ, ಏನೇನು ಆಗಿ ಹೋಗುತ್ತೋ ಅಂತ ಗಾಬರಿ ಆಗುತ್ತೆ. ಬಂದ ಕೆಲಸ ಆಯ್ತಲ್ಲ. ನಾವು ನಾಳೇನೇ ಹೊರಡ್ತೀವಿ. ನಿನ್ನ ಗಂಡನಿಗೆ ಹೇಳಿ ಬಿಡು."

ರಾಮಸ್ವಾಮಿ ಅತ್ತೆ ಮಾವನನ್ನು ಬಲವಂತದಿಂದ ಉಳಿಸಿಕೊಳ್ಳಲಿಲ್ಲ. ಅವರುಗಳು ಅತ್ತ ಹೊರಟು ಹೋದ ಕೂಡಲೇ, ಶಾಂತ ಗಂಡನ ಮೇಲೆ ರೇಗಿದಳು.

"ನೀವೆಂಥಾ ಮನುಷ್ಯನಪ್ಪಾ ...? ಇನ್ನೊಂದೆರಡು ದಿನಗಳು ನಮ್ಮ ಅಪ್ಪ ಅಮ್ಮ ನಮ್ಮ ಜತೆಗೆ ಇದ್ದಿದ್ದರೆ, ನಿಮ್ಮ ಗಂಟೇನು ಹೋಗ್ತಿತ್ತು?"

"ನಮ್ಮ ಏಕಾಂತಕ್ಕೆ ಭಂಗ ಬರುತ್ತಿತ್ತು ....." ಎನ್ನುತ್ತಾ ಬಳಿ ಸಾರಿದ. ಶಾಂತ ದೂರ ತಳ್ಳಿದಳು.

"ಬರ್ತಾ ಬರ್ತಾ ನಿಮ್ಮ ರಸಿಕತನ ಜಾಸ್ತಿಯಾಗಿದೆ. ಈಗಿನ್ನು ಮಗು ಚಿಕ್ಕದು ... ನೀವು ನನ್ನ ಹತ್ತಿರ ಬರೋ ಹಾಗೇ ಇಲ್ಲ ....."

"ಅದಕ್ಕೇ ನಾನು ಮಕ್ಕಳು ಮರಿಯ ಜಂಝಾಟ ಬೇಡ ಹಾಯಾಗಿ ನಾವಿಬ್ಬರೇ ಇರೋಣ ಅಂತ ಅಂದದ್ದು ...."

ಶಾಂತ ಮುಸಿ ಮುಸಿ ಅತ್ತಳು. "ಮಕ್ಕಳಿಲ್ಲದ ಮನೆ ಅದೂ ಒಂದು ಮನೇನ? ನಾನು ಬಯಸಿ ಬಯಸಿ, ಮಗುವನ್ನು ಹೆತ್ತಿದ್ದೇನೆ. ನೀವು ಪದೇ ಪದೇ ಅದೇ ಮಾತನ್ನಾಡಿ ನನ್ನನ್ನು ನೋಯಿಸ್ತೀರಿ ...."

ರಾಮಸ್ವಾಮಿ ಪೆಚ್ಚಾದ. ಆದರೆ ಏನನ್ನು ಆಡದೇ ಅಲ್ಲಿಂದ ಎದ್ದು ಹೋದಾಗ, ಶಾಂತ ಗಂಡನಿಗೆ ಸಿಟ್ಟು ಬಂದಿತೆಂದು ಭಾವಿಸಿದಳು. ಆದರೆ, "ಗಂಡ ಹೆಂಡತಿಯ ಜಗಳ ಉಂಡು ಮಲಗುವವರೆಗೆ" ಎನ್ನೋ ಗಾದೆಗೆ ತಕ್ಕಂತೆ, ರಾತ್ರಿ ಗಂಡ ಹೆಂಡತಿ ಒಟ್ಟಿಗೇ ಮಲಗಿದಾಗ, ಜಗಳ ಮುಕ್ತಾಯಗೊಂಡಿತ್ತು.

ಮಗಳು ದಿನ ದಿನಕ್ಕೆ ಬೆಳೆದು ತಂದೆಯ ಮನವನ್ನು ಗೆದ್ದಳು. ಮುದ್ದಿಗೆ ಲಚ್ಚೂ, ಲಚ್ಚೂ, ಅಂತ ಕರೆಯಲು ಪ್ರಾರಂಭಿಸಿದ್ದು ಕಡೆಗೆ ಅದು, ಅಚ್ಚೂ, ಅಚ್ಚೀಯಾಗಿ ಕಡೆಗೆ ಆಚಿಯಾಗಿ ಉಳಿದುಕೊಂಡಿತು. ಆಚಿ ಅಪ್ಪನ ಮುದ್ದಿನ ಮಗಳಾದಳು. ಮಗುವಿನ ಆಟಪಾಟ, ನಗು ಕೇಕೆ ಅಳು, ರಂಪ ಪ್ರತಿಯೊಂದೂ ಆಪ್ಯಾಯಮಾನವಾಗಿತ್ತು.

"ಶಾಂತ, ನಾನು ಏನೇನೋ ಅಂದ್ಕೊಂಡಿದ್ದೆ ಕಣೇ .... ಮಗು ನಮ್ಮ ಜೀವನಕ್ಕೆ ಎಷ್ಟು ಮುಖ್ಯ ಅಂತ ನನಗೀಗ ಅರ್ಥವಾಗ್ತಿದೆ. ಆಚೀನ ಬಿಟ್ಟು ಒಂದು ಗಳಿಗೆ ಇರಲಾರೆನೇನೋ ಅನ್ನೋವಷ್ಟು ಹಚ್ಚಿಕೊಂಡು ಬಿಟ್ಟಿದೀನಿ."

"ಈಗಲಾದ್ರೂ ಅರ್ಥವಾಯ್ತಾ? ನಾನು ಮಕ್ಕಳು ಮಕ್ಕಳು ಅಂತ ಯಾಕೆ ಹಂಬಲಿಸಿದೆ ಅಂತ ..." ಗಂಡನನ್ನು ಮೂದಲಿಸಿದಳು.

"ಅರ್ಥವಾಯ್ತು ಕಣೇ ಅರ್ಥವಾಯ್ತು ... ನನ್ನ ಮಗಳು ನನ್ನ ಜೀವನವನ್ನೇ

ಬದಲಾಯಿಸಿ ಬಿಟ್ಟಳು... ಈಗ ನನಗೆ ಇನ್ನೊಂದು ಆಸೆ ....." ಮುಗುಳ್ನಗುತ್ತಾ ಅವಳ ಬಳಿ ಸಾರಿದ.

"ಮಗಳು ಹುಟ್ಟಿದರೂ ನಿಮ್ಮ ರಸಿಕತನ ಕಡಿಮೆ ಆಗಿಲ್ಲ... ಯಾರಾದ್ರೂ ನೋಡಿದ್ರೆ ಏನಂದುಕೊಳ್ತಾರೆ?"

"ಯಾರು ಏನಾದ್ರೂ ಅಂದುಕೊಳ್ಳಲಿ ನನಗೇನು? ನಮಗೆ ಮಗಳು ಹುಟ್ಟಿದ ಮಾತ್ರಕ್ಕೆ ನಾವೇನು ಮುದುಕರಾಗಿ ಬಿಟ್ಟಿಲ್ಲ. ನಮಗೆ ಇನ್ನು ನಾಲ್ಕು ಮಕ್ಕಳು ಹುಟ್ಟಿದರೂ, ನಮ್ಮ ರಸಿಕತನ ಕಡಿಮೆ ಆಗಬಾರದು ಏನಂತೀಯಾ?"

ಶಾಂತ ನಾಚಿದಳು. "ಥೂ .... ಏನೇನೋ ಮಾತನಾಡ್ತೀರಿ ನೀವು ... ಯಾರಿಗಾದ್ರೂ ಕೇಳಿಸಿದರೆ ನಗೋಲ್ವೆ?"

"ಸುಮ್ಮನಿರು. ನಮ್ಮ ಜೀವನ ನಮ್ಮದು. ಯಾರೋ ನೋಡ್ತಾರೆ, ಯಾರೋ ಕೇಳಿಸ್ಕೋತಾರೆ ಅಂತ ನಾವೇಕೆ ಹೆದರಬೇಕು? ಅವರುಗಳಿಗೆ ಬೇರೆ ಕೆಲಸ ಇಲ್ಲವೆ? ಅಥವಾ ... ನಮ್ಮ ಹಾಗೇ ಅವರುಗಳೂ ಅಲ್ವಾ? ......" ಅವನು ಬಳಿ ಸಾಗಿದ.

"ನೀವು ಏನೇ ಅನ್ನಿ. ನನಗೇಕೋ ಭಯ ಆಗುತ್ತೆ."

"ಭಯ ಏಕೆ ಶಾಂತು? ನಾನು ನಿನ್ನ ಗಂಡ ... ನೀನು ಮೊದಲು ಹೀಗಿರಲಿಲ್ಲ ನೋಡು ..... ಒಳ್ಳೆ ಮುದುಕಿ ತರಹ ಆಡ್ತೀಯಲ್ಲ .... ನೀನು ಹೀಗೇ ಆಡ್ತಿದ್ದರೆ ನಾನು ಇನ್ನೊಂದು ಮದುವೆ ಮಾಡಿಕೊಳ್ತೀನಿ ಅಷ್ಟೆ."

ಶಾಂತ ಹೆದರಿದಳು. "ಗಂಡ ಯಾಕೆ ಹೀಗಾಡ್ತಾರೆ? ಸಮಯ ಸಂದರ್ಭ ಒಂದೂ ಬೇಡವೆ? ನಾಳೆ ಮಗಳು ಬೆಳೆದು ದೊಡ್ಡವಳಾದ ಮೇಲೂ ನಾವು ಹೀಗೇ ಇರೋದು ಚೆನ್ನವೇ? ಇವರಿಗೇಕೆ ಅರ್ಥವಾಗುಲ್ವೊ? ...... ಒಂದು ವೇಳೆ ಮತ್ತೆ ಇನ್ನೊಂದು ಮದುವೆಯಾಗಿ ಹೋದರೆ ಆಗ ನನ್ನ ಗತಿಯೇನು?" ಅವಳ ಕಣ್ಣುಗಳಲ್ಲಿ ನೀರು ತುಂಬಿ ಕೊಂಡಿತು. ಅವಳು ಕಣ್ಣೊರೆಸಿಕೊಂಡು ಮತ್ತೇನನ್ನೋ ಹೇಳುವಷ್ಟರಲ್ಲಿ ಗಂಡ ಅಲ್ಲಿಂದ ಎದ್ದು ಹೋಗಿದ್ದ.

"ಈಚೀಚೆಗೆ ಏನಾಗಿದೆ ಇವರಿಗೆ? ಪತಿಪತ್ನಿಯರ ಪ್ರೀತಿ ಮಕ್ಕಳಾದ ಮೇಲೆ ಹೆಚ್ಚಾಗುತ್ತೆ ಅಂತ ಕೇಳಿದ್ದೆ. ಇವರು ನೋಡಿದರೆ ಮಾತು ಮಾತಿಗೂ ಮುನಿಸಿಕೊಳ್ತಾರಲ್ಲ ..." ಮತ್ತೆ ಬಿಕ್ಕಿದಳು.

ಹೊರಬಾಗಿಲಲ್ಲಿ ನಿಂತು, ಇವಳನ್ನೇ ಗಮನಿಸುತ್ತಿದ್ದ ರಾಮಸ್ವಾಮಿ ಮನದಲ್ಲೇ ನಕ್ಕ. ಈ ಹೆಂಗಸರೇ ಇಷ್ಟು .... ಇನ್ನೊಂದು ಮದುವೆಯಾಗ್ತೀನಿ ಅಂತ ಹೆದರಿಸಿದರೆ ಸಾಕು ... ಬಳ ಬಳ ಅಂತ ಅತ್ತು ಬಿಡುವುದು ......" ಶಾಂತಳ ಅಳು ಅವನಿಗೆ ತಮಾಷೆಯಾಗಿ ಕಂಡಿತ್ತು.

ಗಂಡನ ಮೇಲಿನ ಕೋಪಕ್ಕೆ, ಶಾಂತ ಮಗುವನ್ನು ಹೊಡೆದು, ಮಗು ಅಳಲು ಪ್ರಾರಂಭಿಸಿದಾಗ ಅವನಿಗೆ ಸಹಿಸಲಿಲ್ಲ. ಸರ್ರನೆ ಒಳಬಂದು ಅವಳ ಕೈಯಿಂದ ಮಗುವನ್ನು ಎತ್ತಿಕೊಂಡ.

"ಏನಿದು? ನನ್ನ ಮೇಲಿನ ಕೋಪಕ್ಕೆ ಮಗೂನ ಯಾಕೆ ಹೊಡಿತೀಯ? ನಾಚಿಕೆ ಆಗೋಲ್ಲ ನಿನಗೆ ... ತಾಯಿಯಾಗಿ ಈ ಚಿಕ್ಕ ಮಗೂನ ಹೊಡೆಯೋದು ಅಂದ್ರೆ ಏನು?"

"ಇದು ನನ್ನ ಮಗು .... ನಾನು ಏನು ಬೇಕಾದ್ರೂ ಮಾಡ್ತೀನಿ ..."

"ಏನೆಂದೆ? ನಿನ್ನ ಮಗು? ನಾನು ಈ ಮಗುವಿನ ತಂದೆ ..... ನಿನಗಿಂತ ಹೆಚ್ಚಿನ

ಹಕ್ಕು ನನಗಿದೆ ...."

"ಒಂಭತ್ತು ತಿಂಗಳು ಹೊತ್ತೋಳು ನಾನು ; ಹೆರಿಗೆ ನೋವನ್ನು ಅನುಭವಿಸಿ ಹೆತ್ತೋಳು ನಾನು .... ನಿಮಗೇನು ಗೊತ್ತು ಹೆಂಗಸರ ಕಷ್ಟ? ಮತ್ತೆ ಮುಸಿ ಮುಸಿ ಅತ್ತಳು.

"ಸಾಕು ನಿಲ್ಲಿಸು, ಈ ಕೋಪ, ಈ ಅಳು ಎಲ್ಲಾ ನನ್ನ ಮೇಲಿನ ಸಿಟ್ಟಿಗೆ ಅಂತ ನನಗೂ ಗೊತ್ತು ... ಛೀ ಹುಚ್ಚಿ. ನಾನು ತಮಾಷೆಗೆ ಅಂದೆ ಅಷ್ಟೇ. ಅಲ್ಲಾ ನಿನ್ನನ್ನ ಬಿಟ್ಟು ಇನ್ನೊಬ್ಬಳ ಹಿಂದೆ ತಿರುಗುವಷ್ಟು ಕೀಳು ಮನುಷ್ಯ ನಾನಲ್ಲ ...." ಅವಳನ್ನು ರಮಿಸಿದ.

ಆದರೂ ಶಾಂತಳಿಗೆ ಸಮಾಧಾನವಾಗಿರಲಿಲ್ಲ. ಹೀಗೆ ಮಾತಾಡುವವನನ್ನು ನಂಬಬಾರದು. ಮದುವೆಗೆ ಮುಂಚೆ ಯಾವ ಸಂಬಂಧ ಇಟ್ಟುಕೊಂಡಿದ್ದನೋ .... ನಾನು ಬಾಣಂತನಕ್ಕೆ ಹೋಗಿದ್ದಾಗ, ಯಾರ ಸಹವಾಸ ಮಾಡಿದನೋ ಎನ್ನುವ ಸಂಶಯ ಅವಳನ್ನು ಕೊರೆಯಲಾರಂಭಿಸಿತು. ಇದ್ದಕ್ಕಿದ್ದಂತೆ, ಆ ಮನೆಯನ್ನು ಬಿಟ್ಟು ಈ ಕೊಂಪೆಗೆ ಬರಬೇಕಾದರೆ, ಏನೋ ನಡೆದಿರಲೇಬೇಕು ಎಂಬ ಸಂದೇಹ ಕಾಡಲಾರಂಭಿಸಿತು. ಗಂಡನ ಚಲನವಲನದ ಮೇಲೆ ಅನುಮಾನ ಬರಲಾರಂಭಿಸಿತು. ಪಾರ್ವತಮ್ಮನನ್ನು ಭೇಟಿಯಾದರೆ, ತನ್ನ ಸಂದೇಹಕ್ಕೆ ಉತ್ತರ ಸಿಗಬಹುದು ಅಂತನ್ನಿಸಿತ್ತು.

* * *

- - 8 - -

ಅಂತೂ ಒಂದು ದಿನ ಮಗುವನ್ನು ಎತ್ತಿಕೊಂಡು ಪಾರ್ವತಮ್ಮನನ್ನು ನೋಡಲೆಂದು ಬಂದಳು. ಪಾರ್ವತಮ್ಮನಿಗೆ ಮೊದಲು ಇವಳ ಗುರುತು ಸಿಗಲಿಲ್ಲ. ಇವಳೇ ತನ್ನ ಪರಿಚಯವನ್ನು ಹೇಳಿಕೊಂಡಳು. ಮಾತಾಡ್ತಾ ಮಾತಾಡ್ತಾ ತನ್ನ ಸಂಶಯವನ್ನು ಹೊರಗೆಡಹಿದಳು.

"ನಮ್ಮ ಮದುವೆಗಿಂತ ಮೊದಲಿನಿಂದಲೂ ನೀವು ಇವರನ್ನು ಬಲ್ಲಿರಿ ಪಾರ್ವತಮ್ಮ ... ಈಚೀಚೆಗೆ ಅವರ ನಡವಳಿಕೇನೇ ಅರ್ಥವಾಗುತ್ತಿಲ್ಲ. ನನ್ನ ಮೇಲಿನ ಪ್ರೀತಿ ಕಡಿಮೆ ಆಗಿದೆ ಅಂತನ್ನಿಸುತ್ತೆ ....." ಮುಂದೆ ಹೇಳಲಾಗಲಿಲ್ಲ. ಗಂಟಲು ಬಿಗಿದುಕೊಂಡಿತ್ತು.

"ಎಂತೆಂಥಾ ಗಂಡಸರೋ ಇರ್‍ತಾರೆ ನಿನ್ನ ಗಂಡ ಸಾವಿರ ಪಾಲು ಮೇಲು ... ಅಲ್ಲಾ ಈಗ ಏನಾಯ್ತು ಅಂತ?"

"ನಾನು ಗರ್ಭಿಣಿ ಆಗೋವರೆಗೂ ಒಳ್ಳೆಯವರಾಗಿಯೇ ಇದ್ದರು ... ಈಚೆಗೆ ಅವರ ಕೋಪ ತಾಪ ಹೆಚ್ಚಾಗಿದೆ. ನಾನು ಒಂಟಿಯಾಗಿ ಅವರಿಗೆ ಸಿಗುವುದು ಅಪರೂಪವಾಗ್ತಿದೆ ಅಂತ ಅವರಿಗೆ ನನ್ನ ಮೇಲೆ ಸಿಟ್ಟು. ನಾನು ಏನು ಮಾಡಲಿ? ಮಗು ಚಿಕ್ಕದು .... ಅಲ್ಲದೇ ಮದುವೆಯಾಗಿ ಐದಾರು ವರ್ಷಗಳಾಗ್ತ ಬಂತು .... ಇನ್ನು ಹಾಗೇ ಚಿಕ್ಕವರ ತರಹ ಇರೋಕೆ ಸಾಧ್ಯಾನಾ? ಇನ್ನೊಂದು ಮದುವೆಯಾಗ್ತೀನಿ ಅಂತ ಸಹ ಆಡಿದ್ರು."

"ಗಂಡಸರನ್ನ ಹೀಗೇ ಅಂತ ಅರ್ಥ ಮಾಡಿಕೊಳ್ಳೋದೇ ಕಷ್ಟ ಶಾಂತ .... ನೀನಾಗಿಯೇ ಮೈಮೇಲೆ ಬಿದ್ದು ಹೋದರೆ, ನಿನ್ನನ್ನ ಸೂಳೆಗಿಂತ ಕೀಳಾಗಿ ನೋಡ್ತಾರೆ .... ಅವರು ಹೇಳಿದ ಹಾಗೆ ಕೇಳದಿದ್ದರೆ ಹೆದರಿಸ್ತಾರೆ .... ಇನ್ನೊಂದು ಮದುವೆ ಆಗೋವಷ್ಟು ಧೈರ್ಯ ಅವನಿಗೆಲ್ಲಿದೆ? ಅಲ್ಲದೇ .... ಆಗ್ತೀನಿ ಅಂದ್ರೆ ಅವನಿಗೆ

ಯಾರು ಹೆಣ್ಣು ಕೊಡ್ತಾರೆ?"

"ಹಾಗಲ್ಲ ... ಪಾರ್ವತಮ್ಮ .... ಅವರಿಗೆ ಬೇರೆ ಹೆಂಗಸರ ಸಹವಾಸವಿದೆಯಾ ಅಂತ, ಏನೋ ನಡೆದಿದೆ ಅಂತೆನಿಸಿತ್ತು ......" ಅತ್ತೆ ಸೊಸೆ ಮುಖ ಮುಖ ನೋಡಿಕೊಂಡಾಗ, ಶಾಂತಳ ಎದೆಯ ಬಡಿತ ಹೆಚ್ಚಾಗಿತ್ತು.

"ಛೆ .... ಹಾಗೇನೂ ಇಲ್ಲ. ಮದುವೆಯಾದ ಇಷ್ಟು ವರ್ಷಗಳ ನಂತರ ನಿನಗೇಕೆ ಈ ಅನುಮಾನ ಬಂತು? ಸಂಶಯ, ಪಿಶಾಚಿ ತರಹ, ಒಂದು ಸಾರಿ ಮನಸ್ನಲ್ಲಿ ಹೊಕ್ಕಿ ಬಿಟ್ಟರೆ .... ಆಮೇಲೆ ತೊಲಗಿಸೋದೇ ಕಷ್ಟ ...." ಅವಳ ಅನುಮಾನ ಹೆಚ್ಚಿತು.

"ಇಲ್ಲ ಪಾರ್ವತಮ್ಮ ....ನಿಮಗೇನೋ ಗೊತ್ತಿದೆ. ನನ್ನಿಂದ ಏನನ್ನೋ ಮುಚ್ಚಿಡ್ತಿದೀರಿ. ನನಗೆ ಹೇಳಲೇ ಬೇಕು ನೀವು ... ಇಲ್ಲದಿದ್ದರೆ ಈ ಮಗುವಿನ ಮೇಲೆ ಆಗೇ ....." ಶಾಂತ ಬಿರುಸಾಗಿ ನುಡಿದಾಗ ಅವರಿಬ್ಬರೂ ಪೆಚ್ಚಾದರು.

"ಹಾಗೆಲ್ಲಾ ಮಗೂ ಮೇಲೆ ಆಗೆ ಯಾಕೆ ಹಾಕ್ತೀಯ? ನಿನ್ನ ಗಂಡ ಅಂಥೋನಲ್ಲ. ಒಳ್ಳೆಯವನು ಅನ್ನೋ ನಂಬಿಕೆ ನಿನಗಿರಬೇಕು ....."

"ನಂಬಿಕೆ ಕಳೆದುಕೊಳ್ಳೋವಂಥ ಕೆಲಸವನ್ನು ಮಾಡಿದೋರನ್ನ ನಾನು ಹೇಗೆ ನಂಬಲಿ? ನೀನೇ ಹೇಳಿ..."

"ಅಂಥಾದ್ದೇದೂ ನಡೆದಿಲ್ಲ. ಹೋಗಲಿ ಬಿಡು ....."

"ಹೋಗಲಿ ಬಿಡು ಅಂದರೆ ಹೇಗೆ? ಅದೇನು ನಡೀತು ಅಂತ ನೀವು ನನಗೆ ಹೇಳಲೇ ಬೇಕು ...." ಶಾಂತ ಒತ್ತಾಯಿಸಿದಾಗ, ಪಾರ್ವತಮ್ಮ ಕೆಳದನಿಯಲ್ಲಿ ತನಗೆ ತಿಳಿದುದನ್ನು ವಿವರಿಸಿದಳು.

ನೀನು ಬಾಣಂತನಕ್ಕೆ ಅಂತ ಹೋದಾಗ ಒಂದು ರಾತ್ರಿ ಏನೋ ನಡೆದಿದೆ. ಅದೇನು ಅಂತ ನಮಗೂ ಸರಿಯಾಗಿ ತಿಳೀದು. ಆ ರಾತ್ರಿ ಕರೆಂಟು ಹೋದ ಸಮಯದಲ್ಲಿ ಒಬ್ಬ ಹೆಂಗಸು ನಿಮ್ಮ ಮನೆಗೆ ಬಂದು ಆ ರಾತ್ರಿ ಅಲ್ಲೇ ಕಳೆದಳು ಅನ್ನೋ ವದಂತಿ ಹರಡಿದೆ. ನಿಜ ಏನೂಂತ ಗೊತ್ತಿಲ್ಲ. ಅವಳು ಯಾರು ಅಂತ ಸಹ ತಿಳೀದು. ಅವಳು ಬಂದು ಇದ್ದಳು ಎನ್ನೋ ಪುಕಾರು ಹರಡಿದ ಕೆಲವೇ ದಿನಗಳ ನಂತರ ನಿನ್ನ ಗಂಡ ಈ ಮನೆಯನ್ನು ಬದಲಾಯಿಸಿದ. ಮನೆಯನ್ನು ಬಿಡುವ ಮೊದಲು ಅವನು ಯಾರಿಗೂ ಒಂದು ಮಾತನ್ನು ಸಹ ತಿಳಿಸಲಿಲ್ಲ. ಇದು ಮಾತ್ರ ನಿಜ.

ಶಾಂತ ಗರ ಬಡಿದವಳಂತೆ ಕುಳಿತಿದ್ದಳು .... ನನ್ನ ಗಂಡ ಇಷ್ಟು ನೀಚ? ನನ್ನ ಮೇಲೆ ಪ್ರೀತಿಯ ನಾಟಕವನ್ನಾಡಿ, ನಾನಿಲ್ಲದಾಗ, ನನ್ನ ಮನೆಗೆ ಇನ್ನೊಬ್ಬಳನ್ನು ಕರೆತಂದು, ಸಹವಾಸ ಮಾಡುವಷ್ಟು ಕೀಳುತನ? ಅವಳು ದಿಜ್ಮೂಢಳಾಗಿದ್ದಳು. ಬೇರೇನೂ ಕೇಳಿಸುತ್ತಿರಲಿಲ್ಲ. ಪಾರ್ವತಮ್ಮ ಮುಂದೆ ಏನು ಹೇಳಿದರೋ ಕೇಳಿದರೋ ಅವಳಿಗೇ ತಿಳಿಯದು. ತನ್ನ ಗಂಡನಿಂದ ತನಗೆ ಮೋಸ ! ನನ್ನ ಸಾಚಾತನಕ್ಕೆ ಇಂಥಾ ದ್ರೋಹ ... ಎಷ್ಟು ವರ್ಷಗಳಿಂದ ಈ ಸಂಬಂಧವಿದೆಯೋ ....? ಅವಳ ಎದೆ ಒಡೆದು ಹೋಗಿತ್ತು.

"ಶಾಂತ, ಸಮಾಧಾನ ಮಾಡ್ಕೋ. ದುಡುಕಬೇಡ ... ನಿನ್ನ ಗಂಡ ಅಂಥೋನಲ್ಲ ಅನ್ನೋ ನಂಬಿಕೆ ನಮಗಿದೆ. ನಿನ್ನ ಸಂಶಯವನ್ನು ಹೆಚ್ಚಿಸಿಕೊಂಡರೆ ಕೆಲಸ ಕೆಡುತ್ತೆ. ನಿಜವಾಗಿ ನಡೆದದ್ದೇನು ಅಂತ, ನಿನ್ನ ಗಂಡನ ಹತ್ತಿರ ನಯವಾಗಿ ಮಾತನಾಡಿ ಅಂತ ತಿಳಿದುಕೋ."

"ನಾನು ಇನ್ನು ಅವರ ಹತ್ತಿರ ಏನನ್ನು ಕೇಳುಲ್ಲ .... ಏನನ್ನು ಹೇಳುಲ್ಲ. ನಾನು

ನನ್ನ ತವರು ಮನೆಗೆ ಹೊರಟು ಹೋಗ್ತೀನಿ" ಸೊರಬಸ ಅಳುತ್ತಾ ನುಡಿದಳು.

"ಅವಿವೇಕಿ ತರಹ ಆಡಬೇಡ ಶಾಂತ. ನಿನ್ನ ಗಂಡ ಅಂದೋನಲ್ಲ ಅಂತ ನನಗನ್ನಿಸುತ್ತೆ .... ಆ ಹೆಂಗಸು ಆ ರಾತ್ರಿ ಇಲ್ಲಿದ್ದಳೋ ಇಲ್ಲವೋ ಅದೂ ಸಹ ಸರಿಯಾಗಿ ತಿಳೀದು. ಕೆಲಸವಿಲ್ಲದೇ ಇರೋರು ಪುಕಾರು ಹುಟ್ಟಿಸಿದರೆ ಅದನ್ನು ನಿಜ ಅಂತ ಹೇಗೆ ಹೇಳೋಕೆ ಆಗುತ್ತೆ? "ಪ್ರತ್ಯಕ್ಷವಾಗಿ ಕಂಡಿದ್ದನ್ನು ಪ್ರಮಾಣಿಸಿ ನೋಡಬೇಕು" ಅನ್ನೋ ಗಾದೆ ಮಾತೇ ಇದೆ."

"ಇನ್ನೇನು ಪುರಾವೆ ಬೇಕು ಪಾರ್ವತಮ್ಮನೋರೆ ..... ಇಷ್ಟು ವರ್ಷದಿಂದ ವಾಸವಾಗಿದ್ದ ಮನೇನ ದಿಢೀರ್ ಅಂತ ಬಿಟ್ಟು ಹೋಗಬೇಕಾದರೆ ಏನಾದರೂ ನಡೆದಿರಲೇ ಬೇಕು. ಯಾರೋ ಹೆದರಿಸಿದಾರೆ .... ಅದಕ್ಕೆ ......"

"ಏನೋಮ್ಮ ನೀನು ಹೇಳೋದು ಇರಲಾರದು ಅಂತಾನೇ ಅನ್ನಿಸುತ್ತೆ. ನಿನ್ನ ಗಂಡನ್ನ ಒಂದು ಮಾತು ಕೇಳಿ ನೋಡು ...."

"ಏನೂಂತ ಕೇಳ್ಲಿ ಪಾರ್ವತಮ್ಮನೋರೆ .... ಕೇಳಿದ್ರೂ ನಿಜ ಹೇಳ್ತಾರೆ ಅಂತ ಅಂದುಕೊಂಡಿದೀರಾ? ಅವರ ಜೊತೆ ಹಗಲೂ ರಾತ್ರಿ ಐದು ವರ್ಷ ಸಂಸಾರ ಮಾಡಿದೋಳು ನಾನು .... ನನಗೆ ಒಂದು ಸುಳಿವು ಸಿಗಲಿಲ್ಲ ನೋಡಿ ....."

"ಅದಕ್ಕೇ ನಾನು ಹೇಳೋದು ..."

"ಅದದನ್ನೇ ಮತ್ತೇ ಹೇಳ್ಬೇಡಿ ನೀವು. ಬೆಂಕಿಯಿಲ್ಲದೇ ಹೊಗೆ ಏಳುಲ್ಲ ಅಂತಾರೆ .... ನೀವು ಮೊದಲೇ ಒಂದ್ಮಾತು ನನಗೆ ತಿಳಿಸಿದ್ದರೆ ಖಂಡಿತಾ ನಾನು ವಾಪಸ್ಸು ಬರುತ್ತಿರಲಿಲ್ಲ ....."

"ಸಂಸಾರವನ್ನು ಒಂದುಗೂಡಿಸೋ ಕೆಲಸವನ್ನು ಮಾಡಬೇಕೇ ಹೊರತು, ಸಂಸಾರವನ್ನು ಒಡೆಯಲು ನೋಡಬಾರದು .... ಏನು ನಡೀತೋ ನಿಜವಂತೂ ನನಗೆ ತಿಳೀದು. ಜನ ನೂರೆಂಟು ಮಾತುಗಳನ್ನಾಡುತ್ತಾರೆ. ಆ ಮಾತನ್ನೆಲ್ಲ ನಂಬುವವಳು ನಾನಲ್ಲ. ನಿಮ್ಮ ಸಂಸಾರ ಚೆನ್ನಾಗಿತ್ತು. ಅದು ಹಾಗೇ ಮುಂದುವರೆಯಲಿ ಅನ್ನೋ ಹಾರೈಕೆ ನಮ್ಮದು ..."

ಪಾರ್ವತಮ್ಮ ಇಷ್ಟು ಹೇಳಿದರೂ ಶಾಂತನಿಗೆ ಸಮಾಧಾನವಾಗಿರಲಿಲ್ಲ. ದುಗುಡದ ಮುಖವನ್ನು ಹೊತ್ತುಕೊಂಡೇ ತನ್ನ ಮನೆ ಸೇರಿದಳು.

ಆಫೀಸಿನಿಂದ ಮನೆಗೆ ಬಂದ ಗಂಡನಿಗೆ ಒಂದು ಲೋಟ ನೀರನ್ನು ಸಹ ಕೇಳದೇ ಕೂತಿದ್ದವಳನ್ನು ಕಂಡು ರಾಮಸ್ವಾಮಿಗೆ ಭಯವಾಯಿತು.

"ಏನಾಯ್ತೇ ಶಾಂತೂ ..... ಯಾಕೆ ಹೀಗಿದೀಯಾ? ಹುಶಾರಾಗಿದೀಯ ತಾನೇ .....?" ಹತ್ತಿರ ಬಂದು ಹಣೆಯ ಮೇಲೆ ಕೈ ಇಡಲಿದ್ದವನಿಂದ ದೂರ ಸರಿದಳು.

"ಮುಟ್ಬೇಡಿ ನನ್ನನ್ನ ......" ಕಿರುಚಿದಳು. ರಾಮಸ್ವಾಮಿ ಬೆದರಿದ್ದ.

"ಇದ್ದಕಿದ್ದ ಹಾಗೆ ಏನಾಯ್ತು ಅಂತ .... ಯಾರೇನಂದ್ರು?"

"ಯಾರಾದ್ರೂ ನನ್ನನ್ಯಾಕೆ ಏನಾದ್ರು ಅಂತಾರೆ ..... ನಿಮ್ಮನ್ನ ನಿಮ್ಮನ್ನ .... ಜನ ಅಂತಿರೋದು ...."

"ನನ್ನನ್ನ? ಯಾಕೆ ನಾನೇನು ಮಾಡಿದೆ ಅಂತ?"

"ಅದೇ .... ಅದನ್ನೇ ನಾನು ಕೇಳ್ತಿರೋದು. ನೀನೇನು ಮಾಡಿದೀರೋ ಅದನ್ಯಾಕೆ ನನಗೆ ಹೇಳಲಿಲ್ಲ?" ಕೂಗಿದಳು.

"ಮೆಲ್ಲಗೆ ... ಮೆಲ್ಲಗೆ .... ನಾನೇನು ಮಾಡಿದೆ ಅಂತ ಹೀಗೆ ಕೂಗಾಡ್ತಿದೀಯ?"

"ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ್ರೆ ಯಾರಿಗೂ ತಿಳಿಯೋಲ್ಲ ಅಂತ ಅನ್ನೋ ಹಾಗೇ ಏನೂ ತಿಳಿದೋರ ಹಾಗೆ ನಟಿಸಬೇಡಿ .... ನನಗೆ ಎಲ್ಲಾ ತಿಳಿದಿದೆ .... ನಾನು ಇನ್ನು ಈ ಮನೇಲಿ ಖಂಡಿತಾ ಇರೋಲ್ಲ. ನಾಳೇನೇ ನನ್ನ ತವರು ಮನೆಗೆ ಹೊರಟು ಹೋಗ್ತೀನಿ. ಮತ್ತೆ ವಾಪಸ್ಸು ಬರೋಲ್ಲ."

"ಯಾರು ಏನಂದ್ರು ಅಂತ ನನಗೆ ಹೇಳು ... ನಾನು ಅವರಿಗೆ ಬುದ್ಧಿ ಕಲಿಸ್ತೀನಿ."

"ಯಾರು ಏನೂ ಹೇಳಬೇಕಾಗಿಲ್ಲ ರೀ ..... ನನಗೇ ಎಲ್ಲಾ ತಿಳೀತು. ನಾನು ಈ ಮನೆಯಿಂದ ಹೋದ್ರೆ ಸಾಕು ಅಂತ ಕಾಯ್ತಿದೀರಿ ... ನಿಮ್ಮ ದಾರಿ ಸಲೀಸಾಗುತ್ತೆ ..."

"ಹುಚ್ಚು ಹುಚ್ಚಾಗಿ ಏನೇನೋ ಮಾತನ್ನಾಡಬೇಡ ಶಾಂತೂ ....."

"ನನ್ನ ಹೆಸರನ್ನೆತ್ತ ಬೇಡಿ ..... ನನಗೆ ತಿಳುವಳಿಕೆ ಇರಲಿಲ್ಲ. ಪತಿವ್ರತೆ ತರಹ ನಿಮ್ಮ ಸೇವೆ ಮಾಡಿದೆ. ನಮಗೆ ಒಂದು ಮಗುವಾಗಲಿ ಅಂತ ಆಸೆ ಪಟ್ಟರೆ ಅದು ನನ್ನ ತಪ್ಪಾ? ಅದಕ್ಕೆ ನೀವು ನನಗೆ ಮಾಡಿದ ದ್ರೋಹ .... ಛಿ .... ಛಿ ... ನಿಮ್ಮನ್ನ ನನ್ನ ಗಂಡ ಅಂತ ಹೇಳಿಕೊಳ್ಳೋಕೇ ನಾಚಿಕೆ ಆಗುತ್ತೆ ....."

"ಶಾಂತ .... ಯಾರೋ ಆಗದವರು, ನಿನಗೆ ನನ್ನ ಮೇಲೆ ಚಾಡಿ ಹೇಳಿದಾರೆ. ನಾನೇನೂ ದ್ರೋಹ ಮಾಡಿಲ್ಲ. ಯಾರಾದ್ರೂ ಬಂದಿದ್ರಾ?"

"ನಾವು ಹಿಂದಿದ್ದ ಮನೆಯನ್ನು ಯಾವ ಕಾರಣಕ್ಕೆ ಬಿಟ್ರಿ? ನಿಜ ಹೇಳಿ ....." ರಾಮಸ್ವಾಮಿ ಮೌನಿಯಾದ ತಲೆ ಕೆಳಗೆ ಮಾಡಿದ.

"ನೀವು ಮುಚ್ಚಿಟ್ರೆ ನನಗೆ ತಿಳಿಯೋಲ್ಲ ಅಂತಂದುಕೊಳ್ಳಬೇಡಿ ... ಯಾರವಳು? ನಾನಿಲ್ಲದಾಗ ನಮ್ಮ ಮನೆಗೆ ಬರ್ತಿದ್ದೋಳು?"

"ಯಾರೂ ಬರುತ್ತಿರಲಿಲ್ಲ. ನಿನಗೆ ಯಾರೋ ಸುಳ್ಳು ಹೇಳಿದಾರೆ."

"ಹಾಗಾದ್ರೆ ನಿಜ ಏನೂಂತ ಹೇಳಿ ....."

"ಅಂಥಾದ್ದೇನೂ ಇಲ್ಲ ಶಾಂತ. ನನ್ನ ಮಾತನ್ನು ನಂಬು ...."

"ನಮ್ಮ ಮಗುವಿನ ಮೇಲೆ ಆಣೆ ಇಟ್ಟು ಹೇಳಿ .... ಏನೂ ನಡೆದಿಲ್ಲ ಅಂತ ...."

"ಯಾರದೋ ಮಾತಿಗೆ, ಮಗೂನ ಯಾಕೆ ಮಧ್ಯೆ ತರ್ತೀಯಾ?"

"ಹಾಗಾದ್ರೆ ಖಂಡಿತಾ ಏನೋ ನಡೆದಿದೆ ... ಇಲ್ಲದಿದ್ದರೆ ಅವರಿವರ ಮಾತಿಗೆ ಹೆದರಿ, ಆ ಮನೆಯನ್ನು ಯಾಕೆ ಬಿಡಬೇಕಿತ್ತು?"

"ಅದಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ ಶಾಂತಾ ... ಈ ಮನೆ ಆ ಮನೆಗಿಂತ ದೊಡ್ಡದಾಗಿದೆ ಅಂತ ಬದಲಾಯಿಸಿದೆ. ಬಾಡಿಗೆ ಕೊಡೋರಿಗೆ ಮನೆ ಯಾವುದಾದರೇನು?"

"ಹಾಗಾದ್ರೆ ನಿಜ ಏನೂಂತ ನೀವು ಹೇಳೋವರೆಗೂ, ನಾನು ನಿಮ್ಮ ಹತ್ತಿರ ಮಾತನ್ನಾಡುಲ್ಲ. ನಾನು ನಾಳೇನೇ ತವರು ಮನೆಗೆ ಹೊರಟು ಹೋಗ್ತೀನಿ ...."

"ನಿನ್ನಿಷ್ಟ" ಎಂದು ಎದ್ದು ಹೋಗಿ, ತಾನೇ ಕಾಫಿ ಬೆರೆಸಿಕೊಂಡು ಕುಡಿದು ಹೊರಗೆಲ್ಲೋ ಹೊರಟು ಹೋದ. ಶಾಂತ ಅಳುತ್ತಾ ತನ್ನ ಬಟ್ಟೆಗಳನ್ನು ಸೂಟ್‌ಕೇಸಿನೊಳಗೆ ತುಂಬಿಟ್ಟುಕೊಂಡಳು. ರಾತ್ರಿ ಹತ್ತು ಗಂಟೆಯಾದರೂ ಮನೆಗೆ, ಗಂಡ ವಾಪಸ್ಸು ಬರದಿದ್ದಾಗ ಅವಳಿಗೆ ಚಿಂತೆಯಾಗತೊಡಗಿತು. ನನ್ನನ್ನು ಬಿಟ್ಟು ಗಂಡ, ಇನ್ನೊಬ್ಬಳೊಡನೆ ಇರುತ್ತಿದ್ದಾನೆಂದೇ ಭಾವಿಸಿದಳು. ಅಂತೂ ಗಂಡ ಹೆಂಡತಿಯ ಸಂಬಂಧ ಇಂದಿಗೆ ತೀರಿತು. ಇನ್ನು ನನ್ನ, ನನ್ನ ಮಗಳ ಗತಿಯೇನು ಅಂತ ಆತಂಕವಾಗತೊಡಗಿದಾಗ

ಕಣ್ಣೀರ ಧಾರೆ ಹರಿಯತೊಡಗಿತು. ಮಗು ಅಳತೊಡಗಿದಾಗ, ಅದಕ್ಕೆ ಹಾಲು ಕುಡಿಸತೊಡಗಿದಳು. "ಇದೊಂದು ಪೀಡೆ ..... ಇದು ಹುಟ್ಟದೇ ಇದ್ದಿದ್ದರೆ ಚೆನ್ನಾಗಿತ್ತೇನೋ ... ಮಗು ಹುಟ್ಟಲಿ ಅಂತ ಬಯಸಿದ್ದೇನೋ ನಿಜ .... ಆದರೆ ಇವಳು ಹುಟ್ಟಿ ನಮ್ಮಿಬ್ಬರನ್ನೇ ದೂರ ಮಾಡಿದಳಲ್ಲ ... ಎಂಬ ರೋಷ ಉಕ್ಕಿತು. ನಿದ್ದೆ ಹೋಗಿದ್ದ ಮಗುವನ್ನೆತ್ತಿ ಮಂಚದ ಮೇಲೆ ಮಲಗಿಸಿ ತಾನೂ ಪಕ್ಕದಲ್ಲಿ ಉರುಳಿಕೊಂಡಳು. ನಡೆದ ಮಾತುಕತೆಗಳನ್ನೆಲ್ಲ ಮೆಲಕು ಹಾಕಿದಳು. ಗಂಡನ ತಪ್ಪೇ ಅತಿಶಯವಾಗಿ ಕಂಡಿತು. ಏನೋ ನಡೆದಿರಲೇ ಬೇಕು. ಅದಕ್ಕೇ ನನಗೆ ಮುಖ ತೋರಿಸಲಾಗದೇ ನನ್ನಿಂದ ದೂರ ಹೋಗಿದ್ದಾನೆಂದೇ ಭಾವಿಸಿದಳು. ಇನ್ನೆಂದಿಗೂ ವಾಪಸ್ಸು ಬರಲಾರ. ಅವಳ್ಯಾರೋ ಅವಳೊಡನೆಯೇ ಇರತೊಡಗಿದರೆ, ಮುಗಿಯಿತು ನನ್ನ ಗತಿ ..... ಹಾಗಾಗಬಾರದು. ನಾನು ಅವನ ಹೆಂಡತಿ. ಅಗ್ನಿಸಾಕ್ಷಿಯಾಗಿ ಕೈ ಹಿಡಿದವಳು ... ಕಾನೂನು ನನಗೆ ಬೆಂಬಲ ನೀಡುತ್ತದೆ..... ಅಂತ ಒಂದು ಸಾರಿ ಅನ್ನಿಸಿದರೆ, ಮರುಗಳಿಗೆಯೇ ನನ್ನ ನಿಯತ್ತಿಗೆ ಮೋಸ ಮಾಡಿದವನು, ಅವನೊಡನೆ ಇನ್ನು ನಾನು ಬಾಳಲಾರೆ ಅಂತೆನ್ನಿಸುತ್ತಿತ್ತು.

ಬೆಳಕು ಹರಿಯಿತು. ಯಾವಾಗಲೋ ನಿದ್ದೆ ಆವರಿಸಿತ್ತು. ಎಚ್ಚರವಾದಾಗ ತಕ್ಷಣಕ್ಕೆ ಯಾವ ಅರಿವಿರಲಿಲ್ಲ. ಕೆಲಕ್ಷಣಗಳ ನಂತರ ನಿಧಾನವಾಗಿ, ನಡೆದದ್ದೆಲ್ಲಾ ನೆನಪಿಗೆ ಬಂತು: ಒಂದು ರಾತ್ರಿ ಕಳೆದಿದೆ. ಗಂಡ ಮನೆಗೆ ಬಂದೇ ಇಲ್ಲ ಎನ್ನುವ ಅರಿವಾದೊಡನೆ ಕೋಪ, ದುಃಖ ಒಟ್ಟೊಟ್ಟಿಗೇ ಒತ್ತರಿಸಿಕೊಂಡು ಬಂತು. ಮಗು ಅತ್ತಾಗ ಎದ್ದು ಹಾಲು ಕಾಯಿಸಿ, ಬಾಟಲಿಗೆ ತುಂಬಿ ಕುಡಿಯಲು ಕೊಟ್ಟು, ಹಾಗೇ ಮಗುವಿನ ಮಗ್ಗುಲಲ್ಲಿ ಕುಳಿತಿದ್ದಳು. ಮುಂಬಾಗಿಲ ಬಳಿ ಟ್ಯಾಕ್ಸಿ ಬಂದು ನಿಂತ ಸದ್ದಾಯಿತು. "ನನ್ನ ಈ ಸಂಕಟವೇ ಸಾಲದು ಅಂತಿರುವಾಗ, ನೆಂಟರು ಬೇರೆ ಯಾರಪ್ಪಾ ಅಂತಂದುಕೊಂಡು ಕಿಟಕಿಯಿಂದ ಹೊರಗೆ ಇಣುಕಿ ನೋಡಿದಳು. ಟ್ಯಾಕ್ಸಿಯಿಂದ ಒಬ್ಬಳು ಹೆಂಗಸು ಇಳಿದು ನಿಂತಿದ್ದಳು. ಗಂಡ ಟ್ಯಾಕ್ಸಿಯವನಿಗೆ ಬಾಡಿಗೆ ಹಣವನ್ನು ನೀಡುತ್ತಿದ್ದಾನೆ. ಇವಳ ನಖಶಿಖಾಂತ ಮೈಯೆಲ್ಲಾ ಉರಿದು ಹೋಯಿತು. ರಾತ್ರಿಯನ್ನೆಲ್ಲಾ ಇವಳ ಜೊತೆ ಕಳೆದದ್ದೂ ಅಲ್ಲದೇ, ಮನೆಗೇ ಕರೆತಂದಿದ್ದಾನೆ. ಅವಳು ಒಳಗೆ ಕಾಲಿಟ್ಟರೆ, ನಾನು ಈ ಮನೆಯಿಂದ ಹೊರಗೆ ಕಾಲಿರಿಸುವುದೇ ಸರಿ ಎಂದು ನಿರ್ಧರಿಸಿ, ಮಗುವನ್ನು ಎತ್ತಿಕೊಂಡು ಬಂದು ಹೊರಬಾಗಿಲನ್ನು ತೆಗೆದಳು.

ರಾಮಸ್ವಾಮಿ ಆ ಹೆಂಗಸಿನ ಕೈ ಹಿಡಿದು, ನಿಧಾನವಾಗಿ ಮನೆಯ ಬಾಗಿಲ ಬಳಿ ಬಂದ. ಶಾಂತ ಜೋರಾಗಿ ಅಳಲಾರಂಭಿಸಿದಳು.

"ಅತ್ತೇ .... ಯಾಕೆ ಅಳ್ತಿದೀರಿ ಅತ್ತೇ ....." ಎಂದು ಆ ಹೆಂಗಸು ಪ್ರಶ್ನಿಸಿದಾಗ, ಶಾಂತ ಆ ಹೆಂಗಸನ್ನೇ ತದೇಕವಾಗಿ, ಸಿಟ್ಟಿನಿಂದ ನೋಡಿದಳು. ರಾಮಸ್ವಾಮಿ ಮನೆಯ ಒಳಗೆ ಕಾಲಿಡುವವನಿದ್ದ.

"ನಿಲ್ಲೀ ....." ಶಾಂತ ಅಬ್ಬರಿಸಿದಳು. ರಾಮಸ್ವಾಮಿ ನಿಂತು, ಹಿಂತಿರುಗಿ ಅವಳನ್ನೇ ನೋಡಿದ.

"ಒಂದು ಇತ್ಯರ್ಥವಾದ ಮೇಲೇ .... ನೀವು ಒಳಗೆ ಕಾಲಿಡಬೇಕು ..." ಗಟ್ಟಿಯಾಗಿ ಎತ್ತರದ ಧ್ವನಿಯಲ್ಲಿ ನುಡಿದಳು.

"ಯಾಕೇ ... ಏನಾಯ್ತು ...? ಒಳಗೆ ಯಾಕೆ ಹೋಗಬಾರದು?"

"ಅಹಾಹಾ ... ಏನೂ ಗೊತ್ತಿಲ್ಲದ ಹಾಗೆ ಆಡಬೇಡಿ ... ಈ ಹೆಂಗ್ಸು ಯಾರು?"

ಆ ಹೆಂಗಸಿನ ಕಡೆ ಬೊಟ್ಟು ಮಾಡಿದಳು.

"ಇವಳು ಸುಜಾತಾ .... ನನ್ನ ಅಕ್ಕನ ಮಗಳು .... ಬಾಗಿಲಲ್ಲೇ ಮಾತೇಕೆ ... ಒಳಗೆ ಬಾ .... ನಿಧಾನವಾಗಿ ಮಾತನಾಡೋಣ ......"

"ನನಗೆ ನಿಮ್ಮ ಮಾತಿನ ಮೇಲೆ ನಂಬಿಕೆ ಇಲ್ಲ. ಇಷ್ಟು ವರ್ಷ ಇಲ್ಲದೇ ಈಗ ನಿಮ್ಮಕ್ಕನ ಮಗಳು ಎಲ್ಲಿಂದ ಹುಟ್ಟಿ ಬಂದಳು?"

"ಶಾಂತ .... ಅತಿಯಾಯ್ತು ನಿಂದು .... ಸುಜಾತಾ ನೀನು ಒಳಗೆ ಬಾಮ್ಮಾ ...." ರಾಮಸ್ವಾಮಿ ಅವಳನ್ನು ಕರೆದು, ತಾನು ಒಳಗೆ ಹೆಜ್ಜೆ ಇಟ್ಟ.

"ಕೂಡದು, ಈಗಲೇ ಇತ್ಯರ್ಥವಾಗಬೇಕು. ಒಂದೇ ಈ ಮನೆಯಲ್ಲಿ ನಾನಿರಬೇಕು ... ಅಥವಾ ಈ ಹೆಂಗಸಿರಬೇಕು ....." ಶಾಂತ ಅರಚಿದಾಗ, ರಾಮಸ್ವಾಮಿ ಹೊರಬಂದು ಅತ್ತಿತ್ತ ನೋಡಿದ. ಅಕ್ಕಪಕ್ಕದವರು, ನೋಡಿದರೆ, ಮಾತನ್ನು ಕೇಳಿಸಿಕೊಂಡರೆ ಏನು ಗತಿ ಎಂಬ ಅಂಜಿಕೆ ಅವನಿಗೆ, ಶಾಂತಳ ರಟ್ಟೆ ಹಿಡಿದು ಅವಳನ್ನು ಮನೆಯೊಳಕ್ಕೆ ಎಳೆದು ತಂದ. ಅವಳು "ಬಿಡ್ರೀ ಬಿಡ್ರೀ ....." ಎಂದು ಕೊಸರಿಕೊಳ್ಳುತ್ತಿದ್ದಳು. ಅವಳನ್ನು ಒಂದು ಮೂಲೆಗೆ ನಿಲ್ಲಿಸಿ, ಹೊರಗಡೆಯೇ ನಿಂತಿದ್ದ ಸುಜಾತಳನ್ನು ಒಳಗೆ ಕರೆದುಕೊಂಡು ಬಂದ.

"ಸುಜಾತಾ .... ನೀನಿಲ್ಲಿ ಕೂತ್ಕೋ .... ನಾನೀಗ ಬಂದೆ ... ಎನ್ನುತ್ತಾ ಒಳಗಿನ ರೂಮಿಗೆ ಹೋದ. ಯಾವುದೋ ಒಂದು ಹಳೆಯ ಗ್ರೂಪ್ ಫೋಟೋ ಹಿಡಿದು ತಂದು ಶಾಂತಳ ಮುಂದೆ ಹಿಡಿದ.

"ಇವಳು ನಮ್ಮಕ್ಕ .... ಆಗಿನ್ನು ಅವಳಿಗೆ ಮದುವೆ ಆಗಿರಲಿಲ್ಲ. ಈಗ ನಮ್ಮ ಅಕ್ಕ ಇಲ್ಲ. ಅವಳ ನೆನಪಿಗೆ ಉಳಿದಿರುವವಳು ಇವಳೊಬ್ಬಳೇ ...."

"ನಾನು ನಂಬುಲ್ಲ. ಯಾರ್‍ಯಾರನ್ನೋ ನಿಮ್ಮ ಅಕ್ಕನ ಮಗಳು ಅಂತ ಹೇಳಿದ್ರೆ ನಂಬಿ ಬಿಡ್ತೀನಾ?" ಅರಚಿದಳು.

"ನೀನು ನಂಬು, ಅಥವಾ ಬಿಡು ..... ನಿಜ ಇದು .... ನೀನು ನಂಬದೇ ಇದ್ದರೂ, ಸಂಬಂಧ ಏನೂ ಬದಲಾಗಲಿಲ್ಲ ...." ಅವನು ಒರಟಾಗಿ ನುಡಿದು ಬಚ್ಚಲು ಮನೆಗೆ ಹೋಗಿ, ಕೈ ಕಾಲು ತೊಳೆದು ಬಂದು, ಬಿಸಿ ಬಿಸಿ ಕಾಫಿಯನ್ನು ಬೆರೆಸಿ, ಎಲ್ಲರಿಗೂ ತಂದು ಕೊಟ್ಟು ತಾನೂ ಕುಡಿದ. ಮನಸ್ಸಿಗೆ ಸ್ವಲ್ಪ ಚೇತನವೊದಗಿತ್ತು. ಶಾಂತಳ ಕೈಯಿಂದ ಮಗುವನ್ನು ಎತ್ತಿಕೊಂಡು ಮುದ್ದಿಸಿದ.

"ಸುಜಾತಾ .... ನೋಡಿದ್ಯಾ ನನ್ನ ಮಗಳನ್ನು .... ದೊಡ್ಡೋಳಾದ ಮೇಲೆ ನಿನ್ನ ಹಾಗೆ ಆಗ್ತಾಳೆ .... ಅಲ್ವಾ ....."

"ಏನೂ ಬೇಡಾ .... ನನ್ನ ಮಗಳು ನನ್ನ ಹಾಗೇ ಇರಲಿ .... ಯಾರ ಯಾರ ಹಾಗೋ ಆಗುವುದು ಬೇಡ" ಶಾಂತ ಸರ್‍ರನೆ ನುಡಿದಳು. ರಾಮಸ್ವಾಮಿ ನಕ್ಕ.

"ನಿನ್ನ ಹಾಗಾದರೆ, ಸಂಶಯ ಪಿಶಾಚೀನೇ ಆಗೋದು ...."

ಶಾಂತ ಇನ್ನು ಮುಖ ಊದಿಸಿಕೊಂಡೇ ಕೂತಿದ್ದಳು. ಅವಳಿಗೆ ಗಂಡನ ಮಾತಿನ ಮೇಲೆ ನಂಬಿಕೆ ಇರಲಿಲ್ಲ. ಆದರೆ ತಳ್ಳಿ ಹಾಕುವಂತೆಯೂ ಇಲ್ಲ. ಅವಳೀಗ ಒಳಗೆ ಬಂದುದಾಗಿದೆ. ಅವಳನ್ನು ಇಲ್ಲಿಂದ ಸಾಗಿ ಹಾಕುವುದು ಹೇಗೆ? ಅವಳ ಮನಸ್ಸು ಅದನ್ನೇ ಕುರಿತು ಚಿಂತಿಸುತ್ತಿತ್ತು.

"ಹೋಗು ಸುಜಾತಾ ... ಒಂದು ಗಳಿಗೆ ಮಲಕ್ಕೋ. ಪ್ರಯಾಣ ಮಾಡಿ ಆಯಾಸವಾಗಿದೆ. ನೀರು ಕಾದ ಮೇಲೆ ಸ್ನಾನ ಮಾಡೋವಂತೆ ...."

"ಅತ್ತೆಗೆ ನಾನು ಬಂದಿರುವುದು ಇಷ್ಟವಾಗಿಲ್ಲ ಮಾವಾ ... ನನ್ನನ್ನ ಈಗಲೇ ವಾಪಸ್ಸು ಕಳಿಸಿ ಬಿಡಿ ..."

"ನಿಮ್ಮ ಅತ್ತೆಗೆ ಕೋಪ ಬಂದಿದೆ ಅನ್ನೋದು ನಿಜ. ಆದರೆ ನನ್ನ ಹೆಂಡತಿ ತುಂಬಾ ಒಳ್ಳೆಯವಳು. ನೋಡ್ತಿರು ಇನ್ನು ಸ್ವಲ್ಪ ಹೊತ್ತು ... ನೀವಿಬ್ಬರೂ ಎಷ್ಟು ಹೊಂದಿಕೊಳ್ತೀರಿ ಅಂತ ... ಅಲ್ವೇನೇ ಶಾಂತು ..." ರಾಮಸ್ವಾಮಿ ಶಾಂತಳ ಕಡೆ ನೋಡಿದ. ಶಾಂತ ಮೂತಿ ಸೊಟ್ಟಗೆ ಮಾಡಿದಳು.

ರಾಮಸ್ವಾಮಿ ನೀರು ಕಾದಿದ ನಂತರ, ಸ್ನಾನ ಮಾಡಿ ಬಂದು, ದೇವರ ಪೂಜೆ ಮಾಡಿ, ತಾನೇ ಅಡಿಗೆಗೆ ಪ್ರಾರಂಭಿಸಿದ. ಶಾಂತ ಎಲ್ಲವನ್ನು ಗಮನಿಸುತ್ತಿದ್ದಳು ಅಕ್ಕನ ಮಗಳೇ ಆಗಿದ್ದರೆ, ಕೂರಿಸಿ ಇಷ್ಟು ಉಪಚಾರ ಮಾಡುವ ಅಗತ್ಯವೇನಿದೆ ಎಂದು ಯೋಚಿಸುತ್ತಿದ್ದಳು.

* * *

-- 9 --

ಪ್ರೈಮರಿ ಸ್ಕೂಲ್ ಟೀಚರ್ ಆಗಿದ್ದ ನಂಜಪ್ಪನಿಗೆ, ರಾಮಸ್ವಾಮಿ ಎರಡನೇ ಹೆಂಡತಿಯ ಮಗ. ಮೊದಲನೇ ಹೆಂಡತಿ ಕಾವೇರಿಯ ಮಗಳು ಸರಸ್ವತಿ. ಸರಸ್ವತಿಗೆ ನಾಲ್ಕು ವರ್ಷ ತುಂಬಿದ್ದಾಗ, ಕಾವೇರಿ ಇದ್ದಕ್ಕಿದ್ದಂತೆ ನಾಪತ್ತೆಯಾದಳು. ಎಲ್ಲಿ ಹೋದಳು? ಯಾರು ಕರೆದುಕೊಂಡು ಹೋದರು ಎಂದು ತಿಳಿಯಲೇ ಇಲ್ಲ. ಅಕ್ಕಪಕ್ಕದವರು ತಲಾತಟ್ಟಿ ಮಾತನಾಡಿದರು. ಆ ಊರಿನ ಗೌಡನ ಜತೆ ಅವಳ ಸಂಬಂಧವಿತ್ತೆಂದು ಕೆಲವರು ಆಡಿಕೊಂಡರೆ, ಹೆಡ್‌ಮಾಸ್ಟರ್ ವೀರಣ್ಣ ಅವಳನ್ನು ಕೆಡಿಸಿರುವನೆಂದೇ ಆಡಿಕೊಳ್ಳುತ್ತಿದ್ದರು. ಅಂತೂ ಯಾರದೋ ಸ್ನೇಹ ಮಾಡಿ ಯಾರ ಹಿಂದೆಯೋ ಆಕೆ ಓಡಿಹೋದಳೆಂದೇ ಖಚಿತವಾಗಿತ್ತು. ಅಕ್ಕಪಕ್ಕದವರ ಹೀನಾಯದ ನುಡಿಗಳಿಗೆ ಬೇಸತ್ತ ನಂಜಪ್ಪ ಆ ಊರಿನಿಂದ ಬೇರೆ ಊರಿಗೆ ವರ್ಗ ಮಾಡಿಸಿಕೊಂಡ.

ಕೆಲವೇ ತಿಂಗಳುಗಳ ನಂತರ ರಾಮಸ್ವಾಮಿಯ ತಾಯಿ ಸರೋಜಳನ್ನು ಮದುವೆಯಾಗಿದ್ದ. ಸರೋಜ, ತನ್ನ ಬಲಮಗಳು ಸರಸ್ವತಿಯನ್ನು ತನ್ನ ಸ್ವಂತ ಮಗಳಂತೆಯೇ ನೋಡಿಕೊಂಡಳು. ರಾಮಸ್ವಾಮಿ ಹುಟ್ಟಿದ ನಂತರವೂ ಮಗಳ ಮೇಲಿನ ಭಾವನೆ ಬದಲಾಗಿರಲಿಲ್ಲ. ಅಕ್ಕ ಸರಸ್ವತಿಗೆ ರಾಮಸ್ವಾಮಿ ಅಚ್ಚುಮೆಚ್ಚಿನ ತಮ್ಮ. ಅಕ್ಕನ ಜತೆಗೆ, ತಾನೂ ಸ್ಕೂಲಿಗೆ ಹೋಗುತ್ತೇನೆಂದು ರಾಮಸ್ವಾಮಿ ಹಠ ಮಾಡುತ್ತಿದ್ದ. ಅಕ್ಕ ತಮ್ಮನನ್ನು ಸಂತೈಸುತ್ತಿದ್ದಳು.

ಸರಸ್ವತಿ ಬೆಳೆದು ದೊಡ್ಡವಳಾದಂತೆ, ಅವಳ ತಾಯಿಯಂತೆಯೇ ರೂಪ ಯೌವನಗಳಿಂದ ಕಂಗೊಳಿಸುವಂತಾದಳು. ಸರೋಜ ಗಂಡನೊಡನೆ, ಮಗಳ ಬಗ್ಗೆ ಪ್ರಸ್ತಾಪಿಸಿದಾಗ, ನಂಜಪ್ಪನಿಗೆ ಆತಂಕ ಪ್ರಾರಂಭವಾಗಿತ್ತು. ಮಗಳು ಸ್ಕೂಲಿಗೆ ಹೋಗುವುದನ್ನು ನಿಲ್ಲಿಸಿದ. ಸರಸ್ವತಿ ಅತ್ತು ಗೋಳಾಡಿದಳು. ಸರೋಜ ಕೂಡಾ ಗಂಡನಿಗೆ ತಿಳುವಳಿಕೆ ಹೇಳಿದಳು.

"ಈಗ ಕಾಲ ಬದಲಾಗಿದೆ. ಹೆಣ್ಣು ಮಕ್ಕಳು ಓದಿ ಮುಂದೆ ಬರುತ್ತಾರೆ. ಈಗಲಿಂದ ಸುಮ್ಮನೇ ಮನೆಯಲ್ಲಿ ಕೂರಿಸಿಕೊಂಡರೆ ಏನು ಚೆನ್ನ ಮದುವೆ ಮಾಡಿ ಕಳಿಸಿಕೊಡೋಣ ಅಂತಂದ್ರೆ ನಮ್ಮ ಸರಸೂ ಇನ್ನು ಚಿಕ್ಕವಳು" ಅಂತ ನುಡಿದಿದ್ದಳು.

"ಇಲ್ಲ, ಸರೋಜ ನಿನಗೆ ತಿಳಿಯದು. ಹೆಣ್ಣು ಮಕ್ಕಳು ನೋಡೋರ ಕಣ್ಣು

ಕುಕ್ಕುವಂತೆ ಬೆಳೆದ ಮೇಲೆ, ಆದಷ್ಟು ಬೇಗ ಮದುವೆ ಮಾಡಿ ಕಳಿಸುವುದೇ ಒಳ್ಳೆಯದು. ನಾಳೆ ಪಶ್ಚಾತ್ತಾಪ ಪಡುವಂತಾಗಬಾರದು."

"ನೀವೇಕೆ ಹೀಗಂತೀರೋ .... ಸರಸೂ ತಾಯಿಯಿಲ್ಲದ ತಬ್ಬಲಿ ಏನಲ್ಲ. ನಾನು ಜತೆಯಲ್ಲಿಯೇ ಇರ್ತೀನಲ್ಲ ....."

"ಹಾಗಲ್ಲ. ಕಾಲ ಕೆಟ್ಟಿದು. ಹೆಣ್ಣು ಮಕ್ಕಳ ಮನಸ್ಸನ್ನು ಕೆಡಿಸುವವರು ಬಹಳ. ನಮ್ಮ ಸರಸೂಗೆ ಅರ್ಥ ತಿಳುವಳಿಕೆ. ಯಾವ ಸಮಯದಲ್ಲಿ, ಹೇಗೆ ಮನಸ್ಸು ಇಳಿ ಬಿಡುತ್ತೋ ..... ನನಗೆ ಅದೇ ಭಯ ...."

"ಛಿ ... ನಿಮ್ಮ ಮಗಳ ಮೇಲೇ ನಿಮಗೆ ನಂಬಿಕೆ ಇಲ್ಲವಲ್ಲ. ನಿಮ್ಮಂತಹ ತಂದೆಯನ್ನು ನಾನೆಲ್ಲೂ ಕೇಳಿಲ್ಲ."

"ನಿನಗೆ ತಿಳಿಯದ ವಿಚಾರ ಏನಿಲ್ಲ ಸರೋಜಾ .... ಸರಸೂ ತಾಯಿ, ಮದುವೆಯಾಗಿದ್ದವಳು. ಒಂದು ಮಗುವಿನ ತಾಯಿಯಾಗಿದ್ದವಳು, ಗಂಡನಿಗೇ ಮೋಸ ಮಾಡಿ, ಯಾರೊಂದಿಗೋ ಓಡಿ ಹೋದಳೆಂದರೇ ..... ಅದೇ ರಕ್ತ ಇವಳ ಮೈಯಲ್ಲಿ ಹರಿಯುತ್ತಿದೆ. ನನಗೆ ಅದೇ ಭಯ ...."

"ಛಿ, ಬಿಡ್ತೂ ಅನ್ನಿ. ನಮ್ಮ ಸರಸು ಅಂತಹವಳಲ್ಲ."

"ಸರೋಜಾ, ನೀನು ನಿಜಕ್ಕೂ ಬಹಳ ಒಳ್ಳೆಯ ತಾಯಿ. ಆದರೆ, ನಿನಗಿರುವ ನಂಬಿಕೆ ನನಗಿಲ್ಲ ; ನನಗೆ ಅದೇ ಭಯ. ನಿನ್ನಂತಹವಳಿಗೆ, ಅವಳಿಂದ ಆಘಾತವೆಲ್ಲಿ ಆಗುತ್ತೋ ಅಂತ ಅನ್ನಿಸುತ್ತೆ ...."

"ಹಾಗೇನೂ ಆಗುಲ್ಲ ಬಿಡಿ .... ನನಗೆ ನನ್ನ ಮಕ್ಕಳ ಮೇಲೆ ನಂಬಿಕೆ ಇದೆ ...." ಸರೋಜ ಗಂಡನಿಗೆ ಸಮಾಧಾನದ ಮಾತುಗಳನ್ನು ಹೇಳಿದ್ದಳು.

ಆದರೆ ಆ ನಂಬಿಕೆ ಕುಸಿದು ಹೋಯಿತು. ಆ ಊರಿಗೆ ಬಂದಿದ್ದ ಟೆಂಟ್ ಟಾಕೀಸಿನ ಮಾಲೀಕನ ಕಣ್ಣು ಸರಸ್ವತಿಯ ಮೇಲೆ ಬಿದ್ದಿತು. ಅನುನಯದ ಮಾತುಗಳಿಂದ ಅವಳನ್ನು ಒಲಿಸಿಕೊಂಡು, ಅವಳಿಗೆ ಏನೇನೋ ಆಸೆಗಳನ್ನು ತೋರಿಸಿದ. ಸರಸ್ವತಿ ಅವನ ಬಲೆಗೆ ಬಿದ್ದಳು. ಈ ಕಣ್ಣಾಮುಚ್ಚಾಲೆಯ ಆಟ ಬಯಲಿಗೆ ಬರುವ ಹೊತ್ತಿಗೆ ಸರಸ್ವತಿ ಗರ್ಭಿಣಿ ಆಗಿದ್ದಳು. ಸರೋಜಳ ಎದೆ ಒಡೆದು ಹೋಯಿತು. ಗಂಡನಿಗೆ, ನಡುಗುತ್ತಾ, ಈ ವಿಷಯವನ್ನು ತಿಳಿಸಿದಳು. ಮನೆಯಲ್ಲಿ ಒಂದು ಭಾರೀ ಹಗರಣವೇ ನಡೆದು ಹೋಯಿತು.

"ನಂಗೊತ್ತಿತ್ತು ಹೀಗೇನೋ ಆಗುತ್ತೆ ಅಂತ ... ಕೊಂದು ಭೂಗತ ಮಾಡಿ ಬಿಡ್ತೀನಿ ಅವಳನ್ನ. ಯಾವನೋ ಅಪಾಪೋಲಿಯ ಸಹವಾಸವನ್ನು ಮಾಡಿ, ಹೇಗೆ ಬದುಕಿದ್ದಾಳೆ? ಕೆರೆಗೋ ಬಾವಿಗೋ ಹೋಗಿ ಯಾಕೆ ಬೀಳಲಿಲ್ಲ?" ನಂಜಪ್ಪನ ಗುಡಗಾಟಕ್ಕೆ ರಾಮಸ್ವಾಮಿ ಹೆದರಿದ. ಅವನಿಗೆ ಏನೂ ಸರಿಯಾಗಿ ಅರ್ಥವಾಗದ ವಯಸ್ಸು.

ನಂಜಪ್ಪ, ತನ್ನ ಸ್ವಾಭಿಮಾನವನ್ನು, ಬದಿಗಿಟ್ಟು, ಟೆಂಟ್ ಮಾಲೀಕನನ್ನು ಹುಡುಕಿಕೊಂಡು ಹೊರಟ. ಅವನೂ ಬಾಯಿಗೆ ಬಂದಂತೆ ಮಾತನಾಡಿದ.

"ಮರ್ಯಾದೆ, ಅವಮರ್ಯಾದೆಯ ಜ್ಞಾನ ನಿಮ್ಮ ಮಗಳಿಗಿರಬೇಕಾಗಿತ್ತು. ಸ್ಕೂಲ್ ಮೇಷ್ಟರಾಗಿ, ಇದೇನಾ ವಿದ್ಯೆ ಕಲಿಸಿರುವುದು ನಿಮ್ಮ ಮಗಳಿಗೆ? ನಾನೇ ಆ ಮಗುವಿನ ತಂದೆ ಅಂತ ಅದ್ಹೇಗೆ ಹೇಳ್ತೀರಿ? ಇಲ್ಲಿರೋ ವಾಚ್‌ಮನ್ ಸಹ ಆ ಮಗುವಿನ ತಂದೆ ಆಗಿರಬಹುದು ....." ಸಿಟ್ಟಿನಿಂದ ನಂಜಪ್ಪ ಆ ಮಾಲೀಕನ ಕೆನ್ನೆಗೆ ಬಾರಿಸಿದ. ತತ್ತರಿಸಿ ಬಿದ್ದ ಅವನನ್ನು ಅಲ್ಲಿ ಕೈಗೆ ಸಿಕ್ಕ ಒಂದು ದೊಣ್ಣೆಯಿಂದ ಸದೆಬಡಿದ. ಪ್ರಜ್ಞೆ

ಕಳೆದುಕೊಂಡವನಂತೆ. ಆ ಮಾಲೀಕ ಬಿದ್ದ ಮೇಲೇ ಉಳಿದವರು ನಂಜಪ್ಪನನ್ನು ತಡೆದರು.

"ಏನು ಮೇಷ್ಟ್ರೇ, ಹೀಗ್ಮಾಡಿದ್ರಿ ..... ಇದು ಪೋಲಿಸ್ ಕೇಸ್ ಆಗುತ್ತೆ. ದಯವಿಟ್ಟು ಇಲ್ಲಿಂದ ಹೊರಟು ಹೋಗಿ ...."

"ಆದರೆ ಆಗಲಿ. ಕೊಲೆಗಾರ ಎಂಬ ಬಿರುದು ನನಗೆ ಬಂದರೆ ಬರಲಿ. ಈ ... ಈ ಮನುಷ್ಯನನ್ನ ಇವತ್ತು ಹುಟ್ಟಲಿಲ್ಲ ಅಂತ ಅನ್ನಿಸದೇ ನಾನು ಇಲ್ಲಿಂದ ಕದಲುವವನಲ್ಲ ....."

ನಂಜಪ್ಪ ಮತ್ತೆ ಮತ್ತೆ ಅವನನ್ನು ಕಾಲಿನಿಂದ ತುಳಿದ. ಕೆಲವೇ ಗಂಟೆಗಳಲ್ಲಿ ಪೋಲೀಸರು ಬಂದರು. ಎಲ್ಲವನ್ನು ಮಹಜರು ಮಾಡಿ, ನಂಜಪ್ಪನನ್ನು ಅರೆಸ್ಟ್ ಮಾಡಿಕೊಂಡು ಹೋದರು. ಆ ಟೆಂಟ್ ಮಾಲೀಕ, ಹೊಡೆತಕ್ಕೆ ಬಲಿಯಾಗಿ ಗೊಟಕ್ ಎಂದಿದ್ದ. ನಂಜಪ್ಪನಿಗೆ ಏಳು ವರ್ಷಗಳ ಕಾರಾಗೃಹವಾಸ ಶಿಕ್ಷೆಯನ್ನು ವಿಧಿಸಿದರು.

ಸೆರೆಮನೆಗೆ ಹೋಗುವ ಮೊದಲು ಅವನು ತನ್ನ ಹೆಂಡತಿಯೊಡನೆ ಮಾತನಾಡಿದ್ದ.

"ನಾವಿಬ್ಬರೂ ಸೇರಿ ನಿನ್ನ ಬಾಳನ್ನು ಹಾಳು ಮಾಡಿ ಬಿಟ್ಟೆವು. ನನ್ನನ್ನು ಕ್ಷಮಿಸಿಬಿಡು. ನಮ್ಮ ರಾಮು ಮೇಲೆ, ಅವಳ ನೆರಳೂ ಬೀಳಬಾರದು. ನೀನು ಬೇರೆ ಯಾವುದಾದರೂ ಊರಿಗೆ ಹೋಗಿ ನಿನ್ನ ಮಗನನ್ನು ಸರಿಯಾಗಿ ಬೆಳೆಸಿ, ವಿದ್ಯಾವಂತನನ್ನಾಗಿ, ಸುಶಿಕ್ಷಿತನನ್ನಾಗಿ ಮಾಡು .... ನಾನು ಬಿಡುಗಡೆಯಾಗುವವರೆಗೂ ಬದುಕಿರುತ್ತೇನೋ ಇಲ್ಲವೋ ತಿಳಿಯದು ....." ನಂಜಪ್ಪ ಕಣ್ಣೀರು ಸುರಿಸಿದ. ಸರೋಜ ಸಾಂತ್ವನದ ಮಾತುಗಳನ್ನಾಡಿಳು.

ಆ ಊರಿನಲ್ಲಿ ತಲೆ ಎತ್ತಿ ತಿರುಗಾಡುವುದು ಅಸಾಧ್ಯ ಎಂದು ಸರೋಜಳಿಗೆ ತಿಳಿದಿತ್ತು. ತನ್ನ ಮಕ್ಕಳೊಡನೆ, ಗಂಟು ಮೂಟೆ ಕಟ್ಟಿ ಪರ ಊರಿಗೆ ನಡೆದಳು. ಗಂಡನ ಮಾತು ಸರಿ ಎನಿಸಿರಲಿಲ್ಲವಾದ್ದರಿಂದ, ತನ್ನ ಮಗಳನ್ನು ತನ್ನೊಡನೆ ಕರೆದೊಯ್ದಳು.

ಏನೋ ತಿಳಿಯದ ವಯಸ್ಸು. ಅವಿವೇಕ ನಡೆದು ಹೋಗಿದೆ. ಹಾಗಂತ, ನಾನೂ ಕೈ ಬಿಟ್ಟರೆ, ಈ ಹುಡುಗಿಯ ಪಾಡೇನು ಎಂದು ಮನಸ್ಸು ಮರುಗಿತ್ತು.

"ಅಪ್ಪನ ಬದಲಿಗೆ, ನಾನು ಜೈಲಿಗೆ ಹೋಗಬೇಕಾಗಿತ್ತು. ನನಗೆ ಅವನು ಮೋಸ ಮಾಡಿದ್ದು. ನಾನೇ ಕೊಲ್ಲಬೇಕಾಗಿತ್ತು ...." ಸರಸು ಅಳುತ್ತಾ ನುಡಿದಳು.

"ಹಾಗೆಲ್ಲಾ ನೊಂದ್ಕೋ ಬೇಡ ಸರಸು. ನಡೆದದ್ದು ನಡೆದು ಹೋಯಿತು. ಇದನ್ನೆಲ್ಲಾ ಯಾರಿಂದಲೂ ತಪ್ಪಿಸಲು ಆಗಲಿಲ್ಲ. ಈಗ ಮುಂದೇನು ಅಂತ ಯೋಚಿಸೋಣ .... ಮೊದಲು ಡಾಕ್ಟರ ಬಳಿಗೆ ಹೋಗೋಣ... ಈ ಬಸಿರನ್ನು ತೆಗೆಸಿ ಬಿಡೋಣ."

"ಬೇಡ ಚಿಕ್ಕಮ್ಮಾ .... ನನಗೆ ಒಪ್ಪಿಗೆ ಇಲ್ಲ ....."

"ನಿನಗೆ ಅರ್ಥವಾಗುಲ್ಲ. ಮದುವೆಗೆ ಮೊದಲೇ ತಾಯಿಯಾದರೆ, ಸಮಾಜ ಏನನ್ನುತ್ತೆ? ಮುಂದೆ ನಿನ್ನನ್ನ ಯಾರು ಮದುವೆಯಾಗ್ತಾರೆ? ಇದೆಲ್ಲಾ ಕೆಟ್ಟ ಕನಸು ಅಂತ ಮರೆತು ಹೊಸ ಬಾಳನ್ನು ಬಾಳಬೇಕು ನೀನು ....."

"ಇನ್ನೇನು ಬಾಳಿದೆ ನನಗೆ? ನಡೆದ ಈ ಕಹಿ ಘಟನೆಗಳನ್ನು ನಾನು ಹೇಗೆ ಮರೆಯಲಿ? ಈ ಕಹಿ ನೆನಪುಗಳಿಂದ ನನಗೆ ಮುಕ್ತಿ ಎಲ್ಲಿದೆ? ನಾನು ಮದುವೆಯಾದರೂ, ಸುಖವಾಗಿರಲು ಸಾಧ್ಯವಾಗುವುದಿಲ್ಲ... ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡಿ. ನಾನು ಯಾವುದಾದರೂ ಮಹಿಳಾ ಆಶ್ರಯದಲ್ಲಿದ್ದುಕೊಂಡು, ನನ್ನ ಜೀವನವನ್ನು ಸಾಗಿಸುತ್ತೀನಿ."

"ನಾನು ತಾಯಿ, ಹೀಗೆ ನೀನು ಮಾತನಾಡಿದೆ ಅಂತ, ನಿನ್ನ ಪಾಡಿಗೆ ನಿನ್ನನ್ನ ಬಿಡಲು

ಸಾಧ್ಯವಿಲ್ಲ. ನಿಮ್ಮ ತಂದೆಗೆ ಮಾತು ಕೊಟ್ಟಿದೀನಿ. ನಿನ್ನನ್ನು ಒಂದು ನೆಲೆಗೆ ತರುವ ಜವಾಬ್ದಾರಿ ನನ್ನದು."

"ಡೊಂಕು ಬಾಲಾನ ನೆಟ್ಟಗೆ ಮಾಡುಕ್ಕೆ ಆಗುತ್ತಾ ಚಿಕ್ಕಮ್ಮಾ. ನನ್ನ ತಾಯಿಯಂತೆಯೇ ನಾನಾದೆ. ಬಡಮೇಷ್ಟ್ರರ ಹೆಂಡತಿಯಾಗಿ ಬವಣೆಗಳನ್ನು ಅನುಭವಿಸಲು ಇಷ್ಟವಿಲ್ಲದೇ, ಯಾರ ಹಿಂದೆಯೋ ಓಡಿ ಹೋದಳು ನಮ್ಮಮ್ಮ ಅನ್ನೋ ವಿಷಯ ನನಗೂ ಗೊತ್ತು. ಅಷ್ಟಾದರೂ ನಾನು ಎಚ್ಚೆತ್ತುಕೊಳ್ಳಲಿಲ್ಲ. ಬಣ್ಣದ ಜೀವನದ ಆಸೆಗೆ ಸೋತು, ಈ ಸ್ಥಿತಿಗೆ ಬಂದೆ. ತಪ್ಪು ನನ್ನದು. ಏನು ಆಗುತ್ತೋ ಅದನ್ನು ನಾನು ಅನುಭವಿಸುತ್ತೇನೆ. ದಯವಿಟ್ಟು ನೀವು ಮಧ್ಯೆ ಬರಬೇಡಿ. ನಿಮ್ಮ ಮಗನ ಯೋಗಕ್ಷೇಮವನ್ನು ನೋಡಿಕೊಳ್ಳಿ. ಅಷ್ಟೇ ಸಾಕು."

ಛಟೀರನೆ ಕೆನ್ನೆಗೆ ಹೊಡೆದಂತೆ, ಈ ಮಾತುಗಳು ಸರೋಜಳನ್ನು ಅಪ್ಪಳಿಸಿದಾಗ, ಅವಳು ಮೆತ್ತಗಾದಳು. ನನ್ನ ಪತಿ ಹೇಳಿದ್ದು ನಿಜ ... ಈ ಹುಡುಗಿಯನ್ನು ನಾನು ನೋಡಿಕೊಳ್ಳುವುದಂತೂ ಅಸಾಧ್ಯ .... ಪೆಟ್ಟು ತಿಂದ ಮೇಲೆ, ಬುದ್ಧಿ ಬಂದಿರಬೇಕಾಗಿತ್ತು. ಹಾಗೇನೂ ಕಾಣುತ್ತಿಲ್ಲ ...... ಎಂದು ಕೊಂಡರೂ ನುಡಿದಳು.

"ನೀನಿನ್ನೂ ಚಿಕ್ಕವಳು ಸರಸೂ .... ಪ್ರಪಂಚ ಅಂದರೆ ಏನೂಂತ ಅರಿಯದವಳು .... ಮನೆ ಬಿಟ್ಟು ಹೊರಗಿದ್ದರೆ ಜನ ತಲಾತಟ್ಟಿ ಮಾತುಗಳನ್ನಾಡುತ್ತಾರೆ. ನಿನ್ನ ಬಾಳು ನರಕವಾಗಿ ಹೋಗುತ್ತದೆ."

"ಇನ್ನು ನನ್ನ ಬಾಳು ಸ್ವರ್ಗವಾಗುವುದಂತೂ ಸಾಧ್ಯವಿಲ್ಲ. ಬಿಡಿ ಚಿಕ್ಕಮ್ಮ ... ನಾನೂ ಹೇಗೂ ನಿಮ್ಮ ಸ್ವಂತ ಮಗಳಲ್ಲ. ನನಗೋಸ್ಕರ ನೀವು ಏಕೆ ಇಷ್ಟು ಒದ್ದಾಡ್ತೀರೋ ....." ಸರೋಜ ಪೆಚ್ಚಾದಳು.

"ನಿನ್ನನ್ನು ಹೆತ್ತ ತಾಯಿ ನಾನಲ್ಲ. ಆದರೆ ಸಾಕಿದವಳು ನಾನೇ ತಾನೇ ......"

"ಆದರೇನು? ನನ್ನನ್ನು ನಿಮ್ಮಂತೆ ಗರತಿಯನ್ನಾಗಿ ಮಾಡಲು ನಿಮ್ಮ ಕೈಯಿಂದ ಆಗಲಿಲ್ಲವಲ್ಲ ...." ಸರೋಜ ಬೆಚ್ಚಿದಳು. ಇವಳೇಕೆ ಹೀಗೆ ಮೂದಲಿಸುತ್ತಿದಾಳೆಂದು ಅರ್ಥವಾಗಲಿಲ್ಲ.

"ಏನ್ಮಾತ್ನಾಡ್ತೀ ಸರಸೂ ..... ಹೀಗೆ ನಡೆಯುತ್ತೆ ಅಂತ ನನಗೇನು ಗೊತ್ತಿತ್ತೇ ...."

"ನಾನು ಎಲ್ಲಿಗೆ ಹೋಗ್ತೀನಿ .... ಏನು ಮಾಡ್ತೀನಿ .... ಅಂತ ನೀವು ನನ್ನ ಮೇಲೆ ನಿಗವನ್ನಿಟ್ಟಿದ್ದರೆ ಹೀಗಾಗುತ್ತಿರಲಿಲ್ಲ. ನನ್ನ ಬಗ್ಗೆ ನಿಮಗೆ ಯಾವ ಕಾಳಜಿಯೂ ಇರಲಿಲ್ಲ. ಅಂತೂ ನೀವು ಮಲತಾಯಿ ಅನ್ನೋದನ್ನ ಸಾಬೀತು ಮಾಡಿ ಬಿಟ್ಟಿರಿ ...." ಸರೋಜ ಕುಸಿದು ಕುಳಿತಳು.

ಮಲಮಗಳು ನಿಜ. ಆದರೆ ಸಾಕಿ ಬೆಳೆಸಿದ ತನ್ನ ಶ್ರದ್ಧೆಯ ಮೇಲೆ ಈ ಮಗಳಿಗೆ ಅಪನಂಬಿಕೆ ಇರುವುದಾದರೆ, ನನ್ನ ಪರಿಶ್ರಮಕ್ಕೆ ಬೆಲೆ ಖಂಡಿತಾ ಇಲ್ಲ. ಬಲವಂತವಾಗಿ ಇವಳನ್ನು ಬದಲಾಯಿಸುವುದು ತನ್ನಿಂದಾಗದ ಮಾತು ಎಂದುಕೊಂಡು ಅತ್ತಳು.

ಅದೇ ರಾತ್ರಿ ಸರಸೂ ಮನೆ ಬಿಟ್ಟು ಹೋದಳು. ಸರೋಜ ಹುಡುಕಿಸುವ ಪ್ರಯತ್ನವನ್ನು ಮಾಡಲಿಲ್ಲ. ನಮ್ಮ ಜೊತೆಯಲ್ಲಿದ್ದು ನಮ್ಮ ಬಾಳಿಗೆ ಕರಿನೆರಳಾಗುವ ಬದಲು, ಅವಳು ತಮ್ಮಿಂದ ದೂರವಿರುವುದೇ ಸರಿ ಎಂದೆನ್ನಿಸಿತ್ತು. ರಾಮು ಮುಂದೆ ಬರಬೇಕು. ಅವನಿಂದ, ಈ ಕಹಿ ನೆನಪುಗಳೆಲ್ಲಾ ಮರೆಯುವಂತಾಗಬೇಕು ಎಂದುಕೊಂಡಳು.

ಒಂದು ಬಟ್ಟೆ ಅಂಗಡಿಯಲ್ಲಿ ಕೆಲಸಕ್ಕೆ ಸೇರಿಕೊಂಡಳು. ಸರಕಾರದಿಂದ, ಗಂಡನಿಂದ ಹೆಸರಿಗೆ ಬಂದ ಹಣವನ್ನು ಮಗನ ವಿದ್ಯಾಭ್ಯಾಸಕ್ಕಾಗಿ ಜತನ ಮಾಡಿ, ಒಪ್ಪವಾಗಿ ಸಂಸಾರ ತೂಗಿಸಿದಳು.

ದಿನಗಳು ಸರಿದವು. ತಿಂಗಳುಗಳು ಉರುಳಿದವು. ವರ್ಷಗಳು ಕಳೆದವು. ರಾಮಸ್ವಾಮಿ ಬಿ.ಎ. ಪಾಸು ಮಾಡಿದ. ಒಂದು ಸರ್ಕಾರಿ ಕಛೇರಿಯಲ್ಲಿ ಗುಮಾಸ್ತನ ಕೆಲಸ ಸಿಕ್ಕಿತು. ಈ ವೇಳೆಗೆ ಅವನ ತಾಯಿ ತೀರಿಹೋದಳು. ಜೈಲುವಾಸದಲ್ಲಿದ್ದ ತಂದೆಯ ಗತಿ ಏನಾಯಿತೆಂದು ಇವನಿಗೆ ತಿಳಿಯಲಿಲ್ಲ. ಅಕ್ಕ ಸರಸ್ವತಿಯನ್ನು ಮರೆತಿದ್ದನೆಂದೇ ಹೇಳಬೇಕು.

ತಂದೆ ತಾಯಿ ಯಾರೂ ಇಲ್ಲದೇ ಒಬ್ಬಂಟಿಗನಾಗಿದ್ದ ರಾಮಸ್ವಾಮಿಗೆ ಅವನ ಸಹೋದ್ಯೋಗಿಗಳು ಮದುವೆಯಾಗೆಂದು ಪುಸಲಾಯಿಸಿದರು. ಮದುವೆಯ ಬಗ್ಗೆ ಯಾವ ಸವಿಗನಸನ್ನು ಕಾಣದಿದ್ದರೂ, ತಾನೂ ಸಂಸಾರಸ್ಥನಾಗಬೇಕೆಂಬ ಆಸೆ ರಾಮಸ್ವಾಮಿಯಲ್ಲಿ ಮೊಳೆಯಿತು. ತುಂಬು ಸಂಸಾರದಲ್ಲಿ ಐದನೇ ಮಗಳಾಗಿ ಹುಟ್ಟಿದ ಶಾಂತ ಇವನ ಮಡದಿಯಾಗಿ ಇವನ ಮನೆಯನ್ನು ತುಂಬಿದಳು.

ಶಾಂತಳ ತಂದೆ, ರಾಮಸ್ವಾಮಿಯ ಯಾವ ಪೂರ್ವಾಪರವನ್ನು ವಿಚಾರಿಸಲಿಲ್ಲ. ಹೆಣ್ಣು ಮಕ್ಕಳ ಮದುವೆಯೇ ಒಂದು ಸಮಸ್ಯೆಯಾಗಿರುವಾಗ, ಅನುರೂಪನಾದ, ಸರ್ಕಾರಿ ನೌಕರಿಯಲ್ಲಿರುವ ವರನ ಬಗ್ಗೆ ಬೇರೇನೂ ವಿಚಾರಿಸುವ ಅಗತ್ಯ ಕಂಡುಬರಲಿಲ್ಲ.

ಸರಳವಾಗಿ ಮದುವೆ ನೆರವೇರಿತು. ಮನೆಯನ್ನು ತುಂಬಿದ ಮಡದಿ, ಮನವನ್ನು ತುಂಬಿದಳು. ಒಂಟಿ ಬಡುಕನಂತೆ ಕಾಲ ಹಾಕುತ್ತಿದ್ದವನಿಗೆ, ಹೆಂಡತಿಯ ಸನಿಹ ಅತಿ ರಂಜನೀಯವಾಗಿತ್ತು.

ಹೆಂಡತಿಯನ್ನು ಅತಿ ಮುಚ್ಚಟೆಯಾಗಿ ನೋಡಿಕೊಳ್ಳುತ್ತಿದ್ದ. ಒಮ್ಮೊಮ್ಮೆ ಏನೋ ಅವ್ಯಕ್ತ ಭಯ ಸಹ ಅವನನ್ನು ಕಾಡುತ್ತಿತ್ತು. ತನ್ನ ಮನೆಯ ಕತೆಯನ್ನು ನೆನೆಸಿಕೊಂಡರೆ, ದಿಗಿಲಾಗುತ್ತಿತ್ತು. ತನ್ನ ಹೆಂಡತಿಯನ್ನು ತಾನು ಎಲ್ಲಾ ರೀತಿಯಿಂದಲೂ ಚೆನ್ನಾಗಿ ನೋಡಿಕೊಳ್ಳಬೇಕು .... ಇಲ್ಲದಿದ್ದರೆ, ಅಪ್ಪನಿಗಾದಂತೆ, ತನ್ನ ಹೆಂಡತಿಯೂ ಯಾರ ಹಿಂದಾದರೂ ಓಡಿಹೋದರೆ ಅಂತ ಅನ್ನಿಸದೇ ಇರುತ್ತಿರಲಿಲ್ಲ..... ತನ್ನ ರಸಿಕತನದಿಂದ, ತನ್ನ ಹೆಂಡತಿಯನ್ನು ತನ್ನ ಕೈವಶ ಮಾಡಿಕೊಂಡಿದ್ದ. ಪ್ರೀತಿಯಿಂದ ಮುದ್ದಿನಿಂದ ಮಾತನಾಡಿಸುವುದು .... ಹೂವು ಹಣ್ಣು ತಂದುಕೊಟ್ಟು ಅವಳನ್ನು ಮೆಚ್ಚಿಸುವುದು, ಹೋಟೆಲ್ಲು ಸಿನಿಮಾಗಳಿಗೆ ಅವಳನ್ನು ಕರೆದುಕೊಂಡು ಹೋಗಿ ಅವಳ ಮನಸ್ಸನ್ನು ರಂಜಿಸುವುದು ..... ಇದನ್ನೆಲ್ಲಾ ಚಾಚೂತಪ್ಪದೇ ಮಾಡುತ್ತಿದ್ದ.

ಮದುವೆಯಾಗಿ ವರ್ಷಗಳೇ ಕಳೆದರೂ, ಮಕ್ಕಳಾಗಲಿಲ್ಲವಲ್ಲ ಅಂತ ಶಾಂತ ಆಕ್ಷೇಪಣೆ ಎತ್ತಿದರೆ, ಏನೋ ಮಾತನ್ನಾಡಿ ಅವಳ ಬಾಯಿ ಮುಚ್ಚಿಸುತ್ತಿದ್ದ. ಒಳಗೊಳಗೇ ಅವನಿಗೆ ಏನೋ ದಿಗಿಲು. ಮಕ್ಕಳಾದರೆ, ಶಾಂತ ತನ್ನಿಂದ ದೂರವಾಗುತ್ತಾಳೆ ಎನ್ನೋದಲ್ಲದೆ, ಮನೆಯ ಖರ್ಚು ವೆಚ್ಚ ಬೆಳೆಯುತ್ತೆ. ಆಗ ಹೆಂಡತಿಯ ಮನಸ್ಸು ಬದಲಾಗಬಹುದು. ನನ್ನ ಮೇಲಿನ ಪ್ರೀತಿ ಕಡಿಮೆ ಆಗಬಹುದು ಎನ್ನುವ ಭಯ. ಆದರೆ ಶಾಂತಳ ಆಸೆಯನ್ನು ಕಡೆಗಣಿಸಲಾರ. ಎಲ್ಲಾ ಹೆಣ್ಣುಮಕ್ಕಳಂತೆ, ತಾಯಿಯಾಗುವ ಆಸೆ ಶಾಂತಳಲ್ಲಿದ್ದರೆ ಅದು ತಪ್ಪೇನಿಲ್ಲ... ಆದರೂ ಸರಿ. ಆಗದಿದ್ದರೂ ಸರಿ ಎನ್ನೋ ಭಾವನೆಯಲ್ಲಿದ್ದ.

ಆದರೆ, ಶಾಂತ ಪಾರ್ವತಮ್ಮನ ಮಾತಿಗೆ ಒಪ್ಪಿ, ಯಾವನೋ ಪಂಡಿತರ ಬಳಿಗೆ

ಹೋಗಿದ್ದು ಸರಿ ಎನಿಸಿರಲಿಲ್ಲ. ಆ ಪಂಡಿತ ಎಂಥವನೋ ಎಂಬ ಸಂಶಯ ಸಹ ಇಣುಕಿತ್ತು. ಲೇಡಿ ಡಾಕ್ಟರರ ಬಳಿಗೆ ಹೋಗದೇ ಈ ಪಂಡಿತನ ಬಳಿಗೆ ಹೋಗಲು ಕಾರಣವೇನು ಎಂಬ ಅನುಮಾನ ಬಲವಾದಾಗ, ಆ ಪಂಡಿತರ ಮನೆಗೆ ಬಂದಿದ್ದ. ವಯೋವೃದ್ಧರಾದ ಪಂಡಿತರನ್ನು ಕಂಡು ಗೌರವ ಮೂಡಿತ್ತು. ಲೋಕಾರೂಢಿಯಾಗಿ ಮಾತನಾಡಿ ಎದ್ದು ಹೊರ ಬಂದ.

ಹೊರಬಾಗಿಲಿನಲ್ಲಿ ಒಬ್ಬಳು ಹೆಂಗಸು ನಿಂತಿದ್ದಳು. ಇವನ ಕಣ್ಣು ಅತ್ತ ಹರಿಯಿತು. ಕೋಲು ಮುಖ, ತೆಳ್ಳನೆಯ, ಬೆಳ್ಳಗಿನ ಶರೀರ. ತಾನು ಈ ಹಿಂದೆ ಈ ಹೆಂಗಸನ್ನು ಎಲ್ಲಿಯೋ ನೋಡಿರುವೆನೆಂದು ಅನಿಸತೊಡಗಿತ್ತು. ಆದರೆ ಯಾರೆಂದು ತಿಳಿಯಲಿಲ್ಲ. ಕೇಳುವ ಧೈರ್ಯವೂ ಬರಲಿಲ್ಲ. ಆ ಹೆಂಗಸು ತಪ್ಪಾಗಿ ಭಾವಿಸಿದರೆ ಎಂಬ ಆಲೋಚನೆ ಸಹ ಮೂಡಿತು. ಆದರೂ ತಾನು ಅತ್ಯಂತ ಸಮೀಪದಲ್ಲಿ ಕಂಡಿರುವ ಮುಖ. ತನಗೆ ತುಂಬಾ ಪರಿಚಿತವಾದ ಮುಖ ಎಂದು ಬಾರಿ ಬಾರಿಗೂ ಅನ್ನಿಸತೊಡಗಿತು. ಆದರೆ ಯಾರನ್ನು ಏನೂ ಕೇಳುವ ಧೈರ್ಯವಾಗದೇ ಹಾಗೇ ಹಿಂತಿರುಗಿದ.

ಸತತವಾಗಿ ನಾಲ್ಕಾರು ದಿನಗಳು ಆ ಮುಖವೇ ಎದುರಿಗೆ ಬಂದು ಬಂದು ಅವನನ್ನು ಕಾಡಿತು. ಶಾಂತಳೊಡನೆ ಹೇಳಲಾರದೇ ಚಡಪಡಿಸಿದ. ಅವನ ಚಡಪಡಿಕೆಯನ್ನು ಗಮನಿಸುವ ಸ್ಥಿತಿಯಲ್ಲಿರಲಿಲ್ಲ ಶಾಂತ. ಮೊದಲಬಾರಿಗೆ ಗರ್ಭಿಣಿಯಾದ ಸಂತಸದಲ್ಲಿ, ತನ್ನದೇ ಆದ ಲೋಕದಲ್ಲಿದ್ದಳು. ಆಗ ಹೆಂಡತಿಯ ಮೇಲೆ ಭಾರಿ ಕೋಪವೇ ಬಂದಿತ್ತು. ಸಂಶಯ ಸಹ ಮೂಡಿತ್ತು. ನಾಲ್ಕೈದು ವರ್ಷಗಳಿಂದ ಮಕ್ಕಳಾಗುವ ಸೂಚನೆಯೇ ಇಲ್ಲದ ಶಾಂತ, ಇದ್ದಕ್ಕಿದ್ದಂತೆ, ಪಂಡಿತರ ಮನೆಗೆ ಹೋಗಿ ಬಂದ ಕೂಡಲೇ ಗರ್ಭವತಿ ಆಗುವುದು ಎಂದರೇ ..... ಏನಿದರ ಮರ್ಮ?

ಪಂಡಿತರೇನೋ ಮುದುಕರು .... ಅಲ್ಲಿ ಬೇರೆ ಯಾರಾದರೂ ಗಂಡಸರಿರಬಹುದು ಅಲ್ಲವೇ .... ಅಲ್ಲಿ ಇನ್ನು ಒಬ್ಬಳು ಹೆಂಗಸಿದ್ದಳಲ್ಲ ಅವಳ ಗಂಡನೂ ಅಲ್ಲಿರಬಹುದೇ .... ಈ ಅನುಮಾನ, ತಾಕಲಾಟಗಳಿಂದ ಆಗಾಗ್ಗೆ ಹೆಂಡತಿಯ ಮೇಲೆ ರೇಗುತ್ತಿದ್ದ. ಈ ಮಗು ಯಾವುದೋ ಏನೋ, ಹುಟ್ಟಿ ಬರುವ ಮೊದಲೇ, ನಮ್ಮಿಬ್ಬರ ಮಧ್ಯೆ ವಿರಸವನ್ನು ತಂದು ಹಾಕುತ್ತಿದ್ದೆ ಎಂದೆನಿಸಿತ್ತು. ನಮ್ಮಿಬ್ಬರ ಸೊಗಸಾದ ಜೀವನಕ್ಕೆ ಇದು ಮುಳ್ಳು ಎಂದೇ ಅನಿಸುತ್ತಿತ್ತು. ಹೆಂಡತಿಯ ಚಲನವಲನಗಳ ಮೇಲೆ ಅವಳಿಗೆ ತಿಳಿಯದಂತೆ ನಿಗವನ್ನಿಟ್ಟಿದ್ದ. ಒಮ್ಮೆ ಅವಳ ಮೇಲೆ ರೇಗಿದರೆ, ಮತ್ತೊಮ್ಮೆ ಅವಳನ್ನು ಮುದ್ದಿಸುತ್ತಿದ್ದ. ಬಾಣಂತನಕ್ಕೆ ಹೆಂಡತಿಯನ್ನು ಕಳಿಸಿದರೆ, ಅವಳು ತನ್ನ ಕೈ ಬಿಟ್ಟು ಹೋಗಿಬಿಡುವಳೇನೋ ..... ಎಂಬ ಆತಂಕ ಪ್ರಾರಂಭವಾಗಿತ್ತು. ಗಂಡನ ವಿಚಿತ್ರ ವರ್ತನೆ ಹೆಂಡತಿಗೆ ಅತಿಶಯವಾಗಿ ಕಾಣಲಿಲ್ಲ. ತಾನು ಮೊಟ್ಟ ಮೊದಲ ಬಾರಿಗೆ ತಾಯಿಯಾಗುವ ಸಂಭ್ರಮದಲ್ಲಿ ತೇಲಾಡುತ್ತಿದ್ದವಳು ಬಾಣಂತನಕ್ಕೆ ತವರಿಗೆ ಹೊರಟು ಹೋದಳು.

- - 10 - -

ಕುತೂಹಲವನ್ನು ಕಡೆಗಣಿಸಲಾಗದೇ ಮತ್ತೆರಡು ಬಾರಿ, ಆ ಪಂಡಿತರ ಮನೆಯ ಕಡೆ ಹೋಗಿದ್ದ. ಅಲ್ಲಿ ಬೇರೆ ಯಾವ ಗಂಡಸರನ್ನು ಕಾಣಲಿಲ್ಲ. ಮನಸ್ಸಿಗೆ ಹಿತವೆನಿಸಿದರೂ, ಆ ಹೆಂಗಸು ಎಲ್ಲಿಯಾದರೂ ಕಾಣುವಳೇನೋ ಎಂದು ಅತ್ತಿತ್ತ ನೋಡಿದ, ನಿರಾಸೆಯಾಗಿತ್ತು. ಆದರೂ ಛಲ ಬಿಡದ ತ್ರಿವಿಕ್ರಮನಂತೆ ಮತ್ತೆ ಮತ್ತೆ

ಪಂಡಿತರ ಮನೆಯ ಬಳಿ ಠಳಾಯಿಸಿದ. ಒಂದು ದಿನ ಪಂಡಿತರು ಇವನಿಗೆ ಹೇಳಿ ಕಳಿಸಿದರು.

"ನೀವು ಯಾರೋ ಗೊತ್ತಾಗಲಿಲ್ಲ. ಪದೇ ಪದೇ ಇಲ್ಲಿಗೆ ಬರುತ್ತಿದೀರೆಂದು ತಿಳಿಯಿತು. ನನ್ನಿಂದ ನಿಮಗೆ ಏನಾಗಬೇಕಾಗಿದೆ ತಿಳಿಸಿ. ನಾನು ಹೇಳಿ ಕೇಳಿ, ಪಂಡಿತ. ನನ್ನ ಬಳಿ ಔಷಧ ಪಥ್ಯಕ್ಕೆಂದು ಬರುವವರೇ ಜಾಸ್ತಿ. ನಿಮ್ಮನ್ನು ನೋಡಿದರೆ, ನೀವು ಯಾವ ಸಮಸ್ಯೆಯಿಂದ ಬಳಲುತ್ತಿಲ್ಲ ಅಂತ ನನಗನ್ನಿಸುತ್ತೆ. ಆದರೂ ಹೇಳಬಹುದಾದಂತಹ ಸಮಸ್ಯೆ ಏನಾದರೂ ಇದ್ದರೆ ಹೇಳಿ ..... ನನ್ನಿಂದ ಏನಾದರೂ ಸಹಾಯವಾಗುವುದಾದರೆ ಮಾಡ್ತೀನಿ."

ಆತನ ಸೌಜನ್ಯಕ್ಕೆ ಮರುಳಾದ. ಏನು ಸುಳ್ಳು ಹೇಳಬೇಕೆಂದು ತಿಳಿಯಲಿಲ್ಲ. ನಿಜವನ್ನೇ ನುಡಿದ.

"ನಾನು ಹಿಂದೊಮ್ಮೆ ಇಲ್ಲಿಗೆ ಬಂದಿದ್ದಾಗ, ಹೊರ ಬಾಗಿಲಿನಲ್ಲಿ ಒಬ್ಬ ಹೆಂಗಸನ್ನು ಕಂಡೆ. ತುಂಬಾ ಪರಿಚಿತವಾದ ಮುಖ. ಆದರೆ ಯಾರೆಂದು ತಿಳಿಯಲಿಲ್ಲ. ಕೇಳುವ ಧೈರ್ಯವಾಗಲಿಲ್ಲ. ಮತ್ತೆ ಮತ್ತೆ ಆ ಹೆಂಗಸನ್ನು ಕಂಡರೆ, ನೆನಪಿಗೆ ಬರಬಹುದೇನೋ ಅಂತನ್ನಿಸಿತ್ತು. ಪದೇ ಪದೇ ಬಂದೆ. ಆದರೆ ಮತ್ತೆ ಆ ಹೆಂಗಸು ಕಾಣಲಿಲ್ಲ."

"ನೀವು ಯಾವ ಹೆಂಗಸಿನ ಬಗ್ಗೆ ಹೇಳುತ್ತೀರೋ ನನಗೆ ತಿಳಿಯದು. ಔಷಧಕ್ಕಾಗಿ ಆಗ ಈಗ ಹೆಂಗಸರು ಬರುವ ಸ್ಥಳ ಇದು. ನನ್ನ ಮನೆಯಲ್ಲಿ ನನ್ನ ಮಗಳ ಹೊರತು ಬೇರೆ ಯಾವ ಹೆಂಗಸರಿಲ್ಲ."

"ಕ್ಷಮಿಸಿ, ನಾನು ಇನ್ನು ಬರ್ತೀನಿ."

"ಪರವಾಗಿಲ್ಲ, ಹೇಗೂ ಬಂದಿದೀರಿ. ಒಂದು ಲೋಟ ಶರಬತ್ತು ಕುಡಿದು ಹೋಗೋರಂತೆ. ತಾಯೀ .... ಒಂದ್ಲೋಟ ಶರಬತ್ತು ತಂದು ಕೊಡ್ತೀಯಾ?"

ಕೆಲವೇ ನಿಮಿಷಗಳಲ್ಲಿ ಕೈ ಬಳೆಗಳ ನಾದ ಕೇಳಿಸಿತು. ರಾಮಸ್ವಾಮಿ ಕತ್ತು ತಿರುಗಿಸಿದ. ಅದೇ ಹೆಂಗಸು ..... ಮುಖದಲ್ಲಿ ಲವಲವಿಕೆ ಎದ್ದು ಕಂಡಿತು. ಅವಳು ಹತ್ತಿರಕ್ಕೆ ಬರುವವರೆಗೂ ತದೇಕವಾಗಿ ಅವಳನ್ನೇ ನೋಡಿದ. ಅದೇ ಪರಿಚಿತ ಮುಖ. ಅವನ ಗಲಿಬಿಲಿಯನ್ನು ಗಮನಿಸಿದ ಪಂಡಿತರು ನಕ್ಕರು.

"ಈಕೆಯನ್ನೇ ತಾನೇ ನೀವು ನೋಡಿದ್ದು. ಇವಳು ನನ್ನ ಮಗಳು ..... ತಗೊಳ್ಳಿ ಶರಬತ್ತನ್ನು ....." ಲೋಟದ ಕಡೆ ಕೈ ಮಾಡಿದರು. ಇವನು ಲೋಟವನ್ನು ಕೈಗೆತ್ತಿಕೊಂಡ. ಆ ಹೆಂಗಸು ಹಾಗೇ ಅಡಿಗೆ ಮನೆಗೆ ಮತ್ತೆ ಹೊರಟು ಹೋದಳು. ಗಟಗಟನೆ ಶರಬತ್ತನ್ನು ಕುಡಿದ. ಹೊಟ್ಟೆ ತಣ್ಣಗಾಗಿತ್ತು. ಆದರೆ ತಳಮಳ ಕಡಿಮೆ ಆಗಿರಲಿಲ್ಲ.

ಪಂಡಿತರು ಮತ್ತೆ ನಕ್ಕರು. "ನಿಮ್ಮ ತಳಮಳ ಏನೂಂತ ನನಗೆ ತಿಳಿಯದು. ಆದರೆ ನಿಮಗೇನನ್ನಾದರೂ ಕೇಳಬೇಕೆನ್ನಿಸಿದ್ದರೆ ಖಂಡಿತಾ ಕೇಳಿ. ನನ್ನ ಹತ್ತಿರ ಉಪಾಯವಿರಬಹುದು."

"ಪಂಡಿತರೇ ನನ್ನನ್ನು ತಪ್ಪು ಭಾವಿಸಬೇಡಿ .... ಈ ಹೆಂಗಸನ್ನು ನೋಡಿದರೆ, ಸಮೀಪದವರ್‍ಯಾರನ್ನೋ ನೋಡಿದಂತೆ ಅನ್ನಿಸುತ್ತೆ. ಇದು ಹೇಗೆ ಸಾಧ್ಯ, ಅಂತ ಯೋಚಿಸ್ತಿದೀನಿ."

"ಪ್ರಪಂಚದಲ್ಲಿ ಎಲ್ಲವೂ ಸಾಧ್ಯ. ಎಲ್ಲವನ್ನು ತಲೆಕೆಳಗು ಮಾಡುವ ಬ್ರಹ್ಮಾಂಡ ಇದು. ಅವಳು ನನ್ನ ಮಗಳೇ. ಅವಳೊಡನೆ ಮಾತನಾಡಿದರೆ, ನಿಮ್ಮ ಅನುಮಾನ

ಪರಿಹಾರವಾಗಬಹುದು. ಅವಳನ್ನು ಇಲ್ಲಿಗೇ ಕರೀತೀನಿ ....."

"ಬೇಡ ಬೇಡ ....." ಸಂಕೋಚದಿಂದ ನುಡಿದ.

"ಹಾಗಾದ್ರೆ ಇನ್ನು ಮುಂದೆ ಈ ಮನೆಯ ಬಳಿ ಅಪರಿಚಿತರಂತೆ ಸುಳಿದಾಡಬಾರದು. ನೋಡಿದವರು ತಪ್ಪಾಗಿ ಭಾವಿಸುತ್ತಾರೆ. ಧೈರ್ಯವಾಗಿ ಒಳಬಂದು ಮಾತನ್ನಾಡಬೇಕು .... ಇನ್ನು ಹೋಗಿ ಬನ್ನಿ."

"ನನ್ನಿಂದ ಏನಾದರೂ ಅನುಚಿತವಾಗಿದ್ದರೆ ಕ್ಷಮಿಸಿ" ಎಂದು ಕೈ ಮುಗಿದು ಅಲ್ಲಿಂದ ಹೊರಬಿದ್ದ.

ಶಾಂತ ಹೆಣ್ಣು ಮಗುವನ್ನು ಹೆತ್ತಿದ್ದಳು. ಆ ಮಗುವಿನ ಮುಖವನ್ನು ಕಂಡೊಡನೆ, ಅವನಿಗೆ ಪಂಡಿತರ ಮನೆಯ ಆ ಹೆಂಗಸು ನೆನಪಿಗೆ ಬಂದಿದ್ದಳು.

"ಹೆಣ್ಣು ಮಗುವಾಯಿತು ಅಂತ ಬೇಸರಾನಾ?" ಶಾಂತ ಪ್ರಶ್ನಿಸಿದ್ದಳು.

ಹಾಗೇನಿಲ್ಲ ಎಂದು ನುಡಿದರೂ, ಹಳೆಯ ನೆನಪುಗಳು ಬಾಧಿಸಿದ್ದವು.

ನಾಮಕರಣದ ಸಮಯದಲ್ಲಿ ಮಗುವಿಗೆ ನಾಗಲಕ್ಷ್ಮಿ ಎಂದು ಹೆಸರನ್ನಿಡಬೇಕೆಂದು ವಾದಿಸಿದಾಗ ಸಿಟ್ಟಾಗಿದ್ದ. ಆದರೂ ಅದೇ ಹೆಸರನ್ನು ಒಪ್ಪಿಕೊಂಡ. ನಾಗಲಕ್ಷ್ಮಿ ಹಳೇ ಕಾಲದ ಹೆಸರು .... ನಮ್ಮಮ್ಮನ ಹೆಸರು ಸರೋಜ. ಆ ಹೆಸರನ್ನಾದರೂ ಇಡಬಹುದಾಗಿತ್ತು ಅಂತೆನ್ನಿಸಿದಾಗ ತಕ್ಷಣಕ್ಕೆ ಇನ್ನೊಂದು ಹೆಸರು ನೆನಪಾಗಿತ್ತು ...... ಸರಸ್ವತಿ .... ತನ್ನ ಅಕ್ಕ ಸರಸ್ವತಿ ... ಅವಳು ಹೇಗಿದ್ದಳೆಂದು ನೆನಪಿಸಿಕೊಳ್ಳಲಾರಂಭಿಸಿದ. ತಟಕ್ಕನೇ ಪಂಡಿತರ ಮನೆಯ ಆ ಹೆಂಗಸು ನೆನಪಾಗಿದ್ದಳು.

ಊರಿಗೆ ಬಂದವನೇ, ಮಾರನೇ ದಿನ ಪಂಡಿತರ ಮನೆಗೆ ಬಂದ. ಹೊರಬಾಗಿಲಲ್ಲಿ ಆ ಹೆಂಗಸಿನ ದರ್ಶನವಾಗಲಿಲ್ಲ. ಒಳಮನೆಯಲ್ಲಿ ಕೈ ಬಳೆಗಳ ದನಿಯಿರಲಿಲ್ಲ. ಪಂಡಿತರೇ ಮಾತನ್ನಾಡಿಸಿದರು.

"ಏನಪ್ಪಾ ಏನು ವಿಷಯ? ಬಹಳ ದಿನಗಳಾಗಿತ್ತು ಈ ಕಡೆಗೆ ಬಂದು ..... ಏನ್ಸಮಾಚಾರ?"

ಕೈ ಕೈ ಹೊಸೆಯುತ್ತಾ ರಾಮಸ್ವಾಮಿ ನುಡಿದ.

"ನಿಮ್ಮ ಮಗಳ ಬಳಿ ಮಾತನಾಡೋಣ ಅಂತ ಬಂದೆ ...." ಪಂಡಿತರು ಸುಮ್ಮನಾದರು.

"ನಾನು ಮಾತನಾಡಿದರೆ ಏನೂ ಅಭ್ಯಂತರವಿಲ್ಲ ತಾನೇ ....."

"ಏನಿಲ್ಲಪ್ಪಾ .... ಅಂತಹ ಸಣ್ಣ ಬುದ್ಧಿ ನನಗಿಲ್ಲ. ಆದರೆ ಅವಳೀಗ ಇಲ್ಲಿಲ್ಲ. ಪಕ್ಕದ ಊರಿನಲ್ಲಿ ಕೆಲಸ ಸಿಕ್ಕಿದೆ. ಅಲ್ಲಿಗೆ ಹೊರಟು ಹೋದಳು. ಮತ್ತೆ ಭಾನುವಾರವೇ ಅವಳು ಬರೋದು ...."

"ಓ .... ಹೌದಾ ...." ನಿರಾಸೆಯಿಂದ ನುಡಿದ.

"ನನ್ನನ್ನೇ ಕೇಳಬಹುದಾದರೆ ಕೇಳಿ ..... ನಿಮ್ಮ ಕುತೂಹಲಕ್ಕೆ ಸಂಶಯಕ್ಕೆ, ನನ್ನ ಬಳಿ ಉತ್ತರವಿದ್ದರೂ ಇರಬಹುದು ...." ರಾಮಸ್ವಾಮಿ ಒಂದು ಗಳಿಗೆ ಅನುಮಾನಿಸಿದ. ನಂತರ ನಿಧಾನವಾಗಿ ಪ್ರಶ್ನಿಸಿದ.

"ಅವರು ..... ನಿಮ್ಮ ಸ್ವಂತ ಮಗಳೇನಾ?"

"ಅಲ್ಲ, ಅವಳು ನನ್ನ ಸಾಕು ಮಗಳು. ಆದರೆ ನಿನಗೇಕೇ ಅವಳ ಬಗ್ಗೆ ಆಸಕ್ತಿ ಎಂದು ಕೇಳಬಹುದೇ?" ರಾಮಸ್ವಾಮಿ ನಿರುತ್ತರನಾದ. ತನ್ನ ಮನೆಯ ಹಳೆಯ ಕತೆ ಹೇಳಿಕೊಳ್ಳುವಂಥದ್ದಲ್ಲ. ಆ ಅಕ್ಕನ ನೆನಪನ್ನು ಮರುಕಳಿಸುವಂತಿರುವ ಈ ಹುಡುಗಿ,

ಅಕ್ಕನ ಮಗಳೇ ಯಾಕಾಗಿರಬಾರದು? ಹೇಗೂ, ಇವಳು ಇವರ ಸ್ವಂತ ಮಗಳಲ್ಲವೆಂದು ತಿಳಿಯಿತಲ್ಲ ಎಂದುಕೊಂಡರೂ ಏನನ್ನು ಆಡಲಾರ.

"ಏನೋಪ್ಪ .... ನೀವೇ ಒಬ್ಬರು ಸಂಶಯಾಸ್ಪದ ವ್ಯಕ್ತಿಯ ತರಹ ಕಂಡು ಬರುತ್ತೀರಿ ನನಗೆ .... ಸುಜಾತ ನನ್ನ ಸಾಕುಮಗಳು, ಆದರೆ ಅದರಿಂದ ನಿಮಗೇನು ಲಾಭ ಅಂತ ನನಗೆ ತಿಳಿಯುತ್ತಿಲ್ಲ ...."

ತನ್ನ ಬಳಿ ಇದ್ದ ಹಳೇ ಕಾಲದ ಒಂದು ಫೋಟೋ ತೆಗೆದು, ಪಂಡಿತರ ಎದುರಿಗೆ ಹಿಡಿದ .... ಪಂಡಿತರು ತದೇಕವಾಗಿ ನಿಟ್ಟಿಸಿ ನೋಡಿದರು.

"ಈ ಫೋಟೋದಲ್ಲಿರುವ ಹೆಂಗಸು, ನನ್ನ ಅಕ್ಕ ಸರಸ್ವತಿ. ಈಗ್ಗೆ ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ನಾಪತ್ತೆಯಾದಳು. ಎಲ್ಲಿ ಹೋದಳು, ಏನಾದಳು ಅಂತ ತಿಳಿಯಲೇ ಇಲ್ಲ."

"ತಿಳಿದುಕೊಳ್ಳುವ ಪ್ರಯತ್ನ ಮಾಡಿರಲಾರಿರಿ ನೀವು, ಅಲ್ವಾ?"

"ನಾನಾಗ ತುಂಬಾ ಚಿಕ್ಕವನು ..... ಅಲ್ಲದೇ ನಮ್ಮ ಮನೆಯಲ್ಲಿ ಏನೇನೋ ದುರಂತಗಳು ನಡೆದುಹೋಯಿತು ...."

"ನನಗೆ ಎಲ್ಲಾ ತಿಳಿದಿದೆ ...." ಪಂಡಿತರು ಮುಗುಳ್ನಗುತ್ತಾ ನುಡಿದಾಗ, ಇವನು ಬೆರಗಾದ.

"ಸರಸ್ವತಿ ನನ್ನ ಧರ್ಮಪತ್ನಿಯಾಗಿದ್ದಳು. ಅವಳು ನನ್ನ ಬಳಿಗೆ ಬಂದಾಗ, ಸುಜಾತ ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿದ್ದಳು."

"ಇದೇ ಊರಿನಲ್ಲಿ ಇದ್ದರೂ, ನಮಗೆ ಏನೂ ತಿಳಿಯಲಿಲ್ಲ." ರಾಮಸ್ವಾಮಿ ತಪ್ಪಿತಸ್ಥನಂತೆ ನುಡಿದಾಗ ಪಂಡಿತರು ಹೇಳಿದರು.

"ಈಗಷ್ಟೇ ಕೆಲವಾರು ವರ್ಷಗಳಿಂದ ನಾನು ಇಲ್ಲಿರಲು ಪ್ರಾರಂಭಿಸಿದ್ದೇನೆ. ಈ ಮುಂಚೆ ಊರೂರು ತಿರುಗುವ ಪಂಡಿತನಾಗಿದ್ದೆ."

"ಈಗ, ನಮ್ಮಕ್ಕ ...... ಇಲ್ಲಿ ಎಂದೂ ಕಾಣಲಿಲ್ಲ."

"ಅವಳೀಗ ಈ ಲೋಕದಲ್ಲಿ ಇಲ್ಲ .... ಪರಲೋಕವಾಸಿಯಾಗಿದ್ದಾಳೆ ...."

"ಇದೆಲ್ಲಾ ಯಾವಾಗ ನಡೆಯಿತು. ಸರಸ್ವತಿ ನಿಮಗೆ ಹೇಗೆ ಸಿಕ್ಕಿದಳು?"

"ಅದೆಲ್ಲಾ ಒಂದು ದೊಡ್ಡ ಕತೆ. ಬದುಕಿರುವವರೆಗೂ, ಮನೆಯವರನ್ನು ಸದಾ ನೆನಪಿಸಿಕೊಳ್ಳುತ್ತಿದ್ದಳು."

"ಒಂದು ಸಲವಾದರೂ, ಮತ್ತೆ ಬಂದು ನಮ್ಮನ್ನು ನೋಡುವ ಪ್ರಯತ್ನ ಪಟ್ಟಿದ್ದರೇ ...."

"ಪಡದೇ ಏನು? ನಾನೇ ಅವಳನ್ನು ಈ ಮಗುವನ್ನು ಕರೆದುಕೊಂಡು ನಿಮ್ಮೂರಿಗೆ ಬಂದಿದ್ದೆ. ಆದರೆ ನೀವುಗಳ್ಯಾರೂ ಅಲ್ಲಿರಲೇ ಇಲ್ಲ." ರಾಮಸ್ವಾಮಿ ತಲೆತಗ್ಗಿಸಿದ. ಕೆಲವು ನಿಮಿಷಗಳ ನಂತರ ಅವನು ಹೊರಡಲು ಎದ್ದು ನಿಂತಾಗ, ಪಂಡಿತರು ಪ್ರಶ್ನಿಸಿದರು.

"ನೀವೀಗ ಎಲ್ಲಿದೀರಿ? ಏನು ಮಾಡಿಕೊಂಡಿದೀರಿ? ಸಂಸಾರಸ್ಥರಾಗಿದೀರೋ ಹೇಗೆ? ನಿಮ್ಮ ವಿಳಾಸವನ್ನು ಬರೆದು ಕೊಡಿ."

"ಸರ್ಕಾರಿ ಕಛೇರಿಯಲ್ಲಿ ಗುಮಾಸ್ತನಾಗಿದೀನಿ. ಹೆಂಡತಿ ತವರಿಗೆ ಬಾಣಂತನಕ್ಕೆ ಹೋಗಿದಾಳೆ. ಹೆಣ್ಣು ಮಗುವಾಗಿದೆ."

"ಒಳ್ಳೇದು, ದೇವರು ಎಲ್ಲರನ್ನೂ ಚೆನ್ನಾಗಿಟ್ಟಿರಲಿ."

"ನಾನಿನ್ನು ಬರಲೇ .... ಹಾಗಾದ್ರೇ ...." ವಿಳಾಸವನ್ನು ಬರೆದು ಕೊಟ್ಟ. "ಆಗಾಗ್ಗೆ

ಬರ್ತೀರಿ ತಾನೇ .... ನಮ್ಮ ಸುಜಾತಂಗೆ ನನ್ನನ್ನು ಬಿಟ್ಟರೆ ಬೇರೆ ಯಾವ ನೆಂಟರೂ ಇರಲಿಲ್ಲ. ಈಗ ಸೋದರ ಮಾವ ಸಿಕ್ಕಿದ್ದೀರಿ .... ಹುಡುಗಿಗೆ ಬಹಳ ಖುಷಿಯಾಗುತ್ತೆ ..."

"ಇನ್ನು ಮದುವೆಯಾದಂತಿಲ್ಲ ....."

"ಯಾಕೋ ಹುಡುಗಿ ಮೊಂಡುತನ ಮಾಡುತ್ತೆ. ನಾನು ಮದುವೆಯಾಗುಲ್ಲ. ಹೀಗೇ ಜನಸೇವೆ ಮಾಡಿಕೊಂಡು ಇರುತ್ತೀನಿ ಅಂತ ಸದಾ ಅದೇ ಮಾತನ್ನಾಡುತ್ತೆ ..."

"ಓ ....."

"ಮದುವೆ ಬಗ್ಗೆ ಯಾಕೋ ಒಳ್ಳೆಯ ಭಾವನೆಗಳಿಲ್ಲ ಅಂತ ಅನ್ನಿಸುತ್ತೆ. ನೀವು ಒಂದು ಸಲ ತಿಳುವಳಿಕೆ ಹೇಳಿ ನೋಡಿ. ನಿಮ್ಮ ಮಾತಿಗೆ ಬೆಲೆ ಕೊಟ್ಟರೂ ಕೊಡಬಹುದು ...."

"ನಾನು ಹೇಗೆ ಹೇಳೋಕಾಗುತ್ತೆ ... ಇದುವರೆಗೂ ಇಲ್ಲದ ಬಾಂಧವ್ಯವನ್ನು ಹೇಳಿಕೊಂಡು ಬಂದ ಮಾತ್ರಕ್ಕೆ ಸಂಬಂಧ ಬೆಳೆದು ಬರುತ್ಯೆ?"

"ಓದ್ದೋರು ಬರೆದೋರು .... ವ್ಯವಹಾರ ತಿಳಿದವರು ನೀವೇ ಹೀಗೆ ಹೇಳಿದರೆ ಹೇಗೆ? ನಮ್ಮ ಸುಜಾತ ಜಾಣೆ. ಆದರೆ ಸ್ವಲ್ಪ ಮೊಂಡು ...."

ಯಾರನ್ನಾದರೂ ನಿಮಗೆ ತಿಳಿಯದಂತೆ ಪ್ರೀತಿಸುತ್ತಿರಬಹುದೇ ಎಂದು ಕೇಳುವ ಮನಸ್ಸಾದರೂ ತಡೆದುಕೊಂಡ. ಅಕ್ಕ ಸರಸ್ವತಿ ಹಾಗೂ ಅವಳ ತಾಯಿ ಸಮಾಜದಲ್ಲಿ ಹೆಸರನ್ನು ಕೆಡಿಸಿಕೊಂಡವರು. ಮಗಳೂ ಹಾಗೇ ಎಂದು ತಾನು ಹೇಳುವುದು ತಪ್ಪು ಎಂದುಕೊಂಡು ಸುಮ್ಮನಾದ. ಅವನ ಮನಸ್ಸನ್ನು ಅರಿತವರಂತೆ ಪಂಡಿತರು ನುಡಿದರು.

"ಏನಾದ್ರೂ ಪ್ರೀತಿ ಗೀತಿ ಅಂತ ಇದ್ದರೆ ನನಗೆ ತಿಳಿಸು ನಾನು ಏನೂ ಅನ್ನುಲ್ಲ ಅಂತ ಸಹ ಹೇಳಿಯಾಯ್ತು. ಆದರೆ ಹಾಗೇನೂ ಇಲ್ಲ ಎಂದು ಖಡಾಖಂಡಿತವಾಗಿ ನುಡಿದುಬಿಟ್ಟಳು."

"ಏನೋ? ಎಲ್ಲೆಲ್ಲಿ ಏನೇನು ಬರೆದಿಟ್ಟಿದಾನೋ ಆ ಬ್ರಹ್ಮ ... ನಿಮಗೆ ಮದುವೆ ಆಗಿಲ್ಲದಿದ್ದರೆ ನಿಮ್ಮನ್ನೇ, ಕೇಳಿಕೊಳ್ಳಬಹುದಾಗಿತ್ತು." ಈ ಮಾತಿಗೆ ರಾಮಸ್ವಾಮಿ ತಬ್ಬಿಬ್ಬಾದ. ಇವಳು ಸಿಗುವ ಮೊದಲು ತನ್ನ ಮದುವೆಯಾದುದು ಒಳ್ಳೆಯದೇ ಆಯಿತು ಎಂದುಕೊಂಡ.

ಅಕ್ಕ ಟೆಂಟ್ ಟಾಕೀಸಿನ ಮಾಲೀಕನ ಸಹವಾಸ ಮಾಡಿದ್ದು ಆ ಕಾರಣಕ್ಕೆ ಅಪ್ಪ ಅವನ ಕೊಲೆ ಮಾಡಿದ್ದು, ಅಕ್ಕ ಮನೆ ಬಿಟ್ಟು ಹೋದದ್ದು ಇದೆಲ್ಲಾ ಒಳ್ಳೆಯ ಲಕ್ಷಣಗಳಲ್ಲ. ಈ ವಿಷಯ ಸುಜಾತಳಿಗೆ ತಿಳಿದಿದೆಯೇ ಅಥವಾ ಇಲ್ಲವೆ? ತಿಳಿದರೆ ಏನನ್ನಿಸಬಹುದು? ಅದೇ ವಿಷಯವನ್ನು ಪಂಡಿತರನ್ನು ಕೇಳಿದ.

"ಸುಜಾತಳಿಗೆ, ನಡೆದ ವಿಷಯಗಳೆಲ್ಲ ತಿಳಿದಿದೆಯೆ?"

"ನಾನಂತೂ ಏನನ್ನೂ ತಿಳಿಸಿಲ್ಲ. ಬಹುಶಃ ಅವಳ ತಾಯಿಯೇ ತಿಳಿಸಿರಬಹುದು .... ಯಾಕೆ? ಇದಕ್ಕೂ ಮದುವೆಗೂ ಏನು ಸಂಬಂಧ?"

"ಹಾಗಲ್ಲ ....."

"ಏನು ಹಾಗಲ್ಲ .... ಮನೆಯವರಾಗಿ ನಿಮಗೇ ಏನೋ ಅಳುಕು. ಜನರು ಇನ್ನೂ ಜಾಗೃತರಾಗಬೇಕು ... ಸಮಯದಲ್ಲಿ ನಾನು ಸರಸ್ವತಿಗೆ ಸಹಾಯ ಮಾಡದಿದ್ದರೆ, ಸರಸ್ವತಿ ಬೀದಿ ಪಾಲಾಗುತ್ತಿದ್ದಳು. ಈ ದಿನ ಸುಜಾತಳಿಗೆ ಪಂಡಿತರ ಮಗಳು ಎಂಬ ಒಂದು ಗೌರವ ಸ್ಥಾನ ಸಿಕ್ಕಿರುವುದು ನನ್ನಿಂದ ತಿಳಿಯಿತೇ ....?" ಹೆಮ್ಮೆಯಿಂದ ಹೇಳಿಕೊಂಡರು.

ಇದ್ದಕ್ಕಿದ್ದಂತೆ ಪಂಡಿತರು ದನಿ ಎತ್ತರಿಸಿ ಮಾತನಾಡಿದಾಗ ರಾಮಸ್ವಾಮಿ ಪೆಚ್ಚಾದ. ಈ ಪಂಡಿತರೇನೋ ಅಕ್ಕನನ್ನು ಉದ್ಧಾರ ಮಾಡಿರಬಹುದು. ಆದರೆ ಎಲ್ಲರೂ ಇವರಂತೆ ಇರಲು ಸಾಧ್ಯವೆ? ಈ ಪಂಡಿತರು ಮಹಾ ಯಾವ ಸಾಚ? ಅಕ್ಕನಂತಹ, ನಡತೆಗೆಟ್ಟವಳಿಗೆ ಸಹಾಯ ಮಾಡಬೇಕಾದರೆ, ಇವರಲ್ಲಿ ಯಾವ ಸ್ವಾರ್ಥತನವಿಲ್ಲವೆಂದು ಹೇಗೆ ಹೇಳುಕ್ಕಾಗುತ್ತೆ? ಯಾಕೋ ಮಾತನ್ನು ಮುಂದುವರೆಸುವುದು ಬೇಡ ಅಂತೆನ್ನಿಸಿತ್ತು. ಅಷ್ಟರಲ್ಲಿ ಯಾರೋ ಪಂಡಿತರನ್ನು ಹುಡುಕಿಕೊಂಡು ಬಂದರು. ಇವನು ಪಂಡಿತರಿಗೆ ಕೈ ಮುಗಿದು ಆಚೆ ಬಂದ. ಯಾಕೋ ಏನೋ ಮನಸ್ಸಿಗೆ ಅಹಿತವಾಗಿತ್ತು. ತಾನಾಗಿಯೇ ಕುತೂಹಲದಿಂದ ಕೇಳಿ ತಿಳಿದುಕೊಂಡ ಸಂಬಂಧ ಈಗ ಭಾರವೆನಿಸತೊಡಗಿತ್ತು. ಶಾಂತಳಿಗೆ ಇದೆಲ್ಲಾ ತಿಳಿದರೆ ನನ್ನ ಬಗ್ಗೆ ಏನನ್ನಿಸಬಹುದು ಅಂತಂದುಕೊಂಡಾಗ, ಇನ್ನು ಪಂಡಿತರ ಮನೆಗೆ ಹೋಗಿ ಬರುವುದನ್ನು ನಿಲ್ಲಿಸಬೇಕು ಎಂದು ತನಗೆ ತಾನೇ ಹೇಳಿಕೊಂಡು, ಬೀದಿಗೆ ಇಳಿದ.

ಇದೇ ಸಂದರ್ಭದಲ್ಲಿ ಸಹೋದ್ಯೋಗಿಯೊಬ್ಬ, ಈ ಮನೆ ಬಾಡಿಗೆಗೆ ಇರುವ ವಿಷಯ ತಿಳಿಸಿದ. ರಾಮಸ್ವಾಮಿ ಮನೆಯನ್ನು ನೋಡಿ ತೃಪ್ತಿಗೊಂಡ. ಮಗಳು ಬೆಳೆದು ದೊಡ್ಡವಳಾದಾಗ, ಈ ಮನೆಯಲ್ಲಿ ಸೌಲಭ್ಯಗಳು ಚೆನ್ನಾಗಿವೆ ಅಂತೆನಿಸಿತ್ತು. ಅಡ್ವಾನ್ಸ್ ಹಣವನ್ನು ಕೊಟ್ಟು ಮುಂದಿನ ತಿಂಗಳೇ ಮನೆಗೆ ಬರುವುದಾಗಿ ತಿಳಿಸಿ ಬಂದಿದ್ದ. ಒಂದೊಂದಾಗಿ ಮನೆಯ ಸಾಮಾನು ಸರಂಜಾಮುಗಳನ್ನು ಮೂಟೆ ಕಟ್ಟಲಾರಂಭಿಸಿದ್ದ. ಮನೆಯ ಅಟ್ಟದ ಮೇಲಿದ್ದ, ಗೋಣೀತಾಟಿನೊಳಗೆ ಕಟ್ಟಿಟ್ಟಿದ್ದ. ಹಳೆಯ ಪಾತ್ರೆ ಪಡಗಗಳ ನಡುವೆ, ತಾಯಿಯ, ಸರಸ್ವತಿಯ ನೆನಪುಗಳು ತೂರಿ ಬಂದವು. ಉಸಿರು ಭಾರವಾಯಿತು.

"ಅಕ್ಕ ಏಕೆ ಹಾಗೆ ಮಾಡಿದಳು? ಅಪ್ಪ ಎಷ್ಟು ನೊಂದಿರಬೇಡ. ಸಿಟ್ಟಿನ ಕೈಗೆ ದಾಸನಾಗಿ ಕೊಲೆಗಾರನಾಗುವಷ್ಟು ಮಟ್ಟಕ್ಕೆ ಇಳಿಯುವುದೆಂದರೇ .....? ಈ ಅಕ್ಕನ ಮಗಳು ಇವಳು ಹೇಗೋ ... ಪಂಡಿತರೇನೋ ಒಳ್ಳೆಯವರಂತೆ ಕಾಣುತ್ತಾರೆ .... ಸಾಕಿ ಸಲುಹಿದ ಪಂಡಿತರ ಒಳ್ಳೆಯ ನಡವಳಿಕೆಯನ್ನು ಬೆಳೆಸಿಕೊಂಡಿದ್ದಾಳೋ .... ಅಥವಾ ಮೈಯಲ್ಲಿ ಹರಿಯುತ್ತಿರುವ ಆ ರಕ್ತದ ಗುಣಗಳನ್ನು ಹಂಚಿಕೊಂಡಿದ್ದಾಳೋ ....? ತಾನೇಕೆ ಹೋಗಿ ಕೇಳಿದೆನೋ .....? ಅವಳಿಗೆ ನಾನು ಸೋದರಮಾವ. ಆದರೆ ಅವಳ ಅಪ್ಪ ... ಅವನ್ಯಾರೆಂದು ನನಗೆ ತಿಳಿಯದು. ತಿಳಿದುಕೊಳ್ಳುವ ಕುತೂಹಲವೂ ಇಲ್ಲ. ಅವಳು ಕೇವಲ ಪಂಡಿತರ ಮಗಳೆಂದೇ ತಿಳಿದಿದ್ದರೆ ಚೆನ್ನಾಗಿತ್ತೆನಿಸಿತ್ತು.

* * *

## - - 11 - -

ರಾತ್ರಿ ಹತ್ತು ಹತ್ತೂವರೆಯ ಸಮಯ. ಇದ್ದಕ್ಕಿದ್ದಂತೆ ಕರೆಂಟು ಹೋಗಿ, ಅಂಧಕಾರ ಕವಿದಾಗ, ಏನೂ ಕಟ್ಟಿ ಬಿಚ್ಚಿ ಮಾಡಲು ಸಾಧ್ಯವಿಲ್ಲವೆಂದು ಕೊಂಡು, ಹೊರಬಾಗಿಲ ಬಳಿ ಬಂದ.

ಪಕ್ಕದ ಮನೆಯ ಪಾರ್ವತಮ್ಮನ ದನಿ ಕೇಳಿಸಿತು.

"ಇದೇ .... ಇದೇ ಪಕ್ಕದ್ದೇ ಮನೆ ....." ರಾಮಸ್ವಾಮಿ ನೋಡಿ ನಿಮ್ಮನ್ನು ಕೇಳಿಕೊಂಡು ಯಾರೋ ಹೆಂಗಸು ಬಂದಿದ್ದಾರೆ ..." ಪಾರ್ವತಮ್ಮ ಇವನನ್ನು ಕುರಿತು ಹೇಳಿದಾಗ, ಇವನಿಗೆ ದಿಗಿಲಾಗಿತ್ತು. ಆ ಹೆಂಗಸು, ನಿಧಾನವಾಗಿ ಇವನ ಮನೆಯ

ಬಾಗಿಲ ಬಳಿಗೆ ಬಂದಳು. ಇವನಿಗೆ ತಕ್ಷಣಕ್ಕೆ ಗುರುತು ಸಿಗಲಿಲ್ಲ.

"ಯಾರು ಬೇಕಾಗಿತ್ತು?" ಧ್ವನಿ ಉಡುಗಿ ಹೋಗಿತ್ತು.

"ನೀವೇ ..... ಬೇಕಾಗಿತ್ತು ...... ನಾನು ಸುಜಾತಾ ...." ಎಂದಳು ಆ ಹೆಂಗಸು.

"ಓ ... ನೀನಾ? ಬಾ ಒಳಗೆ ... ಇದ್ದಕ್ಕಿದ್ದಂತೆ ಕರೆಂಟು ಹೋಯಿತು. ಒಳಗೆ ಶೆಕೆ ... ಮೋಂಬತ್ತಿ ಹಚ್ಚಿದ್ದೀನಿ ... ಬಾ ...." ಅವನ ಹಿಂದೆ ಸುಜಾತಾಳು ಒಳ ಬಂದಳು. ಹಿಂದಿನಿಂದ ಪಾರ್ವತಮ್ಮನೂ ಬಂದಿದ್ದರು.

"ಕರೆಂಟೇ ಇಲ್ವಲ್ಲಪ್ಪಾ ... ಅತಿಥಿಗಳು ಬೇರೆ ಬಂದಿದ್ದಾರೆ. ಒಬ್ಬಂಟಿಗ. ಮನೇಲಿ ಹೆಂಡತೀನೂ ಇಲ್ಲ. ಇವರನ್ನ ಈ ರಾತ್ರಿ ನಮ್ಮ ಮನೆಗೇ ಕಳಿಸಿ ಬಿಡು. ನೀವಿಬ್ಬರೂ ಊಟಕ್ಕೆ ಅಲ್ಲಿಗೇ ಬಂದು ಬಿಡಿ ...."

"ನನ್ನ ಊಟವಾಯ್ತು ... ನೀನು ಊಟ ಮಾಡ್ತೀಯಾ?" ಸುಜಾತಳೆಡೆ ತಿರುಗಿ ಕೇಳಿದ.

"ಇಲ್ಲ. ನಂಗೆ ಹಸಿವಿಲ್ಲ .... ನಾನು ಆದಷ್ಟು ಬೇಗ ಮನೆಗೆ ಹೋಗಬೇಕು." ಪಾರ್ವತಮ್ಮ ಹೊರಟು ಹೋದರು.

"ಈ ಕತ್ತಲೇಲಿ ಯಾಕೆ ಬರೋಕೆ ಹೋದೆ ಸುಜಾತಾ? ಬೆಳಿಗ್ಗೆ ಬಂದಿದ್ದರೆ ಆಗ್ತಿರಲಿಲ್ವಾ? ನೋಡಿದೋರು ಏನಂದುಕೊಳ್ತಾರೆ?"

"ಹೊರಗಿನೋರಿಗೆ ಹೆದರ್ತೀರಾ ಮಾವಾ?"

"ನೋಡು. ಇದುವರೆಗೂ ನಾವು ಅಪರಿಚಿತರೇ. ಯಾವ ಸಂಬಂಧವೂ ಇರಲಿಲ್ಲ. ಯಾವ ಸ್ನೇಹವೂ ಇರಲಿಲ್ಲ."

"ಯಾಕೆ? ಹೊಸದಾಗಿ ಆದ ಪರಿಚಯಕ್ಕೆ ಸಂಬಂಧವಿಲ್ವಾ?"

"ಹಾಗಲ್ಲ. ಇದುವರೆಗೂ, ನಾನೆಂದೂ, ನನ್ನ ಅಕ್ಕನ ಬಗ್ಗೆ ಯಾರಿಗೂ ತಿಳಿಸಿಲ್ಲ. ದಿಢೀರನೇ ನೀನು ನನ್ನ ಅಕ್ಕನ ಮಗಳು ಅಂತ ಹೇಳಿದ್ರೆ ಜನ ನಂಬಿ ಬಿಡ್ತಾರಾ?"

"ಓ ... ನಮ್ಮಮ್ಮನ್ನೇ ಮರೆತು ಬಿಟ್ಟಿದ್ದ ನೀವು, ಮತ್ತೇಕೆ ನನ್ನನ್ನು ಗುರುತಿಸಿದ್ರಿ?"

"ನಿನ್ನನ್ನ ನೋಡಿದಾಕ್ಷಣ, ನನ್ನ ಅಕ್ಕನ ರೂಪವೇ ನಿನಗಿದೆ ಅಂತೆನ್ನಿಸಿತ್ತು. ಕುತೂಹಲದಿಂದ ಕೇಳಿದೆ. ಅದು ನಿಜವಾಯ್ತು."

"ಈಗ ಪಶ್ಚಾತ್ತಾಪ ಪಡ್ತಿದೀರಾ ಮಾವಾ?"

ರಾಮಸ್ವಾಮಿ ಗೊಂದಲಕ್ಕೊಳಗಾದ. ಕತ್ತಲೆಯಲ್ಲಿ ಅವನ ಮುಖದ ಬದಲಾವಣೆಗಳು, ಅವಳಿಗೆ ಗೋಚರಿಸಲಿಲ್ಲ. ಆದರೂ ನುಡಿದಳು.

"ಕಡಿದು ಹೋದ, ಬೇಡವಾಗಿದ್ದ ಸಂಬಂಧವನ್ನು ಮತ್ತೆ ಬೆಳಕಿಗೆ ತರುವ ಆಸೆ ನಿಮಗೆ ಖಂಡಿತಾ ಇಲ್ಲ. ನನ್ನ ಪಾಡಿಗೆ ನಾನು ಇದ್ದೆ. ನನ್ನ ಸ್ವಂತ ತಂದೆ ಯಾರೋ ನನಗೆ ತಿಳಿಯದು. ಆದರೆ ಪಂಡಿತರೆಂದೂ ನನ್ನೊಡನೆ ಬೇಸರವಾಗುವಂತೆ ಮಾತನಾಡಿರಲಿಲ್ಲ. ನೀವು ನನ್ನ ಸ್ವಂತ ಸೋದರಮಾವ. ಸತ್ತು ಸ್ವರ್ಗದಲ್ಲಿರುವ ನನ್ನ ತಾಯಿಯ ಸ್ವಂತ ತಮ್ಮ .... ನಿಮಗೆ ನನ್ನ ಸಂಬಂಧ ಬೇಡವಾಗಿರಬಹುದು. ಆದರೆ ಅಮ್ಮ ಬದುಕಿದ್ದಾಗ ನಿಮ್ಮ ಬಗ್ಗೆ ಹೇಳುತ್ತಿದ್ದ ಆತ್ಮೀಯವಾದ ಮಾತುಗಳು ಇನ್ನು ನನ್ನ ಕಿವಿಯಲ್ಲಿ ಗುಂಯ್‌ಗುಟ್ಟುತ್ತಿದೆ ... ಅದೇ ಒಂದು ಸಂಭ್ರಮದಲ್ಲಿ ನಾನು ನಿಮ್ಮನ್ನು ನೋಡಿ ಮಾತನಾಡಲು ಬಂದೆ. ಪಂಡಿತರು ಹೇಳಿದ ಕೂಡಲೇ ಓಡೋಡಿ ಬಂದಿದ್ದೇನೆ. ನೀವು ನನಗೆ ನಿರಾಸೆ ಮಾಡಿದಿರಿ" ರೋಷದಿಂದ ಬುಸುಗುಟ್ಟುತ್ತಿದ್ದಳು.

"ಹಾಗಲ್ಲ ಸುಜಾತಾ .. ನೀನು ನನ್ನನ್ನು ತಪ್ಪು ತಿಳಿದುಕೊಂಡಿದೀಯ. ನಾನೇನಂದೆ

ಈಗ? ಕ್ರಮೇಣ ಎಲ್ಲಾ ಸರಿ ಹೋಗಬಹುದು."

"ಏನೂ ಸರಿ ಹೋಗುಲ್ಲ. ನಿಮ್ಮ ಮಾತಿನ ವರಸೆಯೇ ನಿಮ್ಮ ಅಂತರಂಗವನ್ನು ತಿಳಿಸುತ್ತೆ. ಒಮ್ಮೆ ನಿನ್ನ ಮಾವನನ್ನು ನೋಡಲೇ ಬೇಕೂಂತ ಅಮ್ಮ ತಿಳಿಸಿದ್ದಳು. ಅದನ್ನು ಮಾಡಿದ್ದಾಯ್ತು. ಇನ್ನು ಇಲ್ಲಿ ನನಗೇನೂ ಕೆಲಸವಿಲ್ಲ. ನಾನು ಹೊರಡ್ತೀನಿ" ಎದ್ದವಳನ್ನು ರಾಮಸ್ವಾಮಿ ತಡೆದ.

"ಈ ಕತ್ತಲೆಯಲ್ಲಿ ನೀನು ಎಲ್ಲಿಗೂ ಹೋಗಕೂಡದು. ಕರೆಂಟು ಬಂದ ಮೇಲೆ, ನಾನೇ ನಿನ್ನನ್ನು ಬಿಟ್ಟು ಬರ್ತೀನಿ"

"ನನಗೇನೂ ಭಯವಿಲ್ಲ ಮಾವಾ ...."

"ನಿನಗೆ ಧೈರ್ಯವಿರಬಹುದು ; ಆದರೆ ನನಗೆ ಧೈರ್ಯವಿಲ್ಲ. ಕತ್ತಲೆಯಲ್ಲಿ ಪುಂಡರು ಪೋಕರಿಗಳು ಅಲೆಯುತ್ತಿರುತ್ತಾರೆ. ಒಬ್ಬಂಟಿ ಹೆಂಗಸು ಸಿಕ್ಕರೆ ಸುಮ್ಮನಿರೋ ಪೈಕಿಯಲ್ಲ ಅವರುಗಳು."

"ಏನ್ಮಾಡ್ತಾರೆ? ಅವರುಗಳಿಗೆಲ್ಲ ಹೆದರೋಳು ನಾನಲ್ಲ .... ನಾನು ಪಂಡಿತರ ಮಗಳು. ನಾನೇನು ಹೇಡಿಯಲ್ಲ, ಹೆದರಿ ಒಳಗೇ ಅಡಗಿ ಕೂತಿರೋಕೆ."

"ವಿಪರೀತ ಮಾತನಾಡ್ತೀಯ ಸುಜಾತಾ ನೀನು. ಹೋಗಲಿ, ಎದ್ದು ಕೈ ಕಾಲು ತೊಳೆದುಕೋ. ಸ್ವಲ್ಪ ಅನ್ನ ಮಿಕ್ಕಿದೆ. ಮಜ್ಜಿಗೆ ಹಾಕಿ ಕಲೆಸಿ ಕೊಡ್ತೀನಿ. ಸ್ವಲ್ಪ ಹೊಟ್ಟೆ ತಣ್ಣಗಾಗುತ್ತೆ. ಅಷ್ಟರಲ್ಲಿ ಕರೆಂಟೂ ಬರಬಹುದು."

"ಬರದೇ ಇದ್ದರೇ ...."

"ಬರದಿದ್ದರೆ, ಈ ರಾತ್ರಿ ಇಲ್ಲೇ ಇದ್ದು ಬಿಡು. ಬೆಳಗ್ಗೆ ಎದ್ದು ಹೋದರಾಯ್ತು ....." ಎನ್ನುತ್ತಾ ತಾನು ಎದ್ದು ಅಡಿಗೆ ಮನೆಗೆ ಬಂದ.

"ಮಾವಾ ಬಚ್ಚಲು ಮನೆಯೆಲ್ಲಿ? ಎಂದು ಕೇಳಿದವಳಿಗೆ, ಮೋಂಬತ್ತಿ ಬೆಳಕಿನಲ್ಲಿ ಬಚ್ಚಲು ಮನೆ ತೋರಿದ. ಅವಳು ಕೈಕಾಲು ತೊಳೆದು ಬರುವಷ್ಟರಲ್ಲಿ ಇವನು ಮಜ್ಜಿಗೆ ಅನ್ನವನ್ನು ಕಲೆಸಿ, ಉಪ್ಪಿನಕಾಯಿಯನ್ನು ಬಡಿಸಿ, ಒಂದು ತಟ್ಟೆಗೆ ಹಾಕಿ, ಚಮಚದೊಂದಿಗೆ ತಂದು ಅವಳ ಕೈಗೆ ಕೊಟ್ಟ.

ಮಂದವಾದ ಮೋಂಬತ್ತಿಯ ಬೆಳಕಿನಲ್ಲಿ ಚಮಚದೊಂದಿಗೆ ತುತ್ತನ್ನೆತ್ತಿ ತಿನ್ನುತ್ತಿದ್ದವಳನ್ನೇ ಗಮನಿಸಿದ. ಅದೇ ಮುಖ. ಅಕ್ಕನ ತದ್ರೂಪು. ಆದರೆ ಗುಣದಲ್ಲಿ ಸ್ವಲ್ಪ ವ್ಯತ್ಯಾಸ. ಪಂಡಿತರು ಹೇಳಿದ್ದ ಮಾತು ನೆನಪಾಗಿತ್ತು. "ಸ್ವಭಾವದಲ್ಲಿ ಸ್ವಲ್ಪ ಮೊಂಡು" ಎಂದಿದ್ದರು. ಇದ್ದಕ್ಕಿದ್ದಂತೆ ಪ್ರಶ್ನಿಸಿದ.

"ನೀನ್ಯಾಕೆ ಇನ್ನು ಮದುವೆಯಾಗಿಲ್ಲ?"

"ನೀವು ನನ್ನನ್ನು ಮದುವೆಯಾಗ್ತೀರಾ?" ಅವಳು ನೇರವಾಗಿ ಪ್ರಶ್ನಿಸಿದ್ದಳು. ರಾಮಸ್ವಾಮಿ ನಕ್ಕ.

"ನನಗೆ ಮದುವೆಯಾಗಿ ನಾಲ್ಕೈದು ವರ್ಷಗಳಾಗಿದೆ. ಒಬ್ಬ ಮಗಳೂ ಸಹ ಹುಟ್ಟಿದಾಳೆ .... ಯಾಕೆ ಪಂಡಿತರು ಹೇಳಲಿಲ್ವಾ?"

"ಓ .... ಬಿಡಿ. ಅಲ್ಲದೇ ಪಂಡಿತರ ಹತ್ತಿರ ಮಾತನ್ನಾಡಿ ಕೇಳಿ ತಿಳಿದುಕೊಳ್ಳುವಷ್ಟು ಸಮಯ ಸಹ ಇರಲಿಲ್ಲ. ನಿಮ್ಮ ವಿಷಯ ತಿಳಿದ ಕೂಡಲೇ ವಿಳಾಸ ಕಿತ್ತುಕೊಂಡು ಓಡಿ ಬಂದೆ." ಅವನಿಗೀಗ ಏನು ಹೇಳಬೇಕೆಂದು ತಿಳಿಯದಾಯ್ತು. ಒಂದು ಗಳಿಗೆ ಸುಮ್ಮನಾದ

"ನಾನು ಹೀಗೆ ಕೇಳಿದೆ ಅಂತ ನಿಮಗೆ ಬೇಜಾರೇನೂ ಇಲ್ಲ ತಾನೇ ....."

"ಛೆ... ಛೆ ... ಬೇಜಾರು ಯಾಕೆ? ಬಹುಶಃ ಐದಾರು ವರ್ಷಗಳ ಮುಂಚೆಯೇ ನೀನು ಪತ್ತೆಯಾಗಿದ್ದಿದ್ದರೆ, ನಿನ್ನನ್ನೇ ಮದುವೆಯಾಗ್ತಿದ್ದನೋ ಏನೋ ...."
"ಸುಮ್ನೇ ಢೋಂಗಿ ಬಿಡಬೇಡಿ ಮಾವಾ .... ಕತ್ತೆತ್ತಿ ನನ್ನ ಕಡೆ ನೋಡಿ ಮಾತನಾಡುಕ್ಕೆ ಆಗ್ತಿಲ್ಲ ನಿಮ್ಮ ಕೈಲಿ .... ಇನ್ನು ನನ್ನನ್ನು ಮದುವೆ ಆಗ್ತಿದ್ರಾ? ಖಂಡಿತಾ ಸುಳ್ಳು ...." ನಕ್ಕಳು.
ಇವಳೊಡನೆ ಮಾತನಾಡುವುದೇ ಕಷ್ಟ ಅಂತೆನಿಸಿತ್ತು. ನಗುವಾಗ ಅತಿ ಚೆನ್ನಾಗಿ ಕಾಣ್ತಾಳೆ. ನನ್ನ ಹೆಂಡತಿ ಶಾಂತಳಿಗಿಂತ ಚೆನ್ನಾಗಿದಾಳೆ ಎಂದೆನಿಸಿತ್ತು ..... ಮೈಯಲ್ಲಿ ಛಳಕು ಹೊಡೆದಂತಾಗಿತ್ತು. ಮನಸ್ಸು ಎತ್ತೆತ್ತಲೋ ವಾಲಾಡಿತು. ಹೆಚ್ಚು ಕಡಿಮೆ ನನ್ನ ಹೆಂಡತಿಯ ವಯಸ್ಸಿನವಳೇ ... ಇನ್ನು ಮದುವೆಯಾಗಿಲ್ಲ .... ಸ್ವಂತ ಅಕ್ಕನ ಮಗಳೇ ಒಲಿಸಿಕೊಳ್ಳುವುದು ಕಷ್ಟವಾಗಲಾರದು. ಅಂತೆನ್ನಿಸಿ, ಅವಳ ಕಡೆ ಮತ್ತೆ ಮತ್ತೆ ನೋಡಿದ.
"ಏನ್ಮಾವಾ ಹೀಗ್ನೋಡ್ತಿದೀರಿ? ನಿಮ್ಮ ಮನಸ್ನಲ್ಲಿ ಏನು ನಡೀತಿದೆ ಅಂತ ನಾನು ಹೇಳ್ಲಾ?" ಅವಳು ಕಿಲಕಿಲನೆ ನಗುತ್ತಾ ನುಡಿದಾಗ ಇವನು ಬೆವೆತ.
ಭಲೇ ಘಾಟಿ ಹೆಣ್ಣು ... ಬಹುಶಃ ಅಕ್ಕನಂತೆಯೇ ನಡತೆ ಇರಬಹುದು. ಹಾಗೇನಾದ್ರೂ ಇದ್ದರೆ .... ತಾನೀಗ ಏನು ಮಾಡಬೇಕೂಂತ ತಿಳಿಯದೇ ಒದ್ದಾಡಿದ, ಎಷ್ಟು ಹೊತ್ತಾದ್ರೂ ಕರೆಂಟು ಬರಲಿಲ್ಲ.
"ಕರೆಂಟೂ ಬರಲಿಲ್ಲವಲ್ಲ ಮಾವಾ ...... ಈಗೇನು ಮಾಡ್ಲೀ"
"ನೀನು ಇಷ್ಟು ಹೊತ್ನಲ್ಲಿ ಬಂದದ್ದೇ ತಪ್ಪು" ಎಂದು ಬೈಯ ಬೇಕೆಂದುಕೊಂಡರೂ ಬೈಯಲಾಗಲಿಲ್ಲ. ನೋಡು ರಸ್ತೆ ದೀಪಗಳು ಸಹ ಇಲ್ಲ. ಈ ರಾತ್ರಿ ಇಲ್ಲೇ ಇದ್ದು ಬಿಡು .... ನೀನು ಅಲ್ಲಿ ಒಳಗೆ ರೂಮಿನಲ್ಲಿ ಮಲಕ್ಕೋ .... ನಾನು ಇಲ್ಲಿ ಹಾಲಿನಲ್ಲಿ ಮಲಗ್ತೀನಿ ...."
"ಈ ಸಾಮಾನು ಸರಂಜಾಮು ಎಲ್ಲಾ ಯಾಕೆ ಕಿತ್ತಾಕಿದೀರಿ."
"ನಾನು ಮುಂದಿನ ತಿಂಗಳು ಮನೆ ಬದಲಾಯಿಸ್ತಾ ಇದೀನಿ. ಒಂದೊಂದಾಗಿ ಕಟ್ತಾ ಇದೀನಿ."
"ನಾನು ಸಹಾಯ ಮಾಡ್ತೀನಿ. ನನಗೂ ಕೆಲಸ ಹೇಳಿ ....."
"ಈ ಕತ್ತಲೇಲಿ ಏನೂ ಆಗುಲ್ಲ. ನೀನು ಬೇರೆ ಬಸ್ನಲ್ಲಿ ಬಂದು ಪ್ರಯಾಣದ ಆಯಾಸ ಆಗಿರುತ್ತೆ. ಮಲಕ್ಕೋ ....."
ಇಬ್ಬರೂ ಹಾಲಿನಲ್ಲೇ ದೂರ ದೂರ ಹಾಸಿಗೆ ಹಾಸಿಕೊಂಡು ಮಲಗಿದರು. "ಮಾವಾ, ಅಮ್ಮನ ಬಗ್ಗೆ ನೀವು ಕೇಳಲೇ ಇಲ್ಲವಲ್ಲ... ಅಮ್ಮ ಅಷ್ಟು ಕೆಟ್ಟೋಳಾಗಿದ್ಲಾ?" ರಾಮಸ್ವಾಮಿ ಬೆಚ್ಚಿದ. ಅವನು ಬೇರೇನನ್ನೋ ಯೋಚಿಸುತ್ತಿದ್ದ. ಕೈಗೆಟುಕುವಷ್ಟು ದೂರದಲ್ಲಿ ಒಬ್ಬ ಹೆಣ್ಣು ಮಲಗಿದ್ದಾಳೆ. ಶಾಂತ ಮನೆಯಲ್ಲಿದ್ದಷ್ಟು ದಿನವೂ ಒಂದು ದಿನವೂ ಅವಳಿಂದ ದೂರ ಮಲಗಿದವನಲ್ಲ. ಈಗ ಈ ನಡು ರಾತ್ರಿಯಲ್ಲಿ ಈ ಕತ್ತಲೆಯಲ್ಲಿ ಇವಳನ್ನು ತನ್ನವಳನ್ನಾಗಿ ಮಾಡಿಕೊಳ್ಳುವುದು ಕಷ್ಟವೇನಲ್ಲ ಅಂತನ್ನಿಸಿದರೂ, ಅವನಿಂದ ಚಲಿಸಿರಲಾಗಿರಲಿಲ್ಲ. ಈಗ ಅವಳ ಮಾತಿಗೆ ಉತ್ತರಿಸಿದ.
"ನಿನ್ನ ಅಮ್ಮ ಒಳ್ಳೆಯವಳೋ ಕೆಟ್ಟವಳೋ ನನಗೆ ತಿಳಿಯದು. ಆದರೆ ಅವಳು ಮಾಡಿದ್ದಂತೂ ತಪ್ಪು. ಒಬ್ಬ ಸಂಪ್ರದಾಯಸ್ಥರ ಮನೆಯಲ್ಲಿ ಹುಟ್ಟಿ, ಮನೆಗೆ ಅವಮಾನವಾಗುವಂತಹ ಕೆಲಸವನ್ನು ಅವಳು ಮಾಡಬಾರದಾಗಿತ್ತು."
"ಇದರಲ್ಲಿ ಅಮ್ಮನ ತಪ್ಪೇನು? ಅಮ್ಮನ ಅಮ್ಮನೂ ಅದೇ ತಪ್ಪನ್ನು

ಮಾಡಿದ್ದಳಲ್ಲ. ಅಮ್ಮನ ಮೇಲೆ, ಅಜ್ಜನ ನಿಗವಿರಬೇಕಾಗಿತ್ತು. ನಿಮ್ಮ ತಾಯಿ ಎಷ್ಟಾಗಲೀ ಮಲತಾಯಿ, ಮಲಮಗಳ ಬಗ್ಗೆ ಚಿಂತೆ ಯಾಕಿರುತ್ತೆ?"

"ಸುಜಾತಾ ....." ಕೂಗಿದ. ನಮ್ಮಮ್ಮ ಅಂಥೋಳಲ್ಲ. ಅವಳು ನಮ್ಮಿಬ್ಬರನ್ನು ತಾರತಮ್ಯವಿಲ್ಲದೇ ಬೆಳೆಸಿದಳು. ಅವಿವೇಕ ನಡೆದ ನಂತರವೂ ನಿಮ್ಮಮ್ಮನಿಗೆ ಬುದ್ಧಿ ಹೇಳಿದಳು ...."

"ಆಗ ನಮ್ಮಮ್ಮ ನಿಮ್ಮಮ್ಮನ ಮಾತನ್ನು ಕೇಳಿದ್ದರೇ, ನಾನು ಈ ಭೂಮಿಯ ಮೇಲೆ ಹುಟ್ಟುತ್ತಲೇ ಇರುತ್ತಿರಲಿಲ್ಲ. ಅಲ್ವಾ ಮಾವಾ?" ಅವಳು ಮತ್ತೆ ಕಿಲಕಿಲನೆ ನಕ್ಕಾಗ, ಎದ್ದು ಅವಳ ಕೆನ್ನಗೆ ಎರಡು ಭಾರಿಸುವಷ್ಟು ಕೋಪ ಬಂದಿತ್ತು. ತಡೆದುಕೊಂಡ.

"ಅಮ್ಮ ಎಂಥೋಳು ಅಂತ ನೀವು ಹೇಳಲೇ ಇಲ್ಲವಲ್ಲ ....."

"ನಂಗೆ ಸರಿಯಾಗಿ ಗೊತ್ತಿಲ್ಲಮ್ಮ ...... ನನಗೂ ಸಹ ಚಿಕ್ಕವಯಸ್ಸು. ನಾನು ಅಕ್ಕನಿಗಿಂತ ದೊಡ್ಡವನಾಗಿದ್ದಿದ್ರೆ ... ಬಹುಶಃ ಈ ಘಟನೆಗಳು ನಡೆಯುತ್ತಿರಲಿಲ್ಲವೇನೋ ....?"

"ಅಮ್ಮಂಗೆ ಆಮೇಲೆ ಪಶ್ಚಾತ್ತಾಪವಾಗಿತ್ತು. ತನ್ನಿಂದ ಏನೇನೆಲ್ಲಾ ನಡೆಯಿತಲ್ಲ ಎಂದು ಹೀನಾಯವಾಗಿತ್ತು. ಆಗ ಹೇಗೋ ಈ ಪಂಡಿತರ ಪರಿಚಯವಾಯಿತಂತೆ. ಪಂಡಿತರ ಹಿರಿಯ ಹೆಂಡತಿ ಅನಾರೋಗ್ಯದಿಂದ ನರಳುತ್ತಿದ್ದಳಂತೆ .... ಅವರ ಅನುಕೂಲಕ್ಕಾಗಿ, ಅಂದರೆ ಅಡಿಗೆ ಕೆಲಸ ಮನೆ ಕೆಲಸಕ್ಕಾಗಿ ಅಮ್ಮನನ್ನು ಗೊತ್ತು ಮಾಡಿಕೊಂಡರಂತೆ. ಆಮೇಲೆ ಕೆಲ ತಿಂಗಳ ನಂತರ, ಅಮ್ಮನ ವಿಚಾರ ತಿಳಿದ ಆಕೆ, ಪಂಡಿತರ ಮೇಲೇ ಅನುಮಾನ ಪಟ್ಟರಂತೆ. ಆದರೆ ಪಂಡಿತರು, ತಮ್ಮ ಸ್ವಂತ ಮಗನ ತಲೆಯ ಮೇಲೆ ಕೈ ಇಟ್ಟು ಪ್ರಮಾಣ ಮಾಡಿ, ತಮ್ಮಿಂದ ಅಂಥದ್ದೇನೂ ಅನುಚಿತ ನಡೆದಿಲ್ಲ ಎಂದರಂತೆ.

ಪಂಡಿತರ ಮಾತನ್ನು ನಂಬಿದ ಆಕೆ, ಪಂಡಿತರಿಗೆ ಒತ್ತಾಯ ಮಾಡಿ, ಅಮ್ಮನನ್ನು ಮದುವೆಯಾಗುವಂತೆ ಬಲವಂತ ಮಾಡಿದರಂತೆ. ಅಮ್ಮನನ್ನು ಒಪ್ಪಿಸಿ, ತಾನೇ, ನಿಂತು ಇಬ್ಬರ ಮದುವೆ ನೆರವೇರಿಸಿದಳಂತೆ. ಆ ನಂತರವೂ ಇಬ್ಬರೂ ಒಟ್ಟಿಗೇ ಒಂದೇ ಮನೆಯಲ್ಲಿ ಎಷ್ಟೋ ವರ್ಷಗಳು ಜತೆಯಲ್ಲಿಯೇ ಇದ್ದರಂತೆ. ಆಮೇಲೆ ನಡೆದದ್ದೆಲ್ಲಾ ಆ ಪಂಡಿತರ ಮಗನಿಂದ. ಅಪ್ಪನೊಡನೆ ಜಗಳವಾಡಿ ಮನೆ ಬಿಟ್ಟು ಹೋದ... ನನ್ನ ಬಗ್ಗೆ ಅವನಿಗೆ ವಿಶ್ವಾಸವೇ ಇರಲಿಲ್ಲ. ಗಂಡಸರೇ ಇಷ್ಟು. ನಿಷ್ಕರುಣಿಗಳು.

ಈಗ ರಾಮಸ್ವಾಮಿ ನಕ್ಕ, "ಹಾಗೆನ್ನ ಬೇಡ ಸುಜಾತಾ .... ಪಂಡಿತರು ನಿಷ್ಕರುಣಿಗಳಲ್ಲ. ನಿನ್ನ ತಾಯಿಗೆ ಒಂದು ನೆಲೆಯನ್ನು ಒದಗಿಸಿದವರು ಅವರೇ ತಾನೇ .... ಇಲ್ಲದಿದ್ದರೆ ನೀನು ಪಂಡಿತರ ಮಗಳಾಗಿರುತ್ತಿರಲಿಲ್ಲ. ಪಂಡಿತರಂಥವರು ಅಪರೂಪ."

"ಹೌದು ಮಾವಾ .... ಪಂಡಿತರು ತುಂಬಾ ಒಳ್ಳೆಯವರು. ನಾನಂತೂ, ಅವರಿಗೆ ತುಂಬಾ ಕೃತಜ್ಞಳು."

"ಹಾಗಾದರೆ ನೀನು ಪಂಡಿತರ ಮಾತನ್ನೇಕೆ ಕೇಳಬಾರದು? ಮದುವೆಯಾಗುಲ್ಲ ಅಂತ ಮೊಂಡುತನ ಮಾಡ್ತೀಯಂತಲ್ಲ ...."

"ಏನೋ .... ಮದುವೆ ಅಂದರೆ ಒಳ್ಳೆಯ ಭಾವನೆಗಳೇ ಬೆಳೆಯಲಿಲ್ಲ ನನಗೆ. ಅಲ್ಲದೇ ಈಗ ಪಂಡಿತರು ಒಂಟಿ. ಅವರನ್ನು ಬಿಟ್ಟು ಬೇರೆಯೊಬ್ಬರ ಮನೆಗೆ ಹೋಗುವ ಮನಸ್ಸು ಬರಲಿಲ್ಲ."

"ಆ ಆಸ್ತಿ ಅವರ ಮಗನಿಗಿರಬೇಕಾಗಿತ್ತು ..... ನೀನೇಕೆ ಒದ್ದಾಡಬೇಕು?"

"ಅವನಂತೆಯೇ ನಾನಾಗಬೇಕೆ?"

"ಹಾಗಲ್ಲ. ನೀನೇನು ಅವರ ಸ್ವಂತ ಮಗಳಲ್ಲ."

"ಆದರೂ ನನಗೆ ಕರ್ತವ್ಯಪ್ರಜ್ಞೆ ಇದೆ. ತನ್ನ ಪಾಡಿಗೆ ತಾನು ಮನೆಯಿಂದ ದೂರ ಹೋಗಿ, ತನಗಿಷ್ಟವಾದವಳನ್ನೇ ಮದುವೆಯಾಗಿ, ತನ್ನ ಸಂಸಾರದಲ್ಲೇ ಲೋಲಾಪ್ತಿ ಆಡುತ್ತಿರುವವನು, ಈ ವೃದ್ಧರಿಗೆ ಏನೂ ಮಾಡುವುದಿಲ್ಲ. ಅವರು ಸಾಕಿ ಬೆಳೆಸಿ, ನನಗೆ ಒಂದು ಸ್ಥಾನ ಮಾನ ಕೊಟ್ಟು, ಗೌರವಾನ್ವಿತ ಬಾಳು ಬಾಳಲು ಕಾರಣರಾದವರನ್ನು ನಾನು ಮರೆಯುವುದಿಲ್ಲ. ಅವರಿಗೋಸ್ಕರ ನಾನು ಮದುವೆ ಇಲ್ಲದೇ ಹಾಗೇ ಇರಬಲ್ಲೆ."

"ಇದರಿಂದ ಪಂಡಿತರ ಮನಸ್ಸಿಗೆ ಸಮಾಧಾನ ಸಿಕ್ಕಂತಾಗುವುದಿಲ್ಲ. ಅವರಿಗೂ ತಮ್ಮ ಜವಾಬ್ದಾರಿ ಕಳೆದುಕೊಳ್ಳುವ ಆಸೆ ಇರುತ್ತದೆ."

"ನೋಡೋಣ, ಆ ಕಾಲ ಬಂದಾಗ. ಈಗ ನನಗೆ ನಿದ್ದೆ ಬರ್ತಿದೆ. ಬೆಳಿಗ್ಗೆ ಬೇಗ ಎಬ್ಬಿಸಿ ಬಿಡಿ. ಮೊದಲನೇ ಬಸ್ಸಿಗೇ ನಾನು ಹೊರಡಬೇಕು."

"ಎಲ್ಲಿ ಕೆಲಸ ಮಾಡ್ತಿದೀಯ? ಏನು ಮಾಡ್ತಿದೀಯಾಂತ ನೀನು ಹೇಳಲೇ ಇಲ್ಲವಲ್ಲ."

"ನೀವು ಕೇಳಲಿಲ್ಲ. ನಾನು ಕೇಳಲಿಲ್ಲ. ಹೋಗಲಿ ಬಿಡಿ. ಇನ್ನೊಂದು ದಿನ ಹೇಳಿದ್ರಾಯ್ತು." ಮುಸುಕೆಳೆದು ಮಲಗಿದಳು. ರಾಮಸ್ವಾಮಿಗೆ ಎಷ್ಟು ಹೊತ್ತಾದ್ರೂ ನಿದ್ದೆ ಬಂದಿರಲಿಲ್ಲ.

ಪಕ್ಕದ ಮನೆಯ ಅಲಾರಾಂ ಗಡಿಯಾರ ಗಂಟೆ ಬಾರಿಸಿದಾಗ ರಾಮಸ್ವಾಮಿ ಎಚ್ಚೆತ್ತ. ಸುಮಾರಾಗಿ ಬೆಳಕು ಹರಿದಿತ್ತು. ಸುಜಾತಳನ್ನು ಕೂಗಿ ಎಬ್ಬಿಸಿದ.

"ಸುಜಾತಾ ಏಳು. ಬೆಳಗಾಗಿದೆ ..... ಎದ್ದು ಮುಖ ತೊಳೆದು ಬಾ. ಕಾಫಿ ಮಾಡಿಕೊಡ್ತೀನಿ."

ಮಾವ ತಂದು ಕೊಟ್ಟ ಬಿಸಿ ಬಿಸಿ ಕಾಫಿಯನ್ನು ಕುಡಿದು, ನಸು ಬೆಳಕಿನಲ್ಲಿ ಮಾವನನ್ನೇ ಅನೇಕ ಬಾರಿ ನೋಡಿದಳು. ಅವನಿಗೆ ಹೇಗೋ ಹೇಗೋ ಆಗಿತ್ತು. ರಾತ್ರಿಯಂತೂ ಕಳೆದಿತ್ತು. ಈಗೇಕೆ ನನ್ನನ್ನು ಹೀಗೆ ನೋಡುತ್ತಿದ್ದಾಳೆ ಅಂತನ್ನಿಸದೇ ಇರಲಿಲ್ಲ. ಹಾಲಿನವನು ಸೈಕಲ್ ಬೆಲ್ ಹೊಡೆದ. ಅವಳು ಕಾಫಿ ಮುಗಿಸಿ ಎದ್ದಳು.

"ನಾನು ಬರ್ತೀನಿ ಮಾವ ...."

"ಹುಂ. ತಡೀ. ನಾನೂ ಬಸ್‌ಸ್ಟಾಪ್‌ನವರೆಗೆ ಬರ್ತೀನಿ."

"ನಾನು ಮೊದಲು ಪಂಡಿತರ ಮನೆಗೆ ಹೋಗ್ತಿದೀನಿ." ಅವಳು ಹಾಗೆ ಹೇಳಿದರೂ, ಅವನು ಮುಂಬಾಗಿಲಿಗೆ ಬೀಗ ಜಡಿದು ಅವಳೊಡನೆ ಬೀದಿಗಿಳಿದ. ಅಕ್ಕ ಪಕ್ಕದ ಹತ್ತಾರು ಕಣ್ಣುಗಳು ಆ ಜೋಡಿಯನ್ನು ನೋಡಿದವು. ಆ ಕಡೆ ಅವನಿಗೆ ಗಮನವಿರಲಿಲ್ಲ.

"ಪಂಡಿತರನ್ನ ಪಂಡಿತರು ಅಂತಲೇ ಕರೀತೀಯಲ್ಲ ಯಾಕೆ?"

"ಎಲ್ರೂ ಹಾಗೇ ಕರೀತಾರೆ. ಅವರ ಮಗ ಸಹ ಹಾಗೇ ಅವರನ್ನು ಕರೆಯೋದು."

ರಸ್ತೆಯ ತಿರುವಿನವರೆಗೂ ಅವಳ ಜೊತೆ ಹೋಗಿ, ಅವಳತ್ತ ತಿರುಗಿದ ಮೇಲೆ ಇವನು ಹಿಂತಿರುಗಿದ. ಇವನ ಬರುವನ್ನೇ ಕಾಯುತ್ತಿದ್ದಂತೆ, ಪಕ್ಕದ ಮನೆಯಾತ, ಇವನ ಮನೆಯ ಬಳಿಗೆ ಬಂದ. ಇವನು ಮುಗುಳ್ನಕ್ಕ.

"ಯಾರೋ ನೆಂಟರು ಬಂದ ಹಾಗಿತ್ತು. ನಿಮ್ಮ ಪತ್ನೀನೂ ಊರಲಿಲ್ಲ. ಕರೆಂಟೂ ಇರಲಿಲ್ಲ. ತೊಂದರೆ ಆಯ್ತೇನೋ ... ನಮ್ಮ ಸಹಾಯ ಬೇಕಿದ್ರೆ ಕೇಳಬಹುದಾಗಿತ್ತಲ್ಲ."

ಅವರ ವ್ಯಂಗ್ಯ ಇವನಿಗೆ ಅರ್ಥವಾಗಲಿಲ್ಲ. ಅಕ್ಕನ ಮಗಳೆಂದು ಹೇಳಿಕೊಳ್ಳುವ ಆಸೆ ಆಗಲಿಲ್ಲ.

"ಹೀಗೇ ನಮ್ಮ ಊರಿನೋರು ... ರಾತ್ರಿ ಇರಲು ಎಲ್ಲಿಯೂ ಜಾಗ ಇರಲಿಲ್ಲ ಅವರಿಗೆ. ನಮ್ಮ ಮನೆಗೆ ಅಂತ ಬಂದರು. ಹಾಳಾದ್ದು ಅವರು ಬರೋ ಹೊತ್ತಿಗೆ ಕರೆಂಟೂ ಹೋಯ್ತು ... ಅಡಿಗೆ ಸಹ ಹೆಚ್ಚಿಗೆ ಉಳಿಸಿರಲಿಲ್ಲ. ಬರೋದು ಗೊತ್ತಿರಲಿಲ್ಲ ನೋಡಿ."

ಆತ ಹೇ .... ಹೇ .... ಎಂದು ನಕ್ಕರು. ಆ ನಗುವಿನಲ್ಲಿ ವ್ಯಂಗ್ಯ ಸಂಶಯ ಎರಡೂ ಅಡಗಿತ್ತು.

"ರಾತ್ರಿ ಕತ್ತಲೇಲಿ, ಶೆಕೆ, ಸೊಳ್ಳೆ ... ನಿದ್ದೇನೇ ಬರಲಿಲ್ಲ." ಎನ್ನುತ್ತಾ ಮನೆಗೆ ಹಾಕಿದ್ದ ಬೀಗವನ್ನು ತೆಗೆದ. ಅವನೊಡನೆಯೇ ಒಳ ಬಂದ ಆತ, ಒಳಗೆ ನಿಂತು ಸುತ್ತಲೂ ಕಣ್ಣು ಹಾಯಿಸಿದರು.

"ಅದೇನು ಹೀಗೆ ಎಲ್ಲಾ ಕಲ್ಲಾ ಬಿಲ್ಲಿ .... ಎಲ್ಲಿಗಾದ್ರೂ ಹೊರಟಿದಿರೇನು?"

"ಹುಂ ... ಈ ಮನೆ ಬಿಡ್ತಾ ಇದೀನಿ."

"ಹೌದಾ ! ನಮಗೆ ಹೇಳಲೇ ಇಲ್ಲ..."

"ಹೊರಡೋ ಮುಂಚೆ ಹೇಳೋಣ ಅಂತಿದ್ದೆ. ಈಗ ತಾನಾಗಿಯೇ ಮುಂಚಿತವಾಗಿ ತಿಳೀತಲ್ಲ.."

"ಜಾಣರಪ್ಪಾ ನೀವು ... ನಾವಾಗಿಯೇ ಕೇಳದೇ ಹೇಳೋರಲ್ಲ. ಅದಿರಲಿ ಆ ಹೆಂಗಸು ಇವತ್ತು ರಾತ್ರಿಯೂ ಬರ್ತಾರಾ?"

"ಅದೆಲ್ಲಾ ನಿಮಗ್ಯಾಕೆ?" ಎಂದು ರೇಗಿಬಿಟ್ಟ. ಆತ ಪೆಚ್ಚಾಗಿ ಇವನನ್ನೇ ದುರು ದುರು ನೋಡಿ ಹೊರಟು ಹೋದ. ಆಗ ಆತ ಬಂದು ಮಾತನಾಡಿದ ಉದ್ದೇಶ ಇವನಿಗೆ ಅರ್ಥವಾಗಿತ್ತು. ಮನಸ್ಸಿಗೆ ಕಸಿವಿಸಿಯಾಯಿತು. ಅಕ್ಕಪಕ್ಕದವರ್‍ಯಾರಿಗೂ ಹೇಳದೇ ಕೆಲವೇ ದಿನಗಳಲ್ಲಿ ಆ ಮನೆಯನ್ನು ಖಾಲಿ ಮಾಡಿದ.

* * *

## - - 12 - -

ಶಾಂತಳಿಗೆ ಈ ವಿಷಯವನ್ನೆಲ್ಲಾ ವಿಶದವಾಗಿ ಹೇಳುವ ಅಗತ್ಯವಿರಲಿಲ್ಲ. ಅವಳೂ ಮತ್ತೇನೂ ಪ್ರಶ್ನಿಸಿರಲಿಲ್ಲ. ಆದರೆ ಅವಳು ಧುಮು ಧುಮುಗುಡುವ ಮುಖವೇ, ಅವಳ ಕೋಪ ಇನ್ನೂ ಆರಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿತ್ತು.

ರಾಮಸ್ವಾಮಿ ಬೇಗ ಬೇಗ ಉಪ್ಪಿಟ್ಟನ್ನು ಮಾಡಿ ಎಲ್ಲರಿಗೂ ತಂದುಕೊಟ್ಟ. ಸುಜಾತಾ ಮಾತಿಲ್ಲದೇ ತಿಂಡಿಯನ್ನು ತಿಂದಳು. ಶಾಂತ ಅವಳನ್ನೇ ನೋಡುತ್ತಿದ್ದಳು. "ಎಲ್ಲಿಂದ ವಕ್ರಿಸಿದಳಪ್ಪಾ ಇವಳು ..... ಇದುವರೆಗೆ ಇಲ್ಲದ ಸಂಬಂಧ ಹೇಳಿಕೊಂಡು ಬಂದು ಬಿಟ್ಟರೆ ನಾನು ನಂಬ್ತೀನಾ? ಇದರಲ್ಲಿ ನನ್ನ ಗಂಡನ ಕರಾಮತ್ತೂ ಇದೆ ... ಇಲ್ಲದಿದ್ದರೆ ನನ್ನೆದುರಿಗೇ ಮನೆಗೇ ಬರುವಂಥ ಧೈರ್ಯ !

"ಅತ್ತೆ, ತಿಂಡಿ ತಟ್ಟೆ ಕೊಡಿ .... ನಾನು ತೊಳೆದಿಡ್ತೀನಿ"

"ನಾನು ನಿನ್ನ ಅತ್ತೆ ಅಲ್ಲ .... ಅಲ್ಲದೇ ನಮ್ಮ ಮನೆಯ ಕೆಲವನ್ನು ನೀನೇಕೆ ಮಾಡಬೇಕು?" ಸುಜಾತ ಹಿಂದೆ ಸರಿದಳು. ರಾಮಸ್ವಾಮಿ ಹಿಂದೆ ಬಂದು ನಿಂತಿದ್ದ.

"ಶಾಂತ, ಇಲ್ಲಿ ಕೊಡು ತಟ್ಟೇನ .... ಯಾರೂ ತೊಳೆಯುವುದು ಬೇಡ. ಕೆಲಸದವಳು

ಬರ್ತಾಳೆ ...." ರಾಮಸ್ವಾಮಿ ಮತ್ತೆ ಎಲ್ಲರಿಗೂ ಕಾಫಿಯನ್ನು ತಂದುಕೊಟ್ಟ. ಸುಜಾತ ಕಾಫಿ ಕುಡಿದು ಹೊರಟಳು. ಹೊರಡುವ ಮುನ್ನ ಮಗುವಿನ ಬಳಿಗೆ ಬಂದು, ಮಗುವಿನ ಕೈಗೆ ಐವತ್ತರ ನೋಟೊಂದನ್ನು ಇಟ್ಟು ಕೆನ್ನೆ ಸವರಿದಳು.

"ನಾನಿನ್ನು ಬರ್ತೀನಿ .... ಎಂದು ಶಾಂತಳಿಗೆ ಹೇಳಿ, ರಾಮಸ್ವಾಮಿಯ ಕಡೆ ತಿರುಗಿ, "ನಾನು ಬರಲಾ ಮಾವಾ?" ಎಂದಳು.

"ಹೂಂ. ನಮ್ಮ ಆಗಾಗ್ಗೆ ಬರ್ತಿರು" ಹೆಂಡತಿಯ ಕಡೆ ನೋಡುತ್ತಾ ಹೇಳಿದ.

"ಇಲ್ಲ ಮಾವ, ನಾನಿನ್ನು ಮತ್ತೆ ಬರುಲ್ಲ. ಅತ್ತೆಗೆ ಅಸಮಾಧಾನವಾಗುತ್ತೆ. ಮುಂದಿನ ತಿಂಗಳು ನನ್ನ ಮದುವೆ, ನೀವೇ ಅಲ್ಲಿಗೆ ಬನ್ನಿ. ನನ್ನ ಕಡೆಯವರು ಅಂತ ನೀವು ಬಂದರೆ ನನಗೆ ಸಂತೋಷ"

"ಅರೇ ಹೇಳಲೇ ಇಲ್ಲ. ತಡೀ .... ಶಾಂತ, ಸುಜಾತಂಗೆ, ತಾಂಬೂಲ, ಅರಿಶಿನ ಕುಂಕುಮ ಕೊಡು. ಮದುವೆ ಗೊತ್ತಾಗಿರುವ ಹುಡುಗಿ, ತವರಿನ ಬಳಗ ಅಂದರೆ ನಾನೊಬ್ಬನೇ .... ರವಿಕೆ ಖಣ ಇದೇ ತಾನೇ ...?"

"ಹುಂ ನೋಡ್ತೀನಿ" ಅಂತ ಶಾಂತ ಒಳಗಿನ ರೂಮಿಗೆ ಹೋದಳು. ಮಗುವಿನ ಕೈಗೆ ಐವತ್ತು ರೂಪಾಯಿ ಕೊಟ್ಟಿದ್ದ, ಇವಳ ಋಣ ನನಗೇಕೆ ಎನ್ನುವಂತೆ, ರೇಶಿಮೆಯ ಖಣದೊಂದಿಗೆ ಅರಿಶಿನ ಕುಂಕುಮ ತಾಂಬೂಲವನ್ನು ಕೊಟ್ಟಳು. ಸುಜಾತಾ ಇಬ್ಬರಿಗೂ ನಮಸ್ಕಾರ ಮಾಡಿದಳು. ರಾಮಸ್ವಾಮಿ ಹೃತ್ಪೂರ್ವಕವಾಗಿ ಆಶೀರ್ವಾದ ಮಾಡಿದ. ಶಾಂತ ಮಾತ್ರ ಪಿಟಿ ಪಿಟಿ ಎಂದಳು.

"ನಾನು ನಿನಗಿಂತ ಚಿಕ್ಕವಳು. ನನಗೆ ನಮಸ್ಕಾರ ಮಾಡಬೇಡ" ಎಂದಳು.

"ವಯಸ್ಸು ಮುಖ್ಯವಲ್ಲ ಶಾಂತೂ, ಸಂಬಂಧ ಮುಖ್ಯ. ನೀನು ಅವಳ ಸೋದರಮಾವನ ಪತ್ನಿ, ಸೋದರತ್ತೆ ...."

"ನಾನು ಯಾರಿಗೂ ಅತ್ತೆ ಅಲ್ಲ. ಪದೇ ಪದೇ ಅತ್ತೆ ಅತ್ತೆ ಅಂತ ಕರದ್ರೆ ನಾನು ಸುಮ್ಮನಿರುಲ್ಲ"

"ಕ್ಷಮಿಸಿ .... ನಿಮ್ಮ ಒಪ್ಪಿಗೆ ಇದ್ದರೆ, ನಾನು ನಿಮ್ಮನ್ನು ಶಾಂತ ಅಂತ ಕರೀಲಾ?"

"ಏನೂ ಬೇಡ. ನಾನ್ಯಾರೋ ನೀನ್ಯಾರೋ .... ನನ್ನಷ್ಟೇ ವಯಸ್ಸಿನವಳೊಬ್ಬಳನ್ನು ಕರೆ ತಂದು, ಇವಳು ನನ್ನ ಅಕ್ಕನ ಮಗಳು ಅಂತ ಹೇಳಿದ್ರೆ ನಾನು ನಂಬ್ತೀನಾ?"

"ಸರಿ, ನಿಮಗೆ ನಂಬಿಕೆ ಬರೋವರೆಗೂ, ನಾನು ಮತ್ತೆ ಈ ಮನೆಗೆ ಕಾಲಿಡುವುದಿಲ್ಲ" ಎಂದು ಹೇಳಿ ಸುಜಾತ ರಸ್ತೆಗಿಳಿದಳು. ಶಾಂತ ಮಗುವಿನ ಕೈಯಲ್ಲಿದ್ದ ಐವತ್ತು ರೂಪಾಯಿನ ನೋಟನ್ನು ಕಿತ್ತು ಪಕ್ಕದ ಟೇಬಲ್ ಮೇಲಿಟ್ಟಳು. ಗಂಡ, ಸುಜಾತಳೊಡನೆ ಬೀದಿಗೆ ಇಳಿದಿದ್ದ. ಇವಳು ಹಲ್ಲು ಕಡಿದಳು.

ಗಂಡ ಮನೆಗೆ ವಾಪಸ್ಸು ಬರುವುದನ್ನೇ ಕಾದಿದ್ದ ಶಾಂತ ಅವನ ಮೇಲೆ ಸಿಡಿಲೆರಗಿದಂತೆ ಎರಗಿದಳು.

"ಮುಗೀತಾ ಚೆಲ್ಲಾಟ? ನಿಮಗೆ ಒಂದು ನೆಪ ಬೇಕಿತ್ತು. ನಾನು ಏನೋ ಅಂದೆ ಅನ್ನೋ ನೆವ ಮಾಡಿಕೊಂಡು, ಸೀದಾ ಅವಳ ಮನೆಗೆ ಹೋಗಿ, ಮನೆಗೆ ಬೇರೆ ಕರೆದುಕೊಂಡು ಬಂದ್ರಿ .... ನಾಚಿಕೆ ಆಗೋಲ್ವಾ ನಿಮಗೆ ....?"

ರಾಮಸ್ವಾಮಿಗೆ ಬೇಸರ ಅಧಿಕವಾಯಿತು. "ಶಾಂತಾ .... ನೋಡಿಲ್ಲಿ ಇಲ್ಲದ ಸಲ್ಲದ ಅಪವಾದವನ್ನು ನನ್ನ ಮೇಲೆ ಹೊರಿಸಬೇಡ. ನನ್ನದಾಗಲೀ, ಅವಳದ್ದಾಗಲೀ ಏನೂ ತಪ್ಪಿಲ್ಲ ...."

"ಅಹಾಹಾ ..... ಅವಳ ಪರ ವಹಿಸಿಕೊಂಡು ಮಾತಾಡ್ತೀರಲ್ಲ ... ನಾನು ನಿಮ್ಮ ಕೈ ಹಿಡಿದವಳು. ನಿಮ್ಮ ಪತ್ನಿ ನಾನು ......"

"ನಾನೆಲ್ಲಿ ಇಲ್ಲ ಎಂದೆ ..... ಏನೇನೋ ಮಾತನಾಡಿ, ನನ್ನ ತಲೆ ಕೆಡಿಸಬೇಡ. ನಿನ್ನ ನೆಮ್ಮದಿಯನ್ನು ಹಾಳು ಮಾಡ್ಕೋಬೇಡ"

"ಇವಳ ವಿಷಯ ತಿಳಿದ ದಿನವೇ ನನ್ನ ನೆಮ್ಮದಿ ಹಾಳಾಗಿಹೋಯ್ತು ....."

"ಅಂಥಾದ್ದೇನಾಯ್ತು ಈಗ?"

"ಅವಳ್ಯಾರು? ಇದುವರೆಗೆ ಇಲ್ಲದ ಸಂಬಂಧವನ್ನು ಹುಡುಕಿಕೊಂಡು ಹೇಗೆ ಹುಟ್ಟಿ ಬಂದಳು? ನಿಜ ಹೇಳಿ ..."

"ನಾನು ನಿಜವನ್ನು ಹೇಳಿದರೂ ನೀನು ನಂಬುತ್ತಿಲ್ಲ. ನಾನು ಯಾವ ಸುಳ್ಳನ್ನು ಹೇಳಲಿ?"

"ಈ ಮಗುವಿನ ಮೇಲೆ ಆಣೆ ಮಾಡಿ ಹೇಳಿ. ಅವಳಿಗೂ ನಿಮಗೂ ಯಾವ ಸಂಬಂಧವಿಲ್ಲ ಅಂತ ...."

"ಛಿ ... ನಮ್ಮ ಕಚ್ಚಾಟಕ್ಕೆ ಈ ಮಗೂನ ಮಧ್ಯೆ ತರಬೇಡ ..."

"ಹಾಗಾದ್ರೆ ನನ್ನ ನಂಬಿಕೆ ನಿಜವಾಯ್ತು ...."

"ಏನಾಯ್ತು ನಿನಗೇ ಅಂತ? ಅವತ್ತೇ ಹೇಳಿದೆ. ಅವಳು ನನ್ನ ಅಕ್ಕನ ಮಗಳು ಅಂತ. ಇದು ನಿಜ. ಈ ಮಗುವಿನ ಮೇಲಾಣೆ" ಎನ್ನುತ್ತಾ ಮಗುವಿನ ತಲೆಯ ಮೇಲೆ ಕೈ ಇಟ್ಟ. ಶಾಂತ ಆ ಕೈಯನ್ನು ಕಿತ್ತು ಹಾಕಿದಳು.

"ನನ್ನ ಮಗಳಿಗೇನಾದ್ರೂ ಆದರೆ, ಅದಕ್ಕೆ ನೀವೇ ಹೊಣೆ" ಎಂದು ಹೇಳಿ ಒಳಗಿನ ರೂಮಿಗೆ ಹೋದಳು. ರಾಮಸ್ವಾಮಿ ಮಗುವಿನ ಮುಖವನ್ನೇ ನೋಡುತ್ತಿದ್ದ. ಮಗುವಿನ ಮುದ್ದು ಮುಖದಲ್ಲಿ ಎಂಥಾ ಮುಗ್ಧತೆ ! ಎಂಥಾ ನಿಷ್ಕಲ್ಮಶತೆ ! ಈ ಮಗುವೂ ಬೆಳೆದಂತೆ, ಪರಿಸರಕ್ಕೆ ತಕ್ಕಂತೆ ಭಾವನೆಗಳನ್ನು ಬೆಳೆಸಿಕೊಳ್ಳುತ್ತಾ ಮುಗ್ಧತೆಯನ್ನು ಕಡಿಮೆ ಮಾಡಿಕೊಳ್ಳುತ್ತದೆ. ಈ ಮುಗ್ಧತೆಯೇ ಸದಾ ಕಾಲಕ್ಕೂ ಇರುವಂತಿದ್ದರೇ .... ಅಂತ ಅಂದುಕೊಂಡಾಗ, ವಿಷಾದ ನಗೆ ಮೂಡಿತು. ಹೀಗೇ ಇದ್ದರೆ, ಅದನ್ನು ಪ್ರಪಂಚ ಅಂತ ಅನ್ನೋಕೆ ಆಗುಲ್ಲ .... ಮುಚ್ಚು, ಮರೆ, ಕಪಟ, ವಂಚನೆಗಳಿಂದ ಪ್ರಪಂಚ ತುಂಬಿ ಹೋಗಿದೆ. ಅದಕ್ಕೆ ನಾನೇ ಸಾಕ್ಷಿ. ಇದುವರೆಗೂ ನಾನೇಕೆ, ಸರಸ್ವತಿಯ ಬಗ್ಗೆ ಶಾಂತಳಿಗೆ ಹೇಳಲಿಲ್ಲ? ಸರಸ್ವತಿಯ ನಡತೆ ಸರಿಯಾಗಿರಲಿಲ್ಲವೆಂದು ನಾನಾಗಿಯೇ ಹೇಳಿಕೊಂಡು, ನಮ್ಮ ಮನೆತನದ ಮರ್ಯಾದೆಯನ್ನು ಕಡಿಮೆ ಮಾಡಿಕೊಳ್ಳುವ ಇಚ್ಛೆ ಇರಲಿಲ್ಲ. ಆದರೆ ಈಗ ಆದದ್ದೇನು? ನನ್ನ ಮರ್ಯಾದೆಯೇ ಹೋಗುವ ಸ್ಥಿತಿ ಬಂತಲ್ಲ ....

ಗಂಡ ಹೆಂಡತಿಯರ ನಡುವೆ ಯಾವ ರಹಸ್ಯವಿರಬಾರದು ಅಂತಾರೆ. ನಾನೆಂದೂ ಶಾಂತಳ ಮನೆಯ ವಿಚಾರಗಳನ್ನು ಕೆದಕಿ ಕೇಳಿರಲಿಲ್ಲ. ಬೇಕಾದಷ್ಟು ಹುಳುಕು ನಮ್ಮ ಮನೆಯಲ್ಲಿಯೇ ಇತ್ತು. ಆದರೆ, ಒಂದು ವೇಳೆ, ಶಾಂತನ ಅಕ್ಕನೋ, ಅಣ್ಣನೋ ಹೀಗೆ ಕೆಟ್ಟ ಹೆಸರು ಮಾಡಿಕೊಂಡಿದ್ದರೆ ಶಾಂತ ಮುಚ್ಚು ಮರೆ ಮಾಡದೇ ನನಗೆ ಎಲ್ಲವನ್ನು ಹೇಳಿರುತ್ತಿದ್ದಳೇ ... ಈಗಲೇ ಪರೀಕ್ಷೆ ಮಾಡಿ ಬಿಡುತ್ತೇನೆಂದು ತೀರ್ಮಾನಿಸಿ, ಶಾಂತಳನ್ನು ಕರೆದ. ಅವನ ಕೂಗಿಗೆ ಹೆದರಿ, ಮಗುವಿಗೆ ಏನಾಗಿಹೋಯ್ತೋ ಎಂದು ನಡುಗುತ್ತಾ ಈಚೆ ಬಂದಳು.

"ಬಾ .... ಇಲ್ಲಿ ಕೂತ್ಕೋ ....." ಆಜ್ಞೆ ಮಾಡಿದ. ತೀಕ್ಷ್ಣವಾಗಿ ಇವನನ್ನೇ ನೋಡುತ್ತಾ ನಿಂತಿದ್ದವಳ ಕೈ ಹಿಡಿದು ಒರಟಾಗಿ ತನ್ನ ಬಳಿ ಕೂರಿಸಿಕೊಂಡ.

"ಬಿಡಿ ..... ಏನಿದೆಲ್ಲಾ .... ಈಗೇನಾಗ್ಬೇಕು ನನ್ನಿಂದ?" ಅವನಿಂದ ದೂರ ಸರಿದಳು.

"ನೀನು ನನ್ನಿಂದ ದೂರ ಸರಿದು ಕೂತರೂ, ನಮ್ಮಿಬ್ಬರ ಸಂಬಂಧ ಮುರಿದು ಹೋಗುಲ್ಲ .... ಅದಿರಲಿ, ನಾನು ಕೆಲವು ಪ್ರಶ್ನೆಗಳನ್ನು ಕೇಳ್ತೀನಿ. ಇದನ್ನೆಲ್ಲ ತುಂಬಾ ಮೊದಲೇ ಕೇಳಬೇಕಾಗಿತ್ತು ... ಆದರೆ ಆ ಪ್ರಸಂಗವೇ ಬರಲಿಲ್ಲ."

"ಸುತ್ತಿ ಬಳಸಿ ಮಾತ್ನಾಡಬೇಡಿ. ಅದೇನು ಕೇಳಬೇಕೋ ಬೇಗ ಬೇಗ ಕೇಳಿ. ನನಗೆ ಬೇಕಾದಷ್ಟು ಕೆಲಸಗಳಿವೆ"

"ಏನೂ ಕೆಲಸವಿಲ್ಲ. ನನಗೆ ಗೊತ್ತು. ನಾನೇ ಅಡಿಗೆ ಮಾಡಿದೀನಿ. ನನ್ನ ಬಳಿ ಕುಳಿತು, ನನ್ನ ಮಾತನ್ನು ಕೇಳುವ ಸಹನೆಯೂ ನಿನಗಿಲ್ವಾ? ಮುಂಚೆ ಎಂದೂ ಹೀಗಾಡಿರಲಿಲ್ಲ ನೀನು ....."

"ಹೌದು, ಈಗ ನಾನು ಹೀಗೇ ಆಡೋದು. ಏನೀಗ? ನಿಮ್ಮ ಬಳಿ ಚಕ್ಕಂದ ಆಡೋಕೆ ನನಗೆ ಸಮಯವೂ ಇಲ್ಲ ; ಮನಸ್ಸೂ ಇಲ್ಲ. ನನ್ನ ಪಾಡಿಗೆ ನನ್ನನ್ನು ಬಿಡಿ."

"ನೀವು, ಒಟ್ಟು ಎಷ್ಟು ಜನ ಅಕ್ಕ ತಂಗಿ, ಅಣ್ಣ ತಮ್ಮಂದಿರು? ನೀನು ಎಷ್ಟನೇಯವಳು?"

"ಅದೆಲ್ಲಾ ಈಗ ಯಾಕೆ ಬೇಕೋ?"

"ಸುಮ್ಮನೆ ಕೇಳಿದೆ. ನಿಮ್ಮ ಅಣ್ಣ ಅತ್ತಿಗೆ ಸಂಸಾರ ಹೇಗಿದೆ? ಅಕ್ಕ ಭಾವನ ಸಂಸಾರ ಹೇಗಿದೆ ಅಂತ ನೀನು ಎಂದೂ ಹೇಳೇ ಇಲ್ಲ ...."

"ಹೇಗಿದಾರೋ ನಂಗೊತ್ತಿಲ್ಲ."

"ಗೊತ್ತಿದ್ದರೂ ಏಷ್ಟನ್ನೋ ಹೇಳಿರುಲ್ಲ. ಅಲ್ವಾ?"

"ಇರಬಹುದು ....."

"ಆ ಇರಬಹುದು ಎನ್ನೋ ಪದದಲ್ಲಿ ಎಷ್ಟೋ ರಹಸ್ಯಗಳು ಅಡಗಿರುತ್ತದೆ. ಕೆಲವು ಹೇಳಿಕೊಳ್ಳಲಾಗದ, ಕೆಲವು ಹೇಳಬಾರದ ವಿಷಯಗಳು ಅಡಗಿರುತ್ತದೆ. ಹೌದು ತಾನೇ?"

"ಹೇಳಿದ್ನಲ್ಲ ನಂಗೇನೂ ಗೊತ್ತಿಲ್ಲ ಅಂತ ....."

"ನಿಧಾನವಾಗಿ ನೆನಪಿಗೆ ತಂದ್ಕೋ ... ನಿನ್ನ ಅಣ್ಣ ಅತ್ತಿಗೆಯರಲ್ಲಿ ಜಗಳ ಕದನ ನಡೆದಿರಬಹುದು. ಅಕ್ಕ ಭಾವಂದಿರಲ್ಲಿ ವಿರಸ ಮೂಡಿರಬಹುದು. ಅದು ಸಣ್ಣ ಪುಟ್ಟ ವಿಷಯವೇ ಆಗಿರಬಹುದು ಅಥವಾ ತಲೆ ಹೋಗುವಂತಹ ಘನವಾದದ್ದೇ ಇರಬಹುದು"

"ನಮ್ಮ ಮನೆಯವರೆಲ್ಲಾ ಅಂತ ಕಳಪೆ ಏನಲ್ಲ ......" ಹೆಮ್ಮೆಯಿಂದ ಹೇಳಿಕೊಂಡಳು.

"ಒಂದು ವೇಳೆ, ನೀನೇ ಹೇಳುವಂತೆ, ಏನಾದರೂ ಕಳಪೆಯ ವಿಷಯ ಇದ್ದಿದ್ದರೆ, ನೀನು ನನಗೆ ಹೇಳುತ್ತಿದ್ದೆಯಾ? ....."

ಅಂಥದ್ದನ್ನೆಲ್ಲಾ ಯಾರು ಹೇಳಿಕೊಳ್ತಾರೆ ....?"

"ಹ್ಞಾಂ, ಅದೇ ... ಮುಚ್ಚಿಡ್ತಾರೆ ಅಲ್ವಾ?" ಶಾಂತ ಗಂಡನಿಗೆ ಉತ್ತರಿಸದೇ ಅವನನ್ನೇ ನೋಡಿದಳು.

"ನಮ್ಮ ಮನೆ ವಿಚಾರವೇ ಬೇರೆ. ಯಾವ ಅಕ್ಕ ಭಾವನದಲ್ಲ ಅಥವಾ, ಯಾವ ಅಣ್ಣ ಅತ್ತಿಗೆಯರದಲ್ಲ. ನೀವು ಹಾಗೂ ನಿಮ್ಮ ಆ ಸುಜಾತಳ ನಡುವೆ ನಡೆದಿರುವ ವಿಚಾರವೇ ಬೇರೆ ....."

"ಅದೇ ಮಾತನ್ನು ಹೇಳೋಕೆ, ನಾನು ನಿನ್ನನ್ನ ಕರೆದದ್ದು ..... ಸುಜಾತಾ ನನ್ನ ಅಕ್ಕನ ಮಗಳು ಅಂತಂದೆ ನೀನು ನಂಬಲಿಲ್ಲ. ಸರಸ್ವತಿ ನಮ್ಮ ಅಕ್ಕ ಅಂತಂದೆ ನಿನಗೆ ನಂಬಿಕೆ ಬರಲಿಲ್ಲ .... ಆ ಸರಸ್ವತಿಯ ಜೀವನದಲ್ಲಿ ಏನೇನೋ ನಡೆಯಬಾರದ್ದು ನಡೆದು ಹೋಯಿತು. ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆಯೇ ಅವಳು ನಮ್ಮ ಜೀವನದಿಂದ ದೂರ ಹೊರಟು ಹೋದಳು. ಅವಳು ಬದುಕಿದ್ದಾಳೋ ಇಲ್ಲವೋ ಅದೂ ಸಹ ತಿಳಿದಿರಲಿಲ್ಲ."

ಶಾಂತ ನಂಬದವಳಂತೆ ಮುಖ ಊದಿಸಿಕೊಂಡು ಕೂತಿದ್ದಳು. "ನನಗೆ ಗೊತ್ತು, ನೀನು ನನ್ನ ನ್ನು ನಂಬುತ್ತಿಲ್ಲ ಅಂತ. ಆದರೆ ನಾನು ಹೇಳುತ್ತಿರುವುದೆಲ್ಲಾ ನಿಜ. ಎಲ್ಲಿದ್ದಾಳೆ ಏನು ಎತ್ತ ಅಂತ ತಿಳಿಯದ, ನನ್ನ ಅಕ್ಕನ ಬಗ್ಗೆ ನಿನಗೆ ತಿಳಿಸಲಿಲ್ಲ ..... ನಾನು ಅವಳನ್ನು ಮರತೇ ಬಿಟ್ಟಿದ್ದೆ. ಆದರೆ ಮತ್ತೆ ಅವಳ ನೆನಪಾದದ್ದು. ಈ ಸುಜಾತಳನ್ನು ಪಂಡಿತರ ಮನೆಯಲ್ಲಿ ಕಂಡ ದಿನ .... ಯಾವ ಪಂಡಿತರು ಅಂತ ಗೊತ್ತಾಗಲಿಲ್ವ?"

"ಯಾವ ಪಂಡಿತರೋ ಅದೆಲ್ಲಾ ನನಗೇಕೆ?"

"ಪಂಡಿತರ ಮನೆಗೆ ನಾನೇಕೆ ಹೋಗಿದ್ದೆ ಅಂತ ನೀನು ಕೇಳಲೇ ಇಲ್ಲ ....."

"ಇನ್ಯಾಕೆ? ಇವಳನ್ನು ಹುಡುಕಿಕೊಂಡು ಹೋಗಿರ್ತೀರಿ!"

ರಾಮಸ್ವಾಮಿ ತಲೆ ತಲೆ ಚಚ್ಚಿಕೊಂಡ. ಅವಳನ್ನು ಚಚ್ಚಿ ಬಿಡುವಷ್ಟು ಕೋಪ ಬಂದಿತು. ಆದರೂ ಸಹಿಸಿಕೊಂಡ. ಈ ಹೆಂಗಸನ್ನು ಒಪ್ಪಿಸುವುದು ಸುಲಭವಲ್ಲ ಅಂತನ್ನಿಸಿತ್ತು. ಶಾಂತ ಎದ್ದು ಹೋದರೂ ತಾನು ಹಾಗೇ ಕುಳಿತಿದ್ದ. ತನ್ನ ಅಕ್ಕನ ಬಗ್ಗೆ ಕೇಳಿಕೊಳ್ಳುವ, ಕುತೂಹಲವಾಗಲೀ ಸಹನೆಯಾಗಲೀ ಇವಳಲ್ಲಿ ಇಲ್ಲದಿರುವಾಗ ತಾನೇಕೆ ಒದರಬೇಕು ಎಂದು ಕೊಂಡ. ಆದರೂ ನಡೆದ ವಿಷಯಗಳಿಂದ ಮನಸ್ಸು ಕಹಿಯಾಗಿತ್ತು.

ನಾಲ್ಕಾರು ದಿನಗಳು ಸರಿದು ಹೋದವು. ಗಂಡ ಹೆಂಡತಿಯರ ನಡುವಿನ ಮನಸ್ತಾಪ ಹಾಗೇ ಮುಂದುವರೆದಿತ್ತು. ಎಷ್ಟೋ ಅಷ್ಟು ಮಾತು. ರಾಮಸ್ವಾಮಿ ಒಲಿಸಿಕೊಳ್ಳುವ ಪ್ರಯತ್ನ ಮಾಡಿದ್ದ. ಆದರೆ ಶಾಂತ ದೂರ ದೂರವಾಗಿಯೇ ಇದ್ದಳು. ಎಷ್ಟಾಗಲೀ ಶಾಂತ ಹೆಂಗಸು, ಒಂದಲ್ಲ ಒಂದು ದಿನ ಅವಳಾಗಿಯೇ ಸರಿ ಹೋಗ್ತಾಳೆ. ಆ ದಿನದವರೆಗೂ ನಾನು ಕಾಯ್ತೀನಿ ಎಂದು ತನಗೆ ತಾನೇ ಹೇಳಿಕೊಂಡ.

ಸುಜಾತಳ ಮದುವೆ ಆಮಂತ್ರಣ ಪತ್ರ ಬಂದಿತು. ಅದರಲ್ಲಿ ಚಿಕ್ಕ ಪತ್ರವನ್ನೂ ಬರೆದಿಟ್ಟಿದ್ದಳು. "ನಮ್ಮೂರಿನ ದೇವಸ್ಥಾನದಲ್ಲಿ ಮದುವೆ, ನೀವಿಬ್ಬರೂ ಖಂಡಿತಾ ಬಂದು, ಆಶೀರ್ವದಿಸಬೇಕು" ಎಂದು ಕೇಳಿಕೊಂಡಿದ್ದಳು. ಶಾಂತಳೆದುರಿಗೆ ಪತ್ರವನ್ನು ಓದಿ, ಅವಳ ಕಡೆ ನೋಡಿದ. ಅವಳು ಮೂತಿ ಸೊಟ್ಟಗೆ ಮಾಡಿದಳು. ತನಗೆ ಸಂಬಂಧಿಸುದುದೇ ಅಲ್ಲವೆನ್ನುವಂತೆ ಕೂತಿದ್ದಳು. ಇವನೂ ಸುಮ್ಮನಾಗಿಬಿಟ್ಟ.

ಮದುವೆಗೆ ಹೋಗಬೇಕೆಂಬ ಆಸೆಯೇನೋ ಇತ್ತು. ಆದರೆ ಅದರಿಂದ ಈ ಮನಸ್ತಾಪ ಮತ್ತು ಮುಂದುವರೆಯುವುದೆನ್ನುವುದನ್ನು ಬಲ್ಲ. ಹೆಂಡತಿಯಂತೂ ಖಂಡಿತಾ ಬರುವುದಿಲ್ಲ. ಅವಳಿಗೆ ತಿಳಿಯದಂತೆ ಹೋಗಿ ಬರುವುದು ಕಷ್ಟವೇನಲ್ಲ. ಆದರೆ ಹೆಂಡತಿಗೆ ನಂತರ ತಿಳಿದರೆ ಮತ್ತೊಂದು ಹಗರಣವಾಗುವುದಂತೂ ನಿಜ. ಈಗ ನನ್ನ ಸಂಸಾರವನ್ನು ನಾನೇ ಸರಿ ಮಾಡಿಕೊಳ್ಳಬೇಕು. ಸುಜಾತಳಿಗೆ ಹೇಳಿದರೆ ಎಲ್ಲಾ ಅರ್ಥ ಮಾಡಿಕೊಳ್ಳಬಹುದು. ಈಗ ನಾನು ಹೋಗದಿರುವುದೇ ಜಾಣತನ ಅಂತಂದುಕೊಂಡ. ಹೆಂಡತಿಗೆ ತಿಳಿಯದಂತೆ ಉಡುಗೊರೆ ಕೊಡಬಹುದೇನೋ .... ಆದರೆ ಹಣಕಾಸಿನ

ಲೆಖ್ಖಾಚಾರವೆಲ್ಲಾ ಹೆಂಡತಿಯ ಕೈಲಿರುವಾಗ, ನಿಜ ತಿಳಿದೇ ತಿಳಿಯುತ್ತದೆ. ಅದನ್ನು ಹೆಂಡತಿ ಹಂಗಿಸದೇ ಬಿಡುವವಳಲ್ಲ ಅಂತಂದುಕೊಂಡಾಗ, ತಾನೆಂತಹ ಅಸಹಾಯಕ ಅಂತನ್ನಿಸದೇ ಇರಲಿಲ್ಲ. ಹೆಂಡತಿಯ ಕೈ ಬಂಧಿ. ಅವಳಿಗೆ ಹೆದರುವ ಸ್ಥಿತಿ ಬಂದಿದೆ ಎಂಥಾ ನಾಚಿಕೆಗೇಡು ಅಂತನ್ನಿಸಿದರೂ ಏನೂ ಮಾಡುವಂತಿರಲಿಲ್ಲ.

ಶಾಂತ ಎಂದಾದರೂ ಸುಜಾತಳ ಬಗ್ಗೆ ಕೇಳಬಹುದೇನೋ ಅಂತ ಕಾದ. ಆದರೆ ಅವಳೆಂದೂ ಮತ್ತೆ ಕೇಳಲಿಲ್ಲ. ಮದುವೆಯ ದಿನ ಸಹ ಕಳೆದು ಹೋಯಿತು. ಆ ದಿನವೆಲ್ಲಾ ಮಂಕಾಗಿದ್ದ. ಈ ಮುಂಚೆಯೇ ತಾನೆಲ್ಲವನ್ನೂ ತನ್ನ ಹೆಂಡತಿಗೆ ಹೇಳದೇ ಇದ್ದುದು ತಪ್ಪು ಎಂದೇ ಭಾವಿಸಿ, ಎಲ್ಲವನ್ನೂ ಮುಂಚಿನಂತೆ ಮರೆಯಲು ಪ್ರಯತ್ನಪಟ್ಟ. ಆದರೆ ಮರೆಯಲಾಗಿರಲಿಲ್ಲ. ಯಾವ ಮದುವೆಯ ಆಮಂತ್ರಣ ಬರಲಿ, ಯಾವ ಮದುವೆಯ ಪ್ರಸ್ತಾಪ ಬರಲಿ ಸುಜಾತಳ ನೆನಪು ಬರುತ್ತಿತ್ತು. ತಪ್ಪು ಭಾವನೆಯಿಂದ ಪಂಡಿತರ ಮನೆಯ ಬಳಿಗೆ ಹೋಗುವ ಧೈರ್ಯ ಸಹ ಬಂದಿರಲಿಲ್ಲ.

ದಿನಗಳು ಸರಿದು ಹೋದವು. ಶಾಂತ ಮತ್ತೆ ಗರ್ಭಿಣಿಯಾಗಿದ್ದಳು. ಆ ಸಂತೋಷದಲ್ಲಿ ಅವಳು ಗಂಡನ ತಪ್ಪನ್ನು ಕ್ಷಮಿಸಿದ್ದಳು. ತನ್ನ ಮತ್ತು ತನ್ನ ಗಂಡನ ನಡುವೆ ಏನೂ ನಡದೇ ಇಲ್ಲವೇನೋ ಎಂಬಂತೆ, ಖುಷಿಯಿಂದ ತನ್ನ ಅನುಭವಗಳನ್ನು ಹೇಳಿಕೊಳ್ಳುತ್ತಿದ್ದಳು. ಹೆಂಡತಿಯ ಖುಷಿಯಲ್ಲಿ ಇವನಿಗೂ ನೆಮ್ಮದಿ. ಮಕ್ಕಳ ಬಗ್ಗೆಯೇ ಚಿಂತಿಸದಿದ್ದವನು, ಮಗಳು ಒಬ್ಬಳೇ ಸಾಕು ಎಂದು ಕೊಂಡಿದ್ದ. ಆದರೆ, ಈಗ ಯಾವ ಆಕ್ಷೇಪಣೆಯನ್ನು ಮಾಡಲಾರ. ಏನು ಹೇಳಿದರೆ ಏನು ಆಡುವಳೋ ಎಂದು ಸುಮ್ಮನಾಗಿದ್ದ. ಮಗಳನ್ನು ನೋಡಿಕೊಳ್ಳುವ ಕೆಲಸ ಇವನ ಮೇಲೆ. ಈ ಬಾರಿ ಶಾಂತ ಬಾಣಂತನಕ್ಕೆ ತವರಿಗೆ ಹೋಗಲಿಲ್ಲ. ಹೋಗುವುದಿಲ್ಲವೆಂದು ಹೇಳಿಬಿಟ್ಟಿದ್ದಳು.

* * *

## - - 13 - -

ಶಾಂತಳನ್ನು ಸಮಜಾಯಿಸಿ, ಬಾಣಂತನಕ್ಕೆ ಅವಳನ್ನು ತವರಿಗೆ ಕಳಿಸುವ ಅವನ ಪ್ರಯತ್ನ ಫಲಕಾರಿಯಾಗಲಿಲ್ಲ.

"ಒಂದು ಬಾರಿ, ನಾನು ಹೋಗಿದ್ದಾಗ ನಡೆದ ಘಟನೆಯನ್ನೇ ನಾನಿನ್ನು ಮರೆತಿಲ್ಲ. ನಾನು ಇಲ್ಲೇ ಇದ್ದರೆ, ನೀವು ಬಾಲ ಮುದುರಿ ಕೊಂಡು ಸರಿಯಾಗಿರುತ್ತೀರಿ ..."

"ಹೀಗೆಲ್ಲ ಮಾತನಾಡಿದರೆ ನನಗೆ ಕೋಪ ಬರುತ್ತೆ."

"ನಿಮ್ಮ ನಡತೆಯಿಂದ ನನಗೆಷ್ಟು ಕೋಪ ಬಂದಿರಬಹುದು ಅಂತ ಗೊತ್ತಾ?"

"ನಿನಗೆ ನನ್ನ ಮೇಲೆ ನಂಬಿಕೆ ಇಲ್ಲ. ನಿಮ್ಮಂಥ ಹೆಂಗಸರ ನಡವಳಿಕೆಯಿಂದ ಸಮಾಜಕ್ಕೆ ಏನೂ ಒಳ್ಳೇದಾಗುಲ್ಲ"

"ಯಾವ ಸಮಾಜ? ನನಗೆ ಯಾವ ಸಮಾಜದ ಮಾತೂ ಬೇಕಿಲ್ಲ. ನನ್ನ ಸಂಸಾರ ನನಗೆ ಮುಖ್ಯ. ನಿಮ್ಮ ನಡವಳಿಕೆಯನ್ನು ಕಂಡೂ, ನಾನು ನಿಮ್ಮ ಜೊತೆ ಸಂಸಾರ ಮಾಡಿಕೊಂಡಿದೀನಿ ..... ಅದೂ ಯಾಕೆ ಗೊತ್ತಾ? ಮಗಳಿಗೋಸ್ಕರ, ಹುಟ್ಟಲಿರುವ ಮಗುವಿಗೋಸ್ಕರ ....."

"ಅಂಥಾ ಯಾವ ದ್ರೋಹವನ್ನೂ ನಾನು ಮಾಡಿಲ್ಲ. ಬೆಳೆಯೋ ಮಗಳ ಎದುರಿಗೆ ನನ್ನನ್ನು ಹೀಗೇ ಅಂದೂ ಆಡಿ ಮಾಡಿದ್ರೆ ... ಅವಳ ಮೇಲೆ ಏನು ಪರಿಣಾಮವುಂಟಾಗ

ಬಹುದು ಅಂತ ಯೋಚಿಸಿದೀಯಾ? ನಿನ್ನ ಹೊಟ್ಟೇಲಿರೋ ಮಗು ಯದ್ವಾ ತದ್ವಾ ಬೆಳೆಯುತ್ತೆ ಅಷ್ಟೇ ...."

ಶಾಂತ ಆ ಗಳಿಗೆಯಲ್ಲಿ ಸುಮ್ಮನಾದರೂ, ತಂದೆ ತಾಯಿ ಬಂದು ಕರೆದರೂ, ತವರಿಗೆ ಹೋಗಲು ಒಪ್ಪಲಿಲ್ಲ.

"ಡಾಕ್ಟರು, ಹೆರಿಗೆ ಆಗೋವರೆಗೂ ಪ್ರಯಾಣ ಮಾಡೋದು ಬೇಡವೇ ಬೇಡ ಅಂತ ಹೇಳಿದಾರೆ. ನೀನೇ ಇಲ್ಲಿದ್ದು ಬಿಡು."

"ನಿನ್ನ ಗಂಡ ಅಂತೂ ನಿನ್ನನ್ನು ತುಂಬಾ ಚೆನ್ನಾಗಿ ನೋಡಿಕೊಳ್ತಾರೆ ... ಅದಕ್ಕೇ ನಿನಗೆ ಬಿಟ್ಟು ಬರೋಕೆ ಇಷ್ಟವಿಲ್ಲ ಅಲ್ವಾ?"

"ಹಾಗಲ್ಲ, ಚೊಚ್ಚಲು ಮಗುವಾದದ್ದೇ ತಡವಾಗಿ .... ಈಗ ಮಗುವಾದ ಮೇಲೆ, ಮುಂದೆ ಮಕ್ಕಳಾಗದಂತೆ ಆಪರೇಷನ್ ಮಾಡಿಸಿಕೊಳ್ಳೋಣ ಅಂತ. ಅದೆಲ್ಲಾ ನಮ್ಮ ಡಾಕ್ಟರರ ನರ್ಸಿಂಗ್ ಹೋಮ್‌ನಲ್ಲಿ ಯಾವ ತೊಂದರೆ ಇಲ್ಲದಂತೆ ನಡೆಯುತ್ತೆ."

"ಅದನ್ನ ನಮ್ಮೂರಿನ ಆಸ್ಪತ್ರೇಲೂ ಮಾಡ್ತಾರೆ. ನರ್ಸಿಂಗ್ ಹೋಮ್ ಅಂದ್ರೆ ವಿಪರೀತ ಖರ್ಚಾಗುಲ್ವಾ?"

"ನಿನ್ನ ಅಳಿಯನ ದುಡ್ಡು ತಾನೇ ಖರ್ಚಾಗೋದು. ನಿನಗೇನು ನಷ್ಟ ಅಂತ ....? ನಿನಗೆ ಇಲ್ಲಿ ಇರೋಕೆ ಆಗದಿದ್ದರೆ, ಬೇಡ. ನಾನು ಹೇಗೋ ಮಾಡಿಕೊಳ್ತೀನಿ" ಬಿರುಸಾಗಿ ನುಡಿದಳು.

"ತುಂಬಾ ಒರಟಾಗಿ ಮಾತನಾಡ್ತೀಯಮ್ಮಾ... ಏನಾಗಿದೆ ನಿನಗೆ? ಬಿ.ಪಿ. ಹೆಚ್ಚಿರಬಹುದು"

ಬಿ.ಪಿ.ಯ ಹೆಸರು ಕೇಳಿ ಶಾಂತ ನಡುಗಿದಳು. ಮೆಲ್ಲಗೆ ತನ್ನ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡಳು. ತಾನು ತವರಿಗೆ ಹೋದರೆ, ತನ್ನ ಬಿ.ಪಿ. ಖಂಡಿತಾ ಏರುತ್ತದೆಂದು ಹೆದರಿದಳು. ತಾಯಿಗೆ ಎಲ್ಲವನ್ನು ಹೇಳಿಬಿಡುವ ಮನಸ್ಸಾಗಿತ್ತು. ಆದರೆ, ಗಂಡನನ್ನು ತಾಯಿಯ ಬಳಿ ನಿಷ್ಠೂರ ಮಾಡುವುದು ಸರಿ ಎನಿಸಿರಲಿಲ್ಲ.

"ನೀನು ಈಗ ನಿಮ್ಮೂರಿಗೆ ಹೋಗು. ಹೆರಿಗೆಯ ದಿನದ ಹೊತ್ತಿಗೆ ಬಾ ... ಪ್ರಯಾಣ ಮಾಡಿದರೆ ಬಿ.ಪಿ.ಹೆಚ್ಚಾಗಬಹುದು. ನೀವುಗಳು ಹೀಗೆ ಬಲವಂತ ಮಾಡಿದರೆ, ನನ್ನ ಬಿ.ಪಿ. ಖಂಡಿತಾ ಹೆಚ್ಚಾಗುತ್ತೆ"

"ನಿನ್ನ ಆರೋಗ್ಯ ಮುಖ್ಯ ಶಾಂತ. ನೀನು ಹೇಳೋದೆ ಸರಿ. ಹೆರಿಗೆಯ ಸಮಯಕ್ಕೆ ಬರ್ತೀನಿ. ನಿನ್ನ ಯಜಮಾನರಂತೂ, ಮನೇಲಿ ಯಾವ ಹೆಂಗಸೂ ಇಲ್ಲ ಅಂತ ಯಾವುದನ್ನೂ ಕಡಿಮೆ ಮಾಡಿಲ್ಲ .... ಪಾಪ. ಒಬ್ಬರೇ ಎಷ್ಟು ಕಷ್ಟ ಪಡ್ತಾರೆ. ಯಾರಾದ್ರೂ ಕೆಲಸದವಳನ್ನು ಇಟ್ಟುಕೊಳ್ಳಬೇಕಾಗಿತ್ತು."

"ಈಗ ಅರ್ಥವಾಗ್ತಿದೆಯಾ? ಹಿಂದೆ ಮುಂದೆ ದಿಕ್ಕು ದೆಸೆ ಇಲ್ಲದ ಒಂಟಿ ಬಡಕ ಗಂಡಿಗೆ ನನ್ನನ್ನು ಕೊಟ್ಟು ಮದುವೆ ಮಾಡಿದ್ರಿ .... ಈ ಕಷ್ಟಾನ ನಾನೀಗ ಅನುಭವಿಸ್ತಿದೀನಿ."

"ಮಗಳು ಹುಟ್ಟೋಕೆ ಮುಂಚೆ, ನನ್ನ ಗಂಡನ್ನ ಬಿಟ್ರೆ ಬೇರೆ ಯಾರೂ ಬೇಕಿಲ್ಲ ನನಗೆ ಅಂತಿದ್ದೆ. ಮಕ್ಕಳಾಗದಿದ್ದರೂ, ಗಂಡನ್ನ ಎಂದೂ ದೂಷಿಸಿರಲಿಲ್ಲ ನೀನು. ಈಗ ಏನಾಯ್ತು ....?"

"ಏನಿಲ್ಲ ಬಿಡು. ನಿನಗೆ ಅದೆಲ್ಲ ಅರ್ಥವಾಗುಲ್ಲ" ತಾಯಿ ಹೆಚ್ಚಿಗೆ ಒತ್ತಾಯ ಮಾಡಲಿಲ್ಲ. ಆದರೂ ಏನೋ ಅನುಮಾನ ಕಾಡಿತ್ತು.

ತಂದೆ ತಾಯಿ ಅತ್ತ ಹೋದ ಮೇಲೆ ರಾಮಸ್ವಾಮಿ ಮಡದಿಯ ಮೇಲೆ ರೇಗಿದ್ದ. "ಅಂತೂ ನಿನ್ನ ಹಠಾನೇ ಸಾಧಿಸ್ತಿದೀಯ ... ನಿಮ್ಮ ತಾಯಿಯ ಮನಸ್ಸನ್ನು ನೋಯಿಸಿದೆಯಲ್ಲ. ಸುಮ್ಮನೇ ....."

"ನೀವು ನನ್ನ ಮನಸ್ಸಿಗೆ ಎಷ್ಟು ನೋವು ಮಾಡಿದೀರಿ ಅಂತ ನಿಮಗೆ ಗೊತ್ತಿಲ್ಲ. ಆ ನೋವು ಏನೂಂತ ಅಮ್ಮನಿಗೆ ನಾನು ಹೇಳಿದ್ದಿದ್ರೆ .... ಆ ಮಾತೆ ಬೇರೆಯಾಗಿರುತ್ತಿತ್ತು."

"ನೀನು ಹೇಳಿದ್ರೂ ನನಗೆ ಯಾವ ಭಯವಿಲ್ಲ. ಬೇಕಾದ್ರೆ ನಾನೇ ಎಲ್ಲಾ ಹೇಳ್ತೀನಿ."

"ನಿಮ್ಮ ಅಕ್ಕನ ನಡತೆಯ ಬಗ್ಗೆ ನನಗೇ ಮುಚ್ಚು ಮರೆ ಮಾಡ್ದೋರು ನೀವು. ನಮ್ಮ ಅಮ್ಮನಿಗೆ ಹೇಳೋ ಆಸೆ ಇದ್ದರೆ ಹೇಳಿಬಿಟ್ಟು ಮುಖಕ್ಕೆ ಮಂಗಳಾರತಿ ಮಾಡಿಸಿಕೊಂಡು ಬನ್ನಿ."

"ಆಯ್ತು ಮಹಾ ತಾಯಿ. ಹೇಳುವ ಸಮಯ ಬಂದಾಗ ಹೇಳೇ ಹೇಳ್ತೀನಿ. ಈಗ ನನಗೆ, ನಿನ್ನ, ನನ್ನ ಮಕ್ಕಳ ಆರೋಗ್ಯ ಮುಖ್ಯ. ಆ ಕಾರಣದಿಂದ ಜಗಳವಾಡುವ ಮನಸ್ಸಿಲ್ಲ ನನಗೆ. ಮಕ್ಕಳು ಬೆಳೆದು ದೊಡ್ಡವರಾದ ಮೇಲೆ, ಅವರಿಗೂ ಹೇಳುವ ಮನಸ್ಸಾದರೆ ಹೇಳೇ ಹೇಳ್ತೀನಿ. ಆಗ ನಾನು ನಿನ್ನ ಮಾತನ್ನು ಕೇಳುಲ್ಲ ....."

"ಯಾವ ದೊಡ್ಡ ಸಾವಿತ್ರಿಯ ಕತೆ ಅಂತ ಮಕ್ಕಳಿಗೆ ಹೇಳ್ತೀರಿ ... ಆಗ ಮಕ್ಕಳಿಗೂ ನಿಮ್ಮ ಮನೆಯವರ ಬಗ್ಗೆ ಅಸಹ್ಯ ಮೂಡುತ್ತೆ."

"ಹಾಗೇನಿಲ್ಲ. ನನ್ನ ಮಕ್ಕಳ ಮೈಯಲ್ಲಿ ನನ್ನ ರಕ್ತ ಹರಿದ ಮೇಲೆ ನನ್ನ ಮಾತೂ ಏನೂ ಅನ್ನಿಸುಲ್ಲ. ನನ್ನ ಬಗ್ಗೆ ಹೇಗೆ ಗೌರವ ಆದರ ಇರುತ್ತೋ ಹಾಗೇ, ನನ್ನ ಮನೆಯವರ ಬಗ್ಗೆಯೂ ಗೌರವ ಆದರವಿರುತ್ತೆ."

"ಹುಶಾರ್, ನನ್ನ ಮಕ್ಕಳ ಕಿವಿಗೆ, ನಿಮ್ಮ ಅಕ್ಕನ ಅಥವಾ ಅಕ್ಕನ ಮಗಳ ಬಗ್ಗೆ ತಿಳಿಸಿದರೆ ನನ್ನಾಣೆ ...." ರಾಮಸ್ವಾಮಿ ಶಾಂತಳ ಅಬ್ಬರಕ್ಕೆ ನಡುಗಿದ.

"ಸರಿ, ಸರಿ. ನಾನಾಗಿಯೇ ಖಂಡಿತಾ ಏನೂ ತಿಳಿಸುಲ್ಲ. ಆದರೆ ಎಂದಾದರೂ, ತಾನಾಗಿಯೇ ತಿಳಿದರೆ, ನಾನು ನಿರಾಕರಿಸುವುದಿಲ್ಲ."

"ಆ ಕಾಲ ಬಂದಾಗ ನೋಡಿಕೊಳ್ಳೋಣ. ಮಾತು ಅಂದರೆ ಮಾತು. ನೀವು ಮಾತಿಗೆ ತಪ್ಪಬಾರದು."

"ಹಾಗಾದ್ರೆ ನೀನೂ ಅಷ್ಟೆ. ಇವತ್ತೇ ಕಡೆ, ಮತ್ತೆಂದೂ ಆ ವಿಷಯಗಳ ಬಗ್ಗೆ ಯಾವ ಮಾತನ್ನು ಆಡಬಾರದು."

"ಸರಿ. ನಾನು ಆಡುವುದಿಲ್ಲ. ಆದರೆ ತವರಿಗೆ ಬಾಣಂತನಕ್ಕೆ ಹೋಗು ಅಂತ ಮಾತ್ರ ಬಲವಂತ ಮಾಡಬೇಡಿ."

"ಅಂತೂ ನಿನ್ನ ಹಠವೇ ಹಠ. ಹೆಣ್ಣು ಮಕ್ಕಳು ಬಾಣಂತನಕ್ಕೆ ತವರಿಗೆ ಹೋಗಬೇಕೂಂತ ತುದಿಗಾಲಲ್ಲಿ ನಿಂತಿರುತ್ತಾರೆ."

"ನನಗೆ ಅಂಥ ಭಾಗ್ಯ ಇಲ್ಲದ ಹಾಗೆ ಮಾಡಿದೋರು ನೀನೇ ...."

"ನಿನ್ನ ಹೆಸರು ಮಾತ್ರ ಶಾಂತ. ನಿನ್ನ ಮನದಲ್ಲಿ ಅಶಾಂತಿಯನ್ನು ತುಂಬಿಕೊಳ್ಳೋದು .... ಹಾಗೇ ಇನ್ನೊಬ್ಬರನ್ನು ಅಶಾಂತಿಯಿಂದ ತಳಮಳಗೊಳಿಸೋದು ... ಇನ್ನಾದರೂ ನಿನ್ನ ಹೆಸರನ್ನು ಬದಲಾಯಿಸಬೇಕು."

"ಹಾಗಾದ್ರೆ ನಿಮ್ಮ ಹೆಸರನ್ನು ಖಂಡಿತಾ ಬದಲಾಯಿಸಬೇಕು. ಶ್ರೀರಾಮಚಂದ್ರ ಏಕಪತ್ನೀವ್ರತಸ್ಥನಾಗಿದ್ದ. ಗೊತ್ತಾ?"

"ಶಾಂತಾ ... ಈ ಜನ್ಮದಲ್ಲಿ ನೀನು ಬದಲಾಗುಲ್ಲ. ನಿನ್ನ ಹತ್ತಿರ ವಾದ ಮಾಡೋ

ನಾನು ಮುತ್ಕಾಳ ...." ರಾಮಸ್ವಾಮಿ ಹೆಂಡತಿಯ ಮೇಲೆ ಗದರಿ, ಅಲ್ಲಿಂದ ಸರಿದು ಹೊರಟು ಹೋದ.

ಆ ನಂತರ ಗಂಡ ಹೆಂಡತಿಯರಲ್ಲಿ ಕೆಲವು ದಿನಗಳವರೆಗೆ ಮಾತುಕತೆಯೇ ಇರಲಿಲ್ಲ. ಸಂಸಾರದಲ್ಲಿ ಸ್ವಾರಸ್ಯವೇ ಇಲ್ಲ ಅಂತನ್ನಿಸಿತ್ತು. ಆದರೆ, ಅವಳೊಡನೆ ಮಾತನಾಡಲೂ ಹಿಂಜರಿಯುತ್ತಿದ್ದ. ಈ ಮಧ್ಯೆ ಯಾರಿಗೂ ತಿಳಿಯದಂತೆ ಪಂಡಿತರ ಮನೆಗೆ ಹೋಗಿದ್ದ. ಸುಜಾತಳ ಮದುವೆಯ ವಿವರಗಳನ್ನು ಕೇಳಿ ತಿಳಿದುಕೊಂಡಿದ್ದ.

"ಅನಾನುಕೂಲತೆಯಿಂದ ಮದುವೆಗೆ ಬರಲಾಗಲಿಲ್ಲ. ನನ್ನ ಆಶೀರ್ವಾದಗಳನ್ನು ಸುಜಾತರಿಗೆತಿಳಿಸಿ ಬಿಡಿ" ಎಂದು ಹೇಳಿ ಹೊರಟ. ಹೃದಯ ಭಾರವಾಗಿತ್ತು. ಶಾಂತಳಿಗೆ ಹೆದರಿ, ಸುಜಾತನ್ನ ದೂರ ಮಾಡಿದ್ದಾಯ್ತು .... ಆದರೆ ತಾನು ಮಾಡಿದ್ದು ಸರಿಯೋ ತಪ್ಪೋ ತಿಳಿದಿರಲಿಲ್ಲ. ಆದರೂ ಏನನ್ನೋ ಕಳೆದುಕೊಂಡ ಅನುಭವವಾಗಿತ್ತು.

ದಿನಗಳೆದಂತೆ, ಹಳೆಯ ವಿಷಯಗಳ ಬಗ್ಗೆ ವಾದ ಮಾಡಲಾಗಲೀ, ನೆನಪಿಸಿಕೊಳ್ಳಲಾಗಲೀ ಸಮಯವೇ ಇರುತ್ತಿರಲಿಲ್ಲ. ಮನೆಯ ಕೆಲಸ ಕಾರ್ಯಗಳಲ್ಲಿ ಹೆಂಡತಿಗೆ ತುಂಬಾ ಸಹಾಯ ಮಾಡುತ್ತಿದ್ದ. ಮಗಳನ್ನು ಆಡಿಸುತ್ತಿದ್ದ. ಹೆಂಡತಿಯ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದ. ಆದರೆ ತಮ್ಮಿಬ್ಬರ ಮಧ್ಯೆ ಏನೋ ಒಂದು ಅಂತರ, ಪರದೆಯಂತೆ ಇಳಿಬಿದ್ದಿದೆ ಎಂದು ಅರಿವಾಗಿತ್ತು. ತಮ್ಮಿಬ್ಬರ ನಡುವೆ ಉಂಟಾಗಿರುವ ಈ ಅಂತರವನ್ನು ಹೇಗಾದರೂ ಸರಿ ಮಾಡಿಕೊಳ್ಳಬೇಕೆಂದೆನಿಸುತ್ತಿತ್ತು. ಅದಕ್ಕೆ ತಕ್ಕ ಸಮಯವನ್ನು ಹುಡುಕುತ್ತಿದ್ದ.

ಡಾಕ್ಟರು ಕೊಟ್ಟ ದಿನಕ್ಕಿಂತ ಮೊದಲೇ ಶಾಂತಳಿಗೆ ಹೆರಿಗೆ ನೋವು ಪ್ರಾರಂಭವಾಗಿತ್ತು. ಅವಳನ್ನು ಕರೆದುಕೊಂಡು ಹೋಗಿ, ನರ್ಸಿಂಗ್ ಹೋಮ್‌ಗೆ ಸೇರಿಸಿ ಬಂದು, ಊರಿಗೆ ಟೆಲಿಗ್ರಾಂ ಕೊಟ್ಟು ಮನೆಗೆ ಬಂದ. ಸಂಕೋಚವೆನಿಸಿದರೂ, ಪಕ್ಕದ ಮನೆಯವರಿಗೆ, ವಿಷಯವನ್ನು ತಿಳಿಸಿ ಮಗಳನ್ನು ಅವರ ಮನೆಯಲ್ಲಿ ಬಿಟ್ಟು ಮತ್ತೆ ನರ್ಸಿಂಗ್ ಹೋಮ್‌ಗೆ ಬಂದ. ಅವನು ಬರುವಷ್ಟರಲ್ಲಿ ಅವಳಿಗೆ ಹೆರಿಗೆ ಆಗಿತ್ತು. ಗಂಡು ಮಗುವಿಗೆ ಜನ್ಮವಿತ್ತಿದ್ದಳು. ಆತಂಕ ಉತ್ಸಾಹಗಳಿಂದ ಕಾಯುತ್ತಾ ನಿಂತಿದ್ದವನನ್ನು ಕರೆದು ನರ್ಸು, ಮಗುವನ್ನು ತೋರಿಸಿದ್ದಳು. ಕಣ್ಣು ಮುಚ್ಚಿ ಮಲಗಿ ನಿದ್ರಿಸುತ್ತಿದ್ದ ಮಗು ಮುದ್ದಾಗಿತ್ತು.

"ಶಾಂತ ಹೇಗಿದಾಳೆ?" ಹಣೆಯ ಮೇಲಿನ ಬೆವರನ್ನು ಬರೆಸಿಕೊಳ್ಳುತ್ತಾ ಪ್ರಶ್ನಿಸಿದ.

"ಆರೋಗ್ಯವಾಗಿದ್ದಾರೆ.... ಮನೆಯಿಂದ ಯಾರೂ ಬಂದಿಲ್ಲವಾ ಅಂತ ಕೇಳುತಿದ್ರು.... ಇನ್ನು ಸ್ವಲ್ಪ ಹೊತ್ನಲ್ಲಿ ವಾರ್ಡಿಗೆ ಷಿಫ್ಟ್ ಮಾಡ್ತೀವಿ. ಆಗ ಬಂದು ನೋಡೋರಂತೆ. ಅಲ್ಲಿಯೇ ಕಾಯುತ್ತಾ ನಿಂತಿದ್ದವನನ್ನೂ ಮತ್ತೆ ಅದೇ ನರ್ಸು ಬಂದು ಕರೆದು, ವಾರ್ಡಿನ ಬಳಿಗೆ ಕರೆದೊಯ್ದಳು.

ಗಂಡನನ್ನು ಕಂಡು ಕ್ಷೀಣವಾಗಿ ಮುಗುಳ್ನಕ್ಕಳು ಶಾಂತ. "ಹೇಗಿದೀಯ ಶಾಂತ ....?"

"ಹುಶಾರಾಗಿದೀನಿ. ಆಚೀನ ಕರೆದುಕೊಂಡು ಬರಲಿಲ್ವಾ? ಎಲ್ಲಿ ಬಿಟ್ಟಿದೀರಿ .....?"

"ಪಕ್ಕದ ಮನೇಲಿದಾಳೆ. ಆಮೇಲೆ ಮತ್ತೆ ಕರೆದುಕೊಂಡು ಬರ್ತೀನಿ."

"ಮಗೂನ ನೋಡಿದ್ರಾ? ಗಂಡು ಮಗು ... ಯಾರ ಹಾಗಿದೆ?"

"ಹೂಂ, ನೋಡಿದೆ. ಇಷ್ಟು ಚಿಕ್ಕ ಮಗೂನ ನಾನ್ಹೇಗೆ ನೋಡಿದರೂ ಯಾರ ಹಾಗೆ ಅಂತ ಗೊತ್ತಾಗುಲ್ಲ."

"ಆಚಿ ಹಾಗೇ ಇದಾನೆ ಅಲ್ವಾ? ನನಗೇನೋ ಹಾಗನ್ನಿಸುತ್ತೆ"

"ಈಗಲೇ ಹೇಗೆ ಗೊತ್ತಾಗುತ್ತೆ...." ತಲೆಯಾಡಿಸಿದ.

"ಊರಿಗೆ ಟೆಲಿಗ್ರಾಂ ಕೊಟ್ರಾ? ಅಮ್ಮ ಬರೋ ಮೊದಲೇ ಹೆರಿಗೆ ಆಗಿ ಹೋಯ್ತು ...." ಆ ಮಾತಿಗೆ ಏನೂ ಹೇಳಲಿಲ್ಲ. ಸುಮ್ಮನೇ ಅವಳ ಕಡೆ ನೋಡಿದ.

"ಈಗ ಅನ್ನಿಸ್ತಿದೆ. ನಾನು ಮೊಂಡಾಟ ಮಾಡಬಾರದಾಗಿತ್ತು .... ನಿಮಗೆ ತೊಂದರೆಯಾಯ್ತು ....."

"ಹೋಗಲಿ ಬಿಡು. ಈಗೇಕೆ ಆ ಮಾತು? ಇಲ್ಲಿ ಚೆನ್ನಾಗಿ ನೋಡಿ ಕೊಳ್ಳುತ್ತಿದಾರೆ ತಾನೇ .....?

"ಅಮ್ಮ ಬರೋವರೆಗೂ ನೀವು ರಜ ಹಾಕಿ ಮನೇಲೇ ಇರಬೇಕು. ಇಲ್ಲದಿದ್ರೆ ಆಚಿ ಅಳುತ್ತಾಳೆ."

"ಅವಳೊಬ್ಬಳನ್ನೇ ಮನೇಲಿ ಬಿಟ್ಟು ಹೋಗೋಕೆ ನನಗೆ ಮನಸ್ಸಾದ್ರೂ ಹೇಗೆ ಬರುತ್ತೆ? ಇವತ್ತು ರಾತ್ರಿ ಇಲ್ಲಿ ನಿನ್ನ ಜೊತೆಗೆ ಯಾರಿರುತ್ತಾರೆ?"

"ಯಾರಾದ್ರೂ ಒಬ್ಬಳು ನರ್ಸು ಇರ್ತಾಳೆ. ಹೇಗೋ ಆಗುತ್ತೆ. ನೀವು ಮನೆಗೆ ಹೋಗಿ ..... ಆಚಿ ಎಷ್ಟೋ ಅಳುತ್ತಿರುತ್ತಾಳೋ .....?" ಶಾಂತಳ ಕಣ್ಣುಗಳಲ್ಲಿ ನೀರಾಡಿತ್ತು.

"ನೀನು ಚಿಂತಿಸಬೇಡ. ನಾನು ಮತ್ತೊಮ್ಮೆ ಡಾಕ್ಟರರಿಗೆ ಹೇಳಿ ಹೋಗ್ತೀನಿ. ನಾಳೆ ನಿಮ್ಮ ತಾಯಿ ಬಂದ ತಕ್ಷಣ, ಕರೆದುಕೊಂಡು ಬರ್ತೀನಿ ... ಆಯ್ತಾ?"

"ಟೆಲಿಗ್ರಾಂ ಯಾವಾಗ ತಲುಪುತ್ತೋ ....."

"ತಲುಪಿದ ಕೂಡಲೇ ಹೊರಡ್ತಾರೆ. ನಿಮ್ಮಮ್ಮನಿಗೆ ಆತಂಕವಿರುಲ್ವೇ? ಟ್ಯಾಕ್ಸಿ ಮಾಡಿಕೊಂಡು ಬಂದರೆ, ನಾಲ್ಕು ಗಂಟೆ ಪ್ರಯಾಣ ಅಷ್ಟೇ ...."

"ನಾನು ಅಮ್ಮ ಅಮ್ಮಾ ಅಂತ ನರಳುತ್ತಿದ್ದಾಗ, ಎಲ್ಲರೂ ನನ್ನನ್ನು ವಿಚಿತ್ರವಾಗಿ ನೋಡ್ತಿದ್ರು ... ಅಮ್ಮ ಖಂಡಿತಾ ಬೈತಾಳೆ ...." ಶಾಂತಳಿಗೆ ತನ್ನ ತಪ್ಪಿನ ಅರಿವಾಗಿತ್ತು. ಆದರೆ ರಾಮಸ್ವಾಮಿ ಆ ಮಾತನ್ನು ಎತ್ತಿ ಆಡಿ ಆಕ್ಷೇಪಿಸಲಿಲ್ಲ. ಹೇಗೂ ಎಲ್ಲಾ ಕಳೆದಿದೆ. ಎಲ್ಲಾ ಸರಿ ಹೋಗುತ್ತೆ ಅನ್ನೋ ನಂಬಿಕೆ.

ಶಾಂತಳ ಕೈಯನ್ನು ಹಿಡಿದು ಮೃದುವಾಗಿ ಒತ್ತಿದ. "ನಾನು ಬರ್ತೀನಿ. ಸುಮ್ಮನೇ ಏನೇನೋ ಚಿಂತಿಸಬೇಡ. ಬೆಳಿಗ್ಗೆ ಬೇಗ ಬರ್ತೀನಿ" ಅಲ್ಲೇ ನಿಂತಿದ್ದ ಸಿಸ್ಟರ್‌ಗೆ ಮತ್ತೊಮ್ಮೆ ಹೇಳಿ ಅಲ್ಲಿಂದ ಸೀದಾ ಮನೆಗೆ ಬಂದ.

ಬೆಳಗಿನ ಝಾವದ ಹೊತ್ತಿಗೆ ಮನೆಯ ಮುಂದೆ ಟ್ಯಾಕ್ಸಿ ನಿಂತ ಸದ್ದಿಗೆ ಎಚ್ಚರವಾಯಿತು. ಶಾಂತಳ ತಾಯಿ ತಂದೆ, ಹಾಗೂ ಅಣ್ಣ ಅತ್ತಿಗೆ ಬಂದಿದ್ದರು. ಕಾಫಿ ಕುಡಿದು, ಸ್ನಾನ ಮಾಡಿ ಆಯಾಸವನ್ನು ಪರಿಹರಿಸಿಕೊಂಡರು. ಎಲ್ಲರೂ ನರ್ಸಿಂಗ್ ಹೋಮ್ ಕಡೆ ಹೊರಟರು. ತಾಯಿ ಆಕ್ಷೇಪಿಸದೇ ಬಿಡಲಿಲ್ಲ.

"ವಿವೇಕ ಸಾಲದು ನಿನಗೆ. ಏನಾದ್ರೂ ಹೆಚ್ಚು ಕಡಿಮೆ ಆಗಿದ್ದಿದ್ರೆ? ಯಾರಾದ್ರೂ, ಹಿರೇ ದಿಕ್ಕು, ಹೆಣ್ಣು ದಿಕ್ಕು, ಇಲ್ಲದ ಮನೆ ಹೆಣ್ಣು ಮಕ್ಕಳು ಹೀಗಾಡಿದ್ದನ್ನ ನಾನು ಕೇಳಿಲ್ಲ. ಏನೋ ದೇವರು ದೊಡ್ಡವನು, ಎಲ್ಲಾ ಸರಿ ಹೋಯ್ತು ....."

"ಅಂತೂ ನನ್ನನ್ನ ಅನ್ನೋಕೆ ಎಲ್ಲರಿಗೂ ಒಂದು ಮಾತು ಸಿಕ್ಕಂತಾಯಿತು .... ನಾನು ಅಲ್ಲಿಗೇ ಬಾಣಂತನಕ್ಕೆ ಬಂದಿದ್ದರೆ, ಈ ಸಲವೂ ಹೆಣ್ಣು ಮಗು ಹುಟ್ಟಿರುತ್ತಿತ್ತು" ತನ್ನನ್ನು ತಾನು ಸಮರ್ಥಿಸಿಕೊಂಡಳು.

"ಅದೆಲ್ಲಾ ಬರೀ ಸುಳ್ಳು .... ಎಂಥಾ ಮಗು ಜನ್ಮ ತಾಳಬೇಕು ಅಂತ ಮೊದಲೇ

ನಿರ್ಣಯವಾಗಿ ಹೋಗಿರುತ್ತೆ. ಒಂದು ವೇಳೆ ಹೆಣ್ಣು ಹುಟ್ಟಿದ್ದರೇ .... ಆಗೇನು ಮಾಡ್ತಿದ್ದೆ?"

"ಹೋಗಲಿ ಬಿಡಿ ಅತ್ತೆ. ಎಲ್ಲಾ ಸರಿ ಹೋಯ್ತಲ್ಲ .... ಈಗ ಯಾಕೆ ಸುಮ್ಮನೇ ಮಾತುಗಳು?" ಶಾಂತಳ ಅತ್ತಿಗೆ ನುಡಿದಳು.

"ಆಚೀ ನೋಡಿದ್ಯಾ ನಿನ್ನ ಪುಟ್ಟ ತಮ್ಮನ್ನ !" ...... ಶಾಂತ ಮಾತನಾಡಿಸಿದಾಗ ಆಚಿ ಇತ್ತ ತಿರುಗಲಿಲ್ಲ. ಅಳು ಮುಖ ಮಾಡಿಕೊಂಡು ಅತ್ತ ಮುಖ ತಿರುಗಿಸಿದ್ದಳು.

"ಅವಳಿಗೆ ನಿನ್ನ ಮೇಲೆ ಕೋಪ .... ಕ್ರಮೇಣ ಎಲ್ಲಾ ಸರಿ ಹೋಗುತ್ತೆ ...." ರಾಮಸ್ವಾಮಿ ನುಡಿದಾಗ, ಶಾಂತ ನಸುನಕ್ಕಳು. ಗಂಡನ ಮೇಲಿನ ಪ್ರೀತಿ ಹೆಚ್ಚಾಗಿತ್ತು. ನಿಶ್ಚಿಂತೆಯಾಗಿದ್ದಳು.

ಹತ್ತು ದಿನಗಳ ನಂತರ, ಶಾಂತ ಮಗುವಿನೊಂದಿಗೆ ಮನೆಗೆ ವಾಪಸ್ಸಾದಳು. ಮನೆಯಲ್ಲಿ ಸಂಭ್ರಮದ ವಾತಾವರಣ. ಶಾಂತಳ ತಾಯಿ ಹಾಗೂ ಅತ್ತಿಗೆ ಮನೆಯ ಕೆಲಸ ಕಾರ್ಯಗಳನ್ನು ವಹಿಸಿಕೊಂಡಿದ್ದರು.

"ರೀ ಮಗೂಗೆ ಏನು ಹೆಸರಿಡೋಣ ...." ಶಾಂತ ಅಕ್ಕರೆಯಿಂದ ಕೇಳಿದ್ದಳು.

"ನನಗೆ ಅದೆಲ್ಲಾ ತಿಳಿಯುಲ್ಲ. ನಿನಗೆ ಯಾವ ಹೆಸರು ಇಷ್ಟವೋ ಅದನ್ನೇ ಇಟ್ಟರಾಯ್ತು ..."

"ಯಾವುದಾದ್ರೂ ಹೊಸಾ ಹೆಸರನ್ನು ಇಡೋಣ .... ಏನಂತೀರಿ?"

"ಯಾಕೆ? ನಾಗರಾಜ ಅಂತ ಇಡೋಲ್ವೆ?" ರೇಗಿಸಿದ್ದ.

"ಗಂಡು ಮಗುವಿಗೆ, ಮನೆ ದೇವರ ಹೆಸರನ್ನು ಇಡಬೇಕು" ತಾಯಿ ಮಧ್ಯೆ ಪ್ರವೇಶಿಸಿದ್ದಳು.

"ಎಲ್ಲಾ ಹೆಸರನ್ನು ಇಟ್ಟರಾಯ್ತು ಬಿಡಮ್ಮ. ಕರೆಯೋಕೆ ಅಂತ ಒಂದು ಹೊಸ ಹೆಸರನ್ನಿಡೋಣ ಅಂತ." ಶಾಂತ ಗಂಡನ ಕಡೆ ನೋಡಿದಳು.

"ಕರೆಯೋಕೆ, ಇಡೋಕೆ ಬೇರೆ ಬೇರೆ ಹೆಸರೋಕೆ? ನಿಮ್ಮ ತಂದೆಯ ಹೆಸರನ್ನೇ ಇಟ್ಬು ಬಿಡಿ" ಮಾವ ಸೂಚಿಸಿದರು.

"ಏನೂ ಬೇಡ ......" ರಾಮಸ್ವಾಮಿ ತಟ್ಟನೆ ನುಡಿದಿದ್ದ. ತಂದೆಯ ಜೀವನ ಸುಖಮಯವಾಗಿರಲಿಲ್ಲ. ಹಾಗಾಗುವುದು ಬೇಡವೆಂಬ ಅನಿಸಿಕೆ. ಶಾಂತ ಸಂದೇಹದಿಂದ ಗಂಡನ ಕಡೆ ನೋಡಿದಳು. ರಾಮಸ್ವಾಮಿ ಅಲ್ಲಿಂದ ಎದ್ದು ಹೋಗಿದ್ದ.

"ಗಂಡು ಮಗು, ಲಕ್ಷಣವಾಗಿ ಯಾವುದಾದ್ರೂ ಒಳ್ಳೆಯ ಹೆಸರನ್ನಿಡಿ .... ಮಗಳಿಗೆ ಲಕ್ಷಣವಾಗಿ ನಾಗಲಕ್ಷ್ಮಿ ಅಂತ ನಾಮಕರಣ ಮಾಡಿದ್ರಿ. ಈಗ ನೋಡಿ .... ನಾಗೂ ಅಂತಲೂ ಕರೆಯುಲ್ಲ. ಲಕ್ಷ್ಮೀ ಅಂತಲೂ ಕರೆಯುಲ್ಲ. ಅದೇನೋ ಆಚಿಯಂತೆ ..... ಇದೇ ಹೆಸರು ಉಳಿದು ಬಿಡುತ್ತೆ ನೋಡು"

"ನಾಗಲಕ್ಷ್ಮಿ ಅನ್ನೋ ಹೆಸರು ಹಳೇದು ಅಂತ ಇವರಿಗೆ ಇಷ್ಟವಿರಲಿಲ್ಲ .... ಆದ್ರೂ ಲಕ್ಷ್ಮೀ ಅಂತಲೇ ಕರೆಯುತ್ತಿದ್ದುದು. ಆದರೆ, ಮುದ್ದಿಗೆ ಕರೀತಾ ಕರೀತಾ ಆಚಿ ಆಯ್ತು ....." ಎಲ್ಲರೂ ನಕ್ಕರು.

"ಈಗ ಹಾಗೆ ಮಾಡಬೇಡಿ. ಯಾವ ಹೆಸರನ್ನಿಡ್ತೀರೋ ಅದನ್ನೇ ಲಕ್ಷಣವಾಗಿ ಬಾಯಿ ತುಂಬಾ ಕರೀರಿ. ಅದೇ ಉಳಿಯುತ್ತೆ" ತಾಯಿ ಮತ್ತೆ ಸಲಹೆ ನೀಡಿದಳು.

ನಾಮಕರಣ ಸಮಾರಂಭಕ್ಕೆ, ಶಾಂತಳ ಮನೆಯವರೆಲ್ಲಾ ಬಂದಿದ್ದರು. ರಾಮಸ್ವಾಮಿಗೆ ಪಿಚ್ಚೆನ್ನಿಸಿತ್ತು. ನನ್ನವರು ನನಗೆ ಯಾರೂ ಇಲ್ಲ. ಹತ್ತಿರದಲ್ಲೇ ಇರುವ

ಸುಜಾತಳನ್ನಾದರೂ ಕರೆಯುವಂತಿದ್ದರೇ .... ಅವಳಿಗೂ ಈಗ ಮದುವೆಯಾಗಿದೆ. ಗಂಡ ಹೆಂಡತಿ ಇಬ್ಬರೂ ಬರುತ್ತಿದ್ದರೇನೋ .... ತನಗೆ ಆಪ್ತ ಸ್ನೇಹಿತರೂ ಇಲ್ಲ. ಮನಸ್ಸಿಗೆ ಬೇಸರವಾಗಿತ್ತು. ಗಂಡನ ಅನ್ಯಮನಸ್ಕತೆಯನ್ನು ಶಾಂತ ಗಮನಿಸಲಿಲ್ಲ. ಅವಳ ಸಂಭ್ರಮ ಅವಳಿಗೆ.

ಶಾಸ್ತ್ರೋಕ್ತವಾಗಿ ನಾಮಕರಣ ಸಮಾರಂಭವನ್ನು ನಡೆಸಿದರು. ರಾಮಸ್ವಾಮಿಯೇ ಮಗನ ಕಿವಿಯಲ್ಲಿ ಮೂರು ಬಾರಿ "ಸುಮಂತ .... ಸುಮಂತ ..... ಸುಮಂತ" ಎಂದು ಉಚ್ಚರಿಸಿದ. ಈ ಆಯ್ಕೆಯೂ ಶಾಂತಳದೇ.

ಸುಮಂತ ...... ಹೆಸರು ಚೆನ್ನಾಗಿದೆ ಅಂತ ಕೆಲವರು ನುಡಿದರೆ, ಕೆಲವರು ಬೇರೆ ಯಾವುದಾದರೂ ಹೆಸರನ್ನಿಡಬಹುದಾಗಿತ್ತು ಅಂತಂದರು. ಆ ರಾತ್ರಿ ಮಗುವನ್ನು ತೊಟ್ಟಿಲಿಗೆ ಹಾಕುವ ಸಂಭ್ರಮ. ತೊಟ್ಟಿಲನ್ನು ಅಲಂಕರಿಸಿ, ಮುತ್ತೈದೆಯರು ಆರತಿ ಬೆಳಗಿ, ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗಿ ಲಾಲಿ ಹಾಡಿದರು. ಒಳಬಾಗಿಲಲ್ಲಿ ನಿಂತು, ರಾಮಸ್ವಾಮಿ ಎಲ್ಲವನ್ನು ವೀಕ್ಷಿಸುತ್ತಿದ್ದ. ನನ್ನ ತಂದೆ ತಾಯಿಗೆ, ಈ ಸಂಭ್ರಮವನ್ನು ನೋಡುವ ಸೌಭಾಗ್ಯವಿರಲಿಲ್ಲ ಎಂದು ಮನಸ್ಸು ಖಿನ್ನವಾಗಿತ್ತು.

ಆರತಿಗೆ ಬಂದಿದ್ದ ಹೆಂಗಳೆಯರೆಲ್ಲ ಹೊರುಟ ಹೋಗಿದ್ದರು. ಅತ್ತೆ, ಮಗೂ ಬಾಣಂತಿಗೆ ದೃಷ್ಟಿ ನೀವಾಳಿಸಿ ತೆಗೆದು, ರಕ್ಷೆ ಇಟ್ಟರು.

ಸುಮ್ಮನೇ ಮಲಕ್ಕೋ .... ಎದ್ದು ಕೂತಿರಬೇಡ. ಸೊಂಟ ನೋವು ಬರುತ್ತೆ. ಮಗೂಗೆ ಆಯಾಸ ಆಗುತ್ತೆ" ಅತ್ತೆ ಅತ್ತ ಹೋದ ಕೂಡಲೇ ರಾಮಸ್ವಾಮಿ ಒಳಗೆ ಬಂದ.

"ಯಾಕೆ ಒಂಥರಾ ಇದೀರಿ? ಅಮ್ಮ ಏನಾದ್ರೂ ಅಂದಳಾ?" ಶಾಂತ ಕೇಳಿದಾಗ, ಇಲ್ಲ ಎನ್ನುವಂತೆ ತಲೆಯಾಡಿಸಿದ.

"ಮಗೂಗೆ, ಎಲ್ಲಾ ಸೇರಿ ನೂರು ರೂಪಾಯಿ ಬಂದಿದೆ. ಅದರಲ್ಲಿ ಒಂದು ಬೆಳ್ಳಿ ಗಿಲಿಕೆ, ಒಂದು ಬೆಳ್ಳಿ ಒಳಲೆ ತಂದು ಕೊಡಿ ...." ಶಾಂತ ಸಂಭ್ರಮದಿಂದ ನುಡಿದಳು. "ಹಾಗೇ ಉಳಿದ ದುಡ್ಡಿನಲ್ಲಿ ಒಂದು ಬೆಳ್ಳಿಯ ಉಡಿದಾರ ತಂದು ಬಿಡಿ ......" ರಾಮಸ್ವಾಮಿ ನಕ್ಕ.

"ಆಚಿಗೆ ಇದನ್ನೆಲ್ಲಾ ತಂದಿದ್ರಾ? .... ಅವಳಿಗೆ ಎಷ್ಟು ದುಡ್ಡು ಬಂದಿತ್ತು ಅಂತ ಕೇಳುವ ತವಕವಾದರೂ ತಡೆದುಕೊಂಡ. ದಿಂಬಿನ ಕೆಳಗೆ ಮಡಿಸಿಟ್ಟ ನೋಟುಗಳನ್ನು ತೆಗೆದು, ಮತ್ತೆ ಎಣಿಸಿದಳು.

"ಬೆಳ್ಳಿ ಗಿಳ್ಳಿ ನನಗೆ ತಿಳೀದು. ನಿನ್ನ ಅಣ್ಣನ ಹತ್ತಿರ ತರಿಸ್ಕೋ ..."

"ಅವನ ಕೈಗೆ ಹಣ ಕೊಟ್ಟರಾಯ್ತು... ಆಚಿ ಹುಟ್ಟಿದಾಗ್ಲೂ ಹಾಗೇ ಮಾಡಿದ. ಕೊಟ್ಟ ಹಣವನ್ನು ಇವತ್ತಿಗೂ ಕೊಟ್ಟಿಲ್ಲ ......" ಮೊಟ್ಟ ಮೊದಲ ಬಾರಿಗೆ ಅಣ್ಣನನ್ನು ಆಕ್ಷೇಪಿಸಿದ್ದಳು.

"ಹಾಗೇಕೆ ಮಾಡಿದ ನಿಮ್ಮಣ್ಣ? ....." ಕುತೂಹಲದಿಂದ ಕೇಳಿದ.

"ಏನೋ ಯಾರಿಗೆ ಗೊತ್ತು? ಯಾರ ಕೈಗೆ ಕೊಟ್ಟನೊ?" ಮೂತಿ ಸೊಟ್ಟಗೆ ಮಾಡಿದಳು. ಈಗ ರಾಮಸ್ವಾಮಿ ನಕ್ಕ.

"ನಿನ್ನ ಅತ್ತಿಗೆಗೆ ಗೊತ್ತೆ? ....."

"ಗೊತ್ತಿಲ್ಲ. ಗೊತ್ತಾದ್ರೆ ಒಂದು ಹಗರಣವೇ ಆಗುತ್ತೇಂತ ನಾನು ಸುಮ್ಮನಾಗಿ ಬಿಟ್ಟೆ ....."

"ಒಳ್ಳೆಯ ಕೆಲಸಾ ಮಾಡಿದೆ ಬಿಡು. ನಿನ್ನ ಅಣ್ಣನ ಮಾನವನ್ನು ಉಳಿಸಿದೆ ...." ಇದ್ದಕ್ಕಿದ್ದಂತೆ ಶಾಂತ ಸುಮ್ಮನಾದಳು. ತಾನು ಈ ವಿಷಯವನ್ನು ಗಂಡನಿಗೆ ಹೇಳಬಾರದಾಗಿತ್ತೆನಿಸಿತ್ತು. ಹಂಗಿಸಿ ಆಡಲು ಗಂಡನಿಗೆ ಬಂದು ಮಾತು ಸಿಕ್ಕಂತಾಯಿತೆನ್ನಿಸಿತ್ತು. ಆದರೆ ಮತ್ತೆ ಏನನ್ನು ಪ್ರಶ್ನಿಸಲಿಲ್ಲ ಇವನು.

"ಹೋಗಿ .... ಆಚಿ ಏನು ಮಾಡ್ತಿದೆ ಅಂತ ನೋಡಿ ..... ಅದಕ್ಕೂ ದೃಷ್ಟಿ ತೆಗೆಯಬೇಕಾಗಿತ್ತು. ರಾತ್ರಿಯೆಲ್ಲಾ ಅತ್ತರೆ ಅಮ್ಮ ಹೇಗೆ ಸುಧಾರಿಸ್ತಾಳೆ?"

ರಾಮಸ್ವಾಮಿ ಹೊರಬಂದ. ಶಾಂತಳ ಅಣ್ಣ ಏನೋ ಒಂದು ರೀತಿಯಾಗಿ ನಕ್ಕ. ಇವನಿಗೆ ಅಸಹ್ಯವೆನಿಸಿತು. ಅತ್ತಿಗೆಯ ತೊಡೆಯ ಮೇಲೆ ಆಚಿ ಮಲಗಿದ್ದಳು. ಇವನನ್ನು ಕಂಡೊಡನೆ, "ಸ್ವಲ್ಪ ಇವಳನ್ನು ಎತ್ತಿ ಹಾಸಿಗೆ ಮೇಲೆ ಮಲಗಿಸ್ತೀರಾ?" ಅಂತ ಕೇಳಿದಳು. ಇವನು ಆಚಿಯನ್ನು ಎತ್ತಿಕೊಂಡ. ಭುಜದ ಮೇಲೆ ಒರಗಿಸಿಕೊಂಡು, ಅಲ್ಲಿಯೇ ಹಾಸಿದ್ದ ಹಾಸಿಗೆಯ ಮೇಲೆ ಮಲಗಿಸಿ, ಮೆಲ್ಲನೆ ತಟ್ಟಲಾರಂಭಿಸಿದ. ಆಗಾಗ್ಗೆ ಶಾಂತಳ ಅತ್ತಿಗೆಯ ಕಡೆ ನೋಡಿದ. "ತನ್ನ ತಪ್ಪು ಏನು ಇಲ್ಲದಿದ್ದರೂ, ಶಾಂತ ಏನೇನು ಆಡಿಬಿಟ್ಟಳು ....? ಈ ಪುಣ್ಯಾತ್ಮ ಅಣ್ಣ. ಅತ್ತಿಗೆಗೆ ಮಾಡುತ್ತಿರುವುದೂ ಮೋಸ ತಾನೇ? ಅಣ್ಣನಿಗೇಕೆ ಬುದ್ಧಿ ಹೇಳಲಿಲ್ಲ? ಎಂದು ಕೊಂಡು ಅಣ್ಣನ ಕಡೆ ತಿರುಗಿದ. ಹೆಂಡತಿಯೊಡನೆ ಏನೋ ಮಾತಾಡುತ್ತಾ ಕೂತಿದ್ದವನನ್ನು ಕಂಡು ಮೈ ಮುಳ್ಳಾಯಿತು. "ಸಮಯ ಬರಲಿ, ಈ ಅಣ್ಣನ ದುಶ್ಚಟ ಏನು ಅಂತ ತಿಳಿದೇ ತಿಳಿಯುತ್ತೆ. ಆಗ ನೋಡಿಕೊಳ್ತೀನಿ" ಎಂದು ತನ್ನ ಹಲ್ಲುಗಳನ್ನು ಕಡಿದ. ನಿದ್ರಿಸುತ್ತಿದ್ದ ಮಗುವಿಗೆ ಹೊದಿಕೆ ಹೊದೆಸಿ, ಎದ್ದ.

* * *

## - - 14 - -

ಮಕ್ಕಳು ಬೆಳೆದು ಸ್ಕೂಲಿಗೆ ಹೋಗಲಾರಂಭಿಸಿದ್ದರು. ದಿನಗಳು ಬೇಗ ಬೇಗ ಓಡುತ್ತಿದೆಯೆಂದೆನಿಸುತ್ತಿತ್ತು. ಮನೆಯ ಖರ್ಚು ವೆಚ್ಚಕ್ಕೆ ಬರುವ ಸಂಬಳ ಸಾಲದು ಅಂತೆನ್ನಿಸಿದರೂ, ರಾಮಸ್ವಾಮಿ ತುಟಿ ಪಿಟಕ್ಕೆನುತ್ತಿರಲಿಲ್ಲ. ಮಕ್ಕಳ ಪಾಲನೆ ಪೋಷಣೆಯ ನಡುವೆ ಶಾಂತಳ ಬಾಯಿ ಜೋರಾಗಿತ್ತು. ಸದಾ ಸಿಡಿ ಸಿಡಿ, ಪಿಟಿ ಪಿಟಿ, ಮಕ್ಕಳ ಮೇಲೆ ರೇಗುವುದು. ತನ್ನನ್ನು ತಾನು ಹಳಿದುಕೊಳ್ಳುವುದು ಇದೆಲ್ಲಾ ಸರ್ವೇ ಸಾಮಾನ್ಯವಾಗಿತ್ತು. ಇದೆಲ್ಲವನ್ನು ನೋಡಿಕೊಂಡು ಸುಮ್ಮನಿರಲು ರಾಮಸ್ವಾಮಿಯಿಂದ ಸಾಧ್ಯವಾಗುತ್ತಿರಲಿಲ್ಲ. ಮಾತಿನ ಚಕಮಕಿ ನಡೆಯುತ್ತಿತ್ತು. ಅಷ್ಟಾದರೂ ಸಂಸಾರದ ಬಂಧನ ಮತ್ತೆ ಇಬ್ಬರೂ ಸರಿ ಹೋಗಿಸಿಕೊಳ್ಳುತ್ತಿದ್ದರು.

"ಮಕ್ಕಳನ್ನು ಸಾಕಿ ಬೆಳೆಸುವುದು ಇಷ್ಟು ಕಷ್ಟ ಅಂತ ನನಗೆ ಗೊತ್ತಿರಲೇ ಇಲ್ಲ. ಮುಂದೆ ಏನು ಗತಿ ಅಂತ?"

"ಯಾವ ವಿಷಯ ಹೇಳ್ತಾ ಇದೀಯ?"

"ಈಗಿನ್ನು ಚಿಕ್ಕವರು ಸರಿ. ಬೆಳೆದು ದೊಡ್ಡವರಾಗ್ತಾ ಮ್ಮ ಜವಾಬ್ದಾರಿ ಹೆಚ್ಚುತ್ತೆ. ಆಚಿ ಬೆಳೆದು ದೊಡ್ಡವಳಾದ ಮೇಲೆ ಮದುವೆ ಮಾಡಿ ಕಳಿಸಬೇಡವೇ? ..... ಎಲ್ಲಾ ಹೇಗಾಗುತ್ತೋ ಅಂತ, ನೆನೆಸಿಕೊಂಡರೆ ಭಯವಾಗುತ್ತೆ ....."

"ಈ ವಿಷಯವನ್ನು ನಾವು ಮಕ್ಕಳು ಹುಟ್ಟೋ ಮುಂಚೇನೇ ಯೋಚಿಸಬೇಕಾಗಿತ್ತು ..... ಅಲ್ವಾ? ಈ ಮಾತು ಶಾಂತಳಿಗೆ ಹಿಡಿಸಲಿಲ್ಲ.

"ಮಕ್ಕಳಿಲ್ಲದ ಮನೆ ಅದೇನು ಚೆನ್ನ? ಹೇಗೋ ಆಗುತ್ತೆ ಬಿಡಿ. ನಂಗೇನು ಗೊತ್ತಿತ್ತು. ಆಸ್ತಿ ಪಾಸ್ತಿ ಏನೂ ಇಲ್ಲದ ನಿರ್ಗತಿಕ ನೀವು ಅಂತ"

"ನಿಮ್ಮಪ್ಪನ ಮನೆಯವರು ಮಹಾ ಆಸ್ತಿವಂತರು ನೋಡು ...."

"ನಮ್ಮಪ್ಪನ ಮನೆ ಮಾತು ನಿಮಗೇಕೆ? ....."

"ನಮ್ಮಪ್ಪ ಅಮ್ಮ ಬದುಕಿಲ್ಲ. ಅದಕ್ಕೆ ಇಷ್ಟು ಧಾರಾಳವಾಗಿ ಮಾತಾಡ್ತಿದೀಯ ..... ನಮ್ಮಮ್ಮ ಬದುಕಿರಬೇಕಾಗಿತ್ತು. ಅದ್ಹೇಗೆ ಸಂಭಾಳಿಸುತ್ತಿದ್ದೆಯೋ ....?"

"ನನ್ನದು ಆಶ್ಲೇಷಾ ನಕ್ಷತ್ರ. ಅತ್ತೆ ಇಲ್ಲದ ಮನೆಯನ್ನೇ ನೋಡುತ್ತಿದ್ದುದು. ಆದರೆ ನಿಮ್ಮಂಥೋರು ಸಿಗ್ತೀರಿ ಅಂತ ನನಗೆ ಗೊತ್ತಿರಲಿಲ್ಲ"

"ನನಗೂ ಗೊತ್ತಿರಲಿಲ್ಲ. ನಿನ್ನಂಥೋಳು ಸಿಗ್ತೀಯ ಅಂತ... ಹೆಸರಿಗೆ ತಕ್ಕಂತೆ ಶಾಂತತೆಯೇ ಇಲ್ಲ"

"ಹೆಸರಿಗೆ ತಕ್ಕ ಹಾಗೆ ಯಾರೂ ಇರುಲ್ಲ ಬಿಡಿ" ಅವನೆಡೆ ಓರೆ ದೃಷ್ಟಿ ಬೀರಿದಳು.

"ನನ್ನನ್ನ ಹಾಗೆ ನೋಡಬೇಡ ಕಂಡ್ಯಾ? ನಾನು ಹೆಸರಿಗೆ ತಕ್ಕ ಹಾಗೇ ಇದೀನಿ. ಅದಕ್ಕೇ ಹೆಸರಿಡುವಾಗ, ಯೋಚಿಸಿ ಹೆಸರನ್ನಿಡಬೇಕೂಂತ ಅನ್ನೋದು"

"ಹಾಗಾದ್ರೆ ನಿಮ್ಮ ಮಕ್ಕಳಿಗೇಕೆ ನೀವು ಒಳ್ಳೆಯ ಹೆಸರನ್ನಿಡಲು ಸೂಚಿಸಲಿಲ್ಲ?"

"ಏನಾಗಿದೆ ಈಗ?"

"ಲಕ್ಷ್ಮೀ ಅಂತ ಬಾಯಿ ತುಂಬಾ ಕರೆಯುವುದನ್ನು ಬಿಟ್ಟು ಆಚಿ ಮಾಡಿಟ್ಟಿರಿ. ಸುಮಂತನ್ನ ಸೋಮ ಮಾಡಿದಿರಿ ....."

"ಅವನನ್ನು ಸೋಮ ಅಂತ ಕರೆದದ್ದು ನಾನಲ್ಲ. ಏನೇ ಅನ್ನು ನಿನ್ನ ಮಗನಿಗೆ ಸೋಮಾರಿತನ ಜಾಸ್ತಿ. ಆಚಿ, ಸೋಮಾರಿ ಸೋಮಾರಿ ಅಂತ ಕೂಗಿ ಕೂಗಿ ಅದೇ ಹೆಸರು ಉಳೀತು"

"ಅವಳಿಗೆ ಅದನ್ನು ಹೇಳಿಕೊಟ್ಟೋರು ನೀವೇ ತಾನೇ? ..... ನೀವೇನೋ ಮಹಾ ಚಟುವಟಿಕೆಯೋರ ತರಹ, ನನ್ನ ಮಗನ್ನ ಸದಾ ಸೋಮಾರಿ ...... ಸೋಮಾರಿ ..... ಅಂತ ಕರೀತಿದ್ದೋರು ನೀವೇ ಈ ಅಪ್ಪ ಆ ಮಗಳು ...."

"ಸೋಮ ಅನ್ನೋ ಹೆಸರು ಸರಿಯಾಗಿದೆ ಬಿಡು .... ಸುಮಾ ಅಂತಲೋ ಸುಮೀ ಅಂತಲೋ ಕರೆದಿದ್ರೆ, ಹೆಣ್ಣು ಮಗು ಅಂತ ತಿಳಿದು ಕೊಳ್ಳುತ್ತಿದ್ರು .... ಸೋಮ ಈಶ್ವರನ ಹೆಸರು"

"ನನಗೆಲ್ಲಾ ಗೊತ್ತು. ಮೆಲ್ಲಗೆ ಮಕ್ಕಳನ್ನು ನಿಮ್ಮ ಕಡೆಗೆ ಮಾಡಿಕೊಳ್ಳುವ ಉಪಾಯ ನಿಮ್ಮದು .... ಆದರೆ ಇದು ಎಂದಿಗೂ ಸಾಧ್ಯವಿಲ್ಲ. ಎಂದಿದ್ರೂ ಮಕ್ಕಳು ನನ್ನ ಕಡೆಗೇನೇ ... ಹೊತ್ತು ಹೊತ್ತು ಸಾಕಿ ಸಲಹಿರೋಳು ನಾನು ...."

"ಹಾಗಾದ್ರೆ ನನ್ನ ಪಾತ್ರ ಏನೂ ಇಲ್ಲ ಅನ್ನು" ಈ ಮಾತಿಗೆ ಶಾಂತ ಉತ್ತರಿಸದೇ ಎದ್ದು ಹೊರಟವಳನ್ನು, ರಾಮಸ್ವಾಮಿ ತಡೆದ.

"ಯಾವಾಗ್ಲೂ ಹೀಗೇ ಅಸಂಬಂಧ್ಧ ಮಾತನ್ನಾಡಿ ನನ್ನನ್ನು ಅಂತೀಯಲ್ಲ. ನಿನಗೆ ಏನೂ ಅನ್ನಿಸುಲ್ವಾ?"

"ನೀವೆಂದು ನನ್ನಿಂದ ಕೆಲವು ವಿಷಯಗಳನ್ನು ಮುಚ್ಚಿಟ್ಟಿರೋ ಅಂದೇ ನನ್ನ ಪ್ರೀತಿ ಬತ್ತಿ ಹೋಯಿತು" ರಾಮಸ್ವಾಮಿ ಪೆಚ್ಚಾದ. ಶಾಂತ ಎದ್ದು ಹೋದಳು. ನಾನು ಯಾವ ತಪ್ಪನ್ನು ಮಾಡಿಲ್ಲ. ಆದರೆ ಅದೇಕೆ ಇವಳಿಗೆ ಅರ್ಥವಾಗುಲ್ಲ?

ದಿನಗಳು ಸರಿದವು. ರಾಮಸ್ವಾಮಿ ಎರಡು ಅಂಗಡಿಗಳಲ್ಲಿ ಲೆಖ್ಖ ಬರೆಯುವ

ಕೆಲಸವನ್ನು ಒಪ್ಪಿಕೊಂಡಿದ್ದ. ಹೇಗೋ ಸಂಸಾರ ನಡೆಯುತ್ತಿತ್ತು. ಹೈಸ್ಕೂಲಿನಲ್ಲಿ ಓದುತ್ತಿದ್ದ ಆಚಿ ಬೆಳೆದು ಯುವತಿಯಾಗಿದ್ದಳು.

"ಎಸ್ಸೆಲ್ಸಿ ಆಗ್ತಿದ್ದ ಹಾಗೇ ಮದುವೆ ಮಾಡಿ ಬಿಡೋಣ .... ಆಚಿಗೆ" ಒಂದು ದಿನ ಶಾಂತ ಹೇಳಿದ್ದಳು.

"ಮದುವೆ? ಇಷ್ಟು ಬೇಗ? ಬೇಡ ಕಣೇ ..... ನಾಲ್ಕಾರು ವರ್ಷ ಹಾಯಾಗಿ ನಮ್ಮ ಮನೇಲಿರಲಿ"

"ಬೆಳೆದು ನಿಂತಿರೋ ಹುಡುಗೀನ ಮನೇಲಿ ಇಟ್ಟುಕೊಂಡರೆ ಜನ ಏನಂತಾರೆ?"

"ಇನ್ನು ಚಿಕ್ಕ ವಯಸ್ಸು ಅದಕ್ಕೆ ಹಾಗೆ ಹೇಳಿದೆ. ನಮ್ಮ ಮಗಳು ನಮ್ಮ ಮನೇಲಿದ್ರೆ ಯಾರಿಗೇನಂತೆ?" ಸಿಡಾರನೆ ಸಿಡುಕಿದ್ದ.

"ನಿಮಗೆ ಅರ್ಥವಾಗುಲ್ಲ. ಈಗ ಚಿಕ್ಕ ವಯಸ್ಸು. ತೆಳ್ಳಗೆ ಬೆಳ್ಳಗೆ ಚೆನ್ನಾಗಿದ್ದಾಳೆ. ನಾಲ್ಕಾರು ಜನ ಕೇಳಿಕೊಂಡು ಬರ್ತಾರೆ. ನಾವು ಕಷ್ಟ ಪಟ್ಟು ಹುಡುಕಬೇಕಾಗಿಲ್ಲ ....."

"ಹಾಗಂತ, ಯಾರೋ ಬಂದು ಕೇಳಿ ಬಿಟ್ಟರೆ, ಕಳಿಸಿ ಕೊಟ್ಟು ಬಿಡೋಕೆ ಆಗುಲ್ಲ ...."

"ಹಾಗೆಲ್ಲಿ ಹೇಳಿದೆ? ಸರಿಯಾರಿರೋರನ್ನ ಆರಿಸೋಣ. ಒಳ್ಳೇ ಕೆಲಸ, ಓದು, ಒಳ್ಳೆ ಮನೆತನ, ತುಂಬಾ ಆಸ್ತಿ ಪಾಸ್ತಿ ಇರೋರನ್ನ ನೋಡೋಣ. ಸುಖವಾಗಿರುತ್ತಾಳೆ" ರಾಮಸ್ವಾಮಿ ಅವಳಿಗೆ ತಿಳಿಯದಂತೆ ನಕ್ಕ.

"ಒಳ್ಳೇ ಕೆಲಸ, ಆಸ್ತಿ ಪಾಸ್ತಿ ಇರೋರು, ತಮ್ಮ ಸಮನಾದ ವರನ್ನೇ ನೋಡ್ತಾರೆ. ಈ ಗುಮಾಸ್ತನ ಮಗಳನ್ನು ಯಾಕೆ ಮಾಡಿಕೊಳ್ತಾರೆ?"

"ಅದಕ್ಕೇ ನಾನು ಬಡಕೊಂಡಿದ್ದು. ಆಸ್ತಿ ಇರಬೇಕೂಂತ. ಒಂದು ಸ್ವಂತ ಮನೆಯಿಲ್ಲ ನಮ್ಮ ಯೋಗ್ಯತೆಗೆ?"

"ಮತ್ತೆ ಅದೇ ಜಾಡಿಗೆ ಬಂದ್ಯಲ್ಲಾ. ಎಲ್ಲಾ ಹೇಗೋ ಆಗುತ್ತೆ. ಬ್ರಹ್ಮ ಅವಳ ಹಣೆಯಲ್ಲಿ ಯಾರನ್ನು ಬರೆದಿದಾನೋ .....?"

"ಬ್ರಹ್ಮ, ಈಶ್ವರ, ಅಂತ ದೇವರ ಮೇಲೆ ಭಾರ ಹಾಕಬೇಡಿ. ನಿಮಗೂ ಸ್ವಲ್ಪ ಜವಾಬ್ದಾರಿ ಇರಲಿ"

"ನನಗದೆಲ್ಲಾ ಗೊತ್ತಾಗುಲ್ಲ. ನಿನಗಾದರೆ, ಅನೇಕರು ಪರಿಚಯಸ್ಥರಿದಾರೆ. ಹೇಗೂ ಅದೆಲ್ಲಾ ಹೆಂಗಸರಿಗೆ ಸೇರಿದ್ದು. ನೀನೇ ಒಬ್ಬ ಒಳ್ಳೆಯ ಹುಡುಗನನ್ನು ಗೊತ್ತು ಮಾಡು. ನಾನು ಕನ್ಯಾದಾನ ಮಾಡ್ತೀನಿ"

"ನನಗೆ 'ಗಜ ಕೇಸರಿ ಯೋಗ' ಇದೆ ಅಂತ ಪಂಡಿತರು ಹೇಳಿದ್ದರು. ಅದರಂತೆ ನಾನೇ ಎಲ್ಲಾ ತೀರ್ಮಾನ ತಗೋ ಬೇಕು ... ನೀವು ಹೆಸರಿಗೆ ಮನೆ ಯಜಮಾನ ಅಷ್ಟೇ ... ನಾನು ಮುಂದುವರೆಯದೇ ಯಾವ ಕೆಲಸವೂ ನಡೆಯುಲ್ಲ ಈ ಮನೆಯಲ್ಲಿ ..."

"ಇರಬಹುದು. ಇನ್ನು ಮುಂದೆ ನನ್ನನ್ನು ಏನೂ ಕೇಳಬೇಡ" ಅವನೂ ಮುನಿಸಿಕೊಂಡ. ಇವಳ ವಟವಟ ಈ ಜನ್ಮದಲ್ಲಿ ತಪ್ಪಿದ್ದಲ್ಲ. ರಿಟೈರ್ ಆದ ಮೇಲೆ ಏನು ಗತಿ ಅಂತೆನಿಸಿತ್ತು.

ಲಂಗದಾವಣಿ ಉಟ್ಟು ಸ್ಕೂಲಿಗೆ ಹೋಗುತ್ತಿದ್ದ ಆಚಿ ಎಲ್ಲರಿಗಿಂತ ದೊಡ್ಡವಳಂತೆ ಕಾಣುತ್ತಿದ್ದಳು. ಬೀದಿಯ ಕಾಮಣ್ಣರು ರೇಗಿಸಿ ಚುಡಾಯಿಸುತ್ತಿದ್ದರು. ಆಚಿ ಮನೆಯಲ್ಲಿ ದೂರುತ್ತಿದ್ದಳು. ರಾಮಸ್ವಾಮಿಯ ಎದೆ ಗುಂಡಿಗೆ ನಿಂತಂತಾಗುತ್ತಿತ್ತು.

"ನಮ್ಮ ಮನೆಯ ಹೆಣ್ಣು ಮಕ್ಕಳಿಗೆ ಇದ್ಯಾವ ಶಾಪ? ಅಂತನ್ನಿಸದೇ ಇರುತ್ತಿರಲಿಲ್ಲ. ಆದರೂ ಮಗಳಿಗೆ ಧೈರ್ಯ ಹೇಳುತ್ತಿದ್ದ"

"ಇದೆಲ್ಲಾ, ಕೆಲಸ ಕಾರ್ಯವಿಲ್ಲದೇ, ಬೀದಿ ಬೀದಿ ತಿರುಗುವ ಪುಂಡರ ಮಾತು. ಇದಕ್ಕೆಲ್ಲಾ ನಿಗಾ ಕೊಡಬೇಡ. ನಿನ್ನ ಪಾಡಿಗೆ ನೀನು ಹೋಗು ...... ಬಾ ..... ಬೀದಿ ನಾಯಿಗಳು ಬೊಗಳಿದರೆ, ಹೆದರುವುದೇಕೆ?"

"ನಿಮ್ಮ ಮಾತು ಚೆನ್ನಾಗಿದೆ. ಬೆಳೆದ ಹುಡುಗಿ ಒಬ್ಬಳೇ ಹೇಗೆ ಓಡಾಡ್ತಾಳೆ? ಇವತ್ತು ದೂರ ನಿಂತು ವಟಗುಟ್ಟುವ ನಾಯಿಗಳು ನಾಳೆ ಹತ್ತಿರ ಬಂದರೆ ...?"

"ಶಾಂತಾ, ಮಕ್ಕಳನ್ನು ಹೆದರಿಸಬಾರದು... ಧೈರ್ಯ ಕಲಿಸಬೇಕು. ಎಲ್ಲಾ ಕಾಲದಲ್ಲೂ, ಎಲ್ಲಾ ತರಹದ ಜನರೂ ಇರ್ತಾರೆ. ಧೈರ್ಯವಾಗಿ ಎದುರಿಸುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕು."

"ನಿಮ್ಮ ಮಾತು, ನಿಮಗೇ ಅರ್ಥವಾಗುತ್ತೋ ಇಲ್ಲವೋ? ನಾನೋ ನೀವೋ ಒಂದೆರಡು ದಿನ ಅವಳ ಜೊತೆ ಸ್ಕೂಲಿನ ತನಕ ಹೋಗಿ ಬರೋಣ."

"ಏನಮ್ಮಾ ಆಚಿ, ನಿನ್ನನ್ನ ಮಾತ್ರ ರೇಗಿಸ್ತಾರೋ ನಿನ್ನ ಸ್ನೇಹಿತೆಯರನ್ನು ರೇಗಿಸ್ತಾರೋ....?

"ಎಲ್ಲರನ್ನು ರೇಗಿಸ್ತಾರೆ ......"

"ಮತ್ತೆ ಸರಿ ಬಿಡು. ನಿನ್ನ ಸ್ನೇಹಿತೆಯರು ಏನಂತಾರೆ?"

"ಕೆಲವರು ಕಿಸ ಕಿಸ ನಗ್ತಾರೆ. ಕೆಲವರು ಬೈತಾರೆ ..... ನಾನು ಮಾತ್ರ ನನ್ನ ಪಾಡಿಗೆ ನಾನು ಬರ್ತೀನಿ"

"ಅದೇ ಒಳ್ಳೇದು. ಒಂಟಿಯಾಗಿ ಮಾತ್ರ ಓಡಾಡಬೇಡ. ಗುಂಪು ಗುಂಪಾಗಿ ನೀವುಗಳು ಇದ್ದರೆ, ಯಾರಿಗೂ ಹತ್ತಿರ ಬರುವ ಧೈರ್ಯ ಇರುಲ್ಲ ... ತಿಳೀತಾ?"

"ಹೂಂನಪ್ಪಾ ...."

"ಪರೀಕ್ಷೆ ಯಾವಾಗ? ..... ಚೆನ್ನಾಗಿ ಓದು. ಅತ್ತ ಇತ್ತ ಧ್ಯಾನ ತಿರುಗಲೇ ಬಾರದು" ರಾಮಸ್ವಾಮಿ ತನ್ನ ಉಪದೇಶ ಮುಗಿಯಿತು ಎನ್ನುವಂತೆ ಅಲ್ಲಿಂದ ಎದ್ದು ಹೋದಾಗ ಶಾಂತ ಶುರು ಮಾಡಿದಳು.

"ಫ್ಯಾಷನ್ನು ಅಂತ ಕತ್ತು, ಬೆನ್ನು ಕಾಣಿಸಿಕೊಂಡು ತಿರುಗುತ್ತೀರಿ. ಚುಡಾಯಿಸದೇ ಏನು ಮಾಡುತ್ತವೆ ಪೋಲಿ ಮುಂಡೇವು. ಮೈ ತುಂಬಾ ಸೆರಗು ಹೊದ್ದುಕೊಂಡು ಓಡಾಡಿದರೆ ನಿಮಗೆ ಮರ್ಯಾದೆ."

"ಅಮ್ಮ ..... ನನ್ನ ಹತ್ತಿರ ಅಂಥಾ ರವಿಕೇನೇ ಇಲ್ಲ"

"ಅದಕ್ಕೇ.... ನಾನು ಇಂಥಾ ರವಿಕೆಗಳನ್ನು ಹೊಲಿದು ಕೊಡೋದು" ಎನ್ನುತ್ತಾ ಮಗಳನ್ನೇ ದಿಟ್ಟಿಸಿದಳು. ನಾಲ್ಕು ಜನರಲ್ಲಿ ಎದ್ದು ಕಾಣುವಂತಹ ರೂಪವತಿ ಅಲ್ಲದಿದ್ದರೂ, ಲಕ್ಷಣವಾಗಿರುವ ಹುಡುಗಿ. ನಾಳೆ ಏನಾದರೂ ಹೆಚ್ಚು ಕಡಿಮೆ ಆದರೆ, ತಲೆ ಎತ್ತಿ ತಿರುಗಾಡೋದು ಹೇಗೆ ಅನ್ನೋ ಭಯ. ಮಾರನೇ ದಿನವೇ ತವರು ಮನೆಗೆ ಕಾಗದ ಬರೆದಳು. "ಅತ್ತಿಗೆ, ನಿಮ್ಮ ಕಡೆ ಯಾವುದಾದರೂ ವರ, ನಮ್ಮ ಆಚಿಗೆ ತಕ್ಕಂತಹವನಿದ್ದರೆ ನೋಡಿ. ಆದಷ್ಟು ಬೇಗ ಮದುವೆ ಮಾಡಿ, ನಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುವ ಆಸೆ ನಮ್ಮದು" ಅಂತ ಬರೆದಿದ್ದಳು.

ಎಸ್ಸೆಲ್ಸಿ ಪಾಸಾದ ನಂತರ, ತಂದೆಯ ಮಾತಿಗೆ ಬೆಲೆ ಕೊಟ್ಟು ತಾಯಿಯ ಮಾತನ್ನು ಮೀರಿ ಕಾಲೇಜಿಗೆ ಸೇರಿದಳು. ಕಾಲೇಜು ಹುಡುಗಿಯರ ಬಿಂಕ ಬಿನ್ನಾಣ, ವೈಯಾರವನ್ನು

ಇವಳು ತೋರುವಂತಿಲ್ಲ. ತಾಯಿ ಕಾಲೇಜು ಬಿಡಿಸಿ ಬಿಡುತ್ತೇನೆಂದು ಹೆದರಿಸುತ್ತಿದ್ದಳು. ಮನೆಯ ಕೆಲಸ ಕಾರ್ಯಗಳನ್ನು ಕಲಿತ್ಕೋ ಅಂತ ಒತ್ತಾಯ ಮಾಡುತ್ತಿದ್ದಳು.

ಕೆಲವೇ ತಿಂಗಳುಗಳ ನಂತರ, ಆಚಿಗೆ ಮದುವೆ ಗೊತ್ತಾಗಿತ್ತು. ವರನ ಕಡೆಯವರು, ಅತ್ತಿಗೆಯ ಸಂಬಂಧಿಗಳು. ಸಾಕಷ್ಟು ಅನುಕೂಲವಂತರು. ಹುಡುಗನೂ ಹೆಚ್ಚಿಗೆ ಓದಿರಲಿಲ್ಲ. ತಂದೆಯ ಬಿಸಿನೆಸ್‌ನ್ನು ಮಗ ನೋಡಿಕೊಳ್ಳುತ್ತಿದ್ದ. ಹೆಣ್ಣು ಮಕ್ಕಳಿಗೆ ಮದುವೆ ಆಗಿತ್ತು. ಇದಕ್ಕಿಂತ ಇನ್ನೇನುಬೇಕು? ರಾಮಸ್ವಾಮಿ ಬೇಕು ಬೇಡ ಎಂದು ಏನನ್ನು ಹೇಳಲಿಲ್ಲ. ತಟಸ್ಥನಾಗಿದ್ದ ವರನ ಕಡೆಯವರು ಬಂದರು. ವಧು ಪರೀಕ್ಷೆ ಆಯಿತು. ಆಚಿ ಅವರಿಗೆ ಒಪ್ಪಿಗೆಯಾದಳು.

"ಏನಮ್ಮಾ ಆಚಿ, ಹುಡುಗ ನಿನಗೆ ಒಪ್ಪಿಗೇನಾ?" ತಂದೆ ಕೇಳಿದ್ದ.

"ಅವಳಿಗೇನು ತಿಳಿಯುತ್ತೆ? ನನ್ನನ್ನು ನನ್ನ ಮದುವೆ ಸಮಯದಲ್ಲಿ ಕೇಳಿದ್ರಾ?"

"ನಿನ್ನ ಕಾಲ ಅಲ್ಲ ಈಗ. ಈಗಿನ ಕಾಲದವರಿಗೆ ಅವರದೇ ಆದ ಸ್ವಂತ ಅಭಿಪ್ರಾಯಗಳಿರುತ್ತವೆ. ನಿನ್ನಿಷ್ಟ ಏನು ಹೇಳು ಆಚಿ?"

"ಅವಳಿಗೂ ಇಷ್ಟವಾಗಿದೆ. ಅಲ್ವೇನೇ?"

"ಅವಳೇ ಹೇಳಲಿ ಬಿಡು. ನೀನ್ಯಾಕೆ ಉತ್ತರ ಕೊಡ್ತೀಯ? ನಾಳೆ ನನ್ನನ್ನೊಂದು ಮಾತು ಕೇಳಲಿಲ್ಲ ಅಂತ ಅವಳು ಅಂದ್ಕೋ ಬಾರದು"

"ಅಪ್ಪಾ..... ನನಗೀಗಲೇ ಮದುವೆ ಇಷ್ಟವಿಲ್ಲ" ಶಾಂತ ಬೆಚ್ಚಿದಳು.

"ಈಗ ಹೇಳ್ತೀಯಲ್ಲೇ ಪೆದ್ದೇ.... ಅವರುಗಳು ಬಂದು, ತಿಂದು, ಉಂಡು ನೋಡಿಕೊಂಡು, ಒಪ್ಪಿಗೆ ಕೊಟ್ಟಿದಾರೆ... ತಮಾಷೆಯಲ್ಲ..... ಈಗ ನಮಗೆ ಇಷ್ಟವಿಲ್ಲ ಅಂತಂದ್ರೆ ಬೈತಾರೆ ಅಷ್ಟೇ. ಅತ್ತಿಗೆ ಏನಂದುಕೊಳ್ತಾರೆ?"

"ಹೌದಮ್ಮ ಆಚಿ, ನೀನೇಕೆ ಈ ಮೊದಲೇ ಹೇಳಲಿಲ್ಲ? ಹೋಗಲಿ ಬಿಡು. ಮದುವೇನ ಇನ್ನೆರಡು ವರ್ಷ ಬಿಟ್ಟು ಮಾಡಿಕೊಡ್ತೀನಿ ಅಂತ ಗಂಡಿನವರಿಗೆ ತಿಳಿಸಿದರಾಯ್ತು"

"ಚೆನ್ನಾಗಿದೆ, ಎರಡು ವರ್ಷದ ತನಕ ನಮಗೋಸ್ಕರ ಕಾಯ್ತಾ ಕೂತಿರ್ತಾರಾ? ಖಂಡಿತಾ ಇಲ್ಲ. ಕೈಗೆ ಬಂದ ತುತ್ತು ಬಾಯಿಗಿಲ್ಲ ಅನ್ನೋದು ಅವಿವೇಕ. ತೆಪ್ಪಗೆ ಒಪ್ಕೋ..... ಇಂಥ ಒಳ್ಳೆ ಸಂಬಂಧ ಮತ್ತೆ ಸಿಗುಲ್ಲ"

"ಒಳ್ಳೆ ಸಂಬಂಧ ಅಂತ ಹೇಗೆ ಹೇಳ್ತೀಯ?"

"ಅವರ ನಡೆ-ನುಡಿ, ಆಚಾರ-ವಿಚಾರ ಎಲ್ಲಾ ನಮ್ಮ ಅತ್ತಿಗೆಗೆ ತಿಳಿದದ್ದೇ....."

"ಸರಿ ನೋಡೋಣ. ನಾನು ವರನ ತಂದೆಯ ಹತ್ತಿರ ಮಾತನಾಡ್ತೀನಿ" ಅಂತೆಯೇ ರಾಮಸ್ವಾಮಿ ವರನ ಊರಿಗೆ ಹೋದ. ಅವರ ಬಿಸಿನೆಸ್ಸು ವ್ಯಾಪಾರ, ವ್ಯವಹಾರಗಳ ಬಗ್ಗೆ ತಿಳಿದುಕೊಂಡ. ಆಚಿಗೆ ಒಳ್ಳೆಯ ಮನೆ ಸಿಕ್ಕಿತು ಎಂಬ ನೆಮ್ಮದಿ ಉಂಟಾಯಿತು. ತನ್ನ ಮನದ ಮಾತನ್ನು ಹೇಳಲಾಗದೇ ಹಾಗೇ ವಾಪಸ್ಸು ಬಂದ. ಅಷ್ಟರೊಳಗೆ ಶಾಂತ ಮಗಳಿಗೆ ಸಾಕಷ್ಟು ತರಬೇತಿ ಕೊಟ್ಟಿದ್ದಳು. "ಅಪ್ಪಾ ಅವರು ಏನಂದ್ರು" ಅಂತ ಇವಳು ಕೇಳಲಿಲ್ಲ. ಇದನ್ನು ರಾಮಸ್ವಾಮಿ ಗಮನಿಸಿದ.

"ಅವರುಗಳು ಒಪ್ಪಿದರೆ, ನೀನು ಅಲ್ಲಿಯೇ ಕಾಲೇಜಿಗೆ ಸೇರಿಕೊಳ್ಳಬಹುದು. ಮನೆಗೆ ಹತ್ತಿರದಲ್ಲೇ ಕಾಲೇಜಿದೆ"

"ಗಂಡನ ಮನೆಗೆ ಹೋಗೋದು, ಓದುಕ್ಕಲ್ಲ, ಸಂಸಾರ ಮಾಡುಕ್ಕೆ"

"ನಾನು ಓದ್ತೀನಪ್ಪಾ....... ನೀವು ಮೊದಲೇ ಹೇಳಿಬಿಡಿ"

"ಸರಿ ಓದೂವಂತೆ......." ಶಾಂತ ತಮಾಷೆಯಾಗಿ ನಕ್ಕಾಗ ಅವಳಿಗೆ ಸಿಟ್ಟು ಬಂದಿತ್ತು. ಅಲ್ಲಿಂದ ಓಡಿದಳು.

"ಕೊಡೋ ಬಿಡೋ ಮಾತು ಏನಾದ್ರೂ ಬಂತಾ?" ಶಾಂತ ಆತಂಕದಿಂದ ಕೇಳಿದಳು.

"ಅಂಥಾ ಯಾವ ಮಾತನ್ನು ಆಡಲಿಲ್ಲ ಅವರು. ಅವರಿಗೇ ಬೇಕಾದಷ್ಟಿದೆ. ಒಬ್ಬನೇ ಮಗ. ಎಲ್ಲಾ ಇವನದೇ. ಅವನು ಹೆಚ್ಚಿಗೆ ಓದಿಲ್ಲ. ಅದೇ ಒಂದು ಕೊರತೆ"

"ಅದರಿಂದಲೇ ನಮ್ಮ ಆಚೀನ ಒಪ್ಪಿರುವುದು" ಎಂದು ಹೇಳುವ ತವಕವಾದರೂ ತಡೆದುಕೊಂಡಳು. ನಾನು ಆಚಿಗೆ ಎಲ್ಲಾ ಕೆಲಸ ಕಾರ್ಯ ಬರುತ್ತೆ ಅಂತ ಸುಳ್ಳು ಹೇಳಿದೀನಿ. ಮದುವೆಯ ಹೊತ್ತಿಗೆ, ಒಂದು ಅನ್ನ ಸಾರು ಪಲ್ಯ ಮಾಡೋದನ್ನಾದರೂ ಕಲಿಸಲೇ ಬೇಕು, ನಾನು"

"ಆಕೆ ಇನ್ನು ಗಟ್ಟಿಮುಟ್ಟಿಯಾಗಿದಾರೆ. ಇವಳು ನಿಧಾನವಾಗಿ ಅಲ್ಲೇ ಕಲಿತುಕೊಳ್ತಾಳೆ ಬಿಡು"

"ಆದರೂ ಏನೂ ಕೆಲಸ ಬರುಲ್ಲ ಅಂತಂದ್ರೆ ಆಡದೇ ಬಿಡ್ತಾರಾ? ನನಗೇ ಅವಮಾನ......"

"ನಿನಗೆ ಏನೂ ಬರುತ್ತಿರಲಿಲ್ಲ. ಎಲ್ಲವನ್ನು ನಾನೇ ತಾನೇ ಹೇಳಿಕೊಟ್ಟಿದ್ದು"

"ಸಾಕು ಸಾಕು. ಯಾರಾದ್ರೂ ಕೇಳಿಸ್ಕೊಂಡ್ರೆ ನಗ್ತಾರೆ"

"ಅಂದ್ಹಾಗೆ ಅಕ್ಕ ಪಕ್ಕ ಯಾರಿದಾರೋ...... ನನಗೆ ಇದುವರೆಗೂ ತಿಳೀದು"

"ತಿಳಿದು ಏನು ಮಾಡ್ತೀರಿ? ಎಲ್ಲರ ಮನೆ ಗಂಡಸರೂ ಬೆಳಗಾಗೆದ್ದು ಕೆಲಸಕ್ಕೆ ಹೋಗ್ತಾರೆ. ಸಂಜೆ ಹೊತ್ತಿಗೆ ಮನೆಗೆ ವಾಪಸ್ಸು ಬರ್ತಾರೆ"

"ನೀನು ಅವರಿವರನ್ನ ಪರಿಚಯ ಮಾಡಿಕೊಂಡಿದೀಯ ಹೇಗೆ ಅಂತ ಮದುವೆಯ ತಯಾರಿಗೆ ಅವರಿವರ ಸಲಹೆ ಬೇಕಾಗುತ್ತದೆ. ನನಗಂತೂ ಏನೂ ತಿಳೀದು. ನಿನಗೂ ಮೊದಲ ಅನುಭವ...... ಈ ಮೊದಲೇ ಮದುವೆ ಮುಂಜಿ ಮಾಡಿದೋರಿಗೆ ಖರ್ಚು ವೆಚ್ಚ, ಅಂದಾಜು ಅಳತೆ ಎಲ್ಲಾ ತಿಳಿದಿರುತ್ತೆ"

"ಅದನ್ನೆಲ್ಲಾ ನಾನು ವಿಚಾರಿಸಿ ತಿಳಿದುಕೊಳ್ತೀನಿ. ಅಂದ್ಹಾಗೆ ಹಣಕ್ಕೆ ಏನು ಮಾಡ್ತೀರಿ? ಲಗ್ನ ಪತ್ರಿಕೆ ಯಾವಾಗ ಅಂತ ಹೇಳಿದ್ರಾ?"

"ನೀನು ಇವತ್ತೇ ಹೋಗಿ ಶಾಸ್ತ್ರಿಗಳ ಹತ್ತಿರ ಮಾತ್ನಾಡಿಕೊಂಡು ಬಾ. ಲಗ್ನಕ್ಕೆ ದಿನಗಳು ಮಾತ್ರ ಪ್ರಶಸ್ತವಾಗಿರಬೇಕು. ಹಾಗೇ ನಮ್ಮ ಸುಮಂತನಿಗೆ ಉಪನಯನ ಮಾಡಿಬಿಡೋಣ......"

"ನಾನೇ ಹೇಳೋಣ ಅಂತಿದ್ದೆ. ಅವನಿಗೀಗ ಗುರುಬಲವೂ ಇದೆ. ಬರೋ ನೆಂಟರಿಷ್ಟರು ಹೇಗೋ ಬಂದಿರುತ್ತಾರೆ. ಒಂದೆಳೆ ಜನಿವಾರ ಹಾಕಿದರೆ, ಇನ್ನು ಅವನ ಮದುವೆ ತನಕ ನಮಗೆ ಯಾವ ಚಿಂತೆ ಇರುಲ್ಲ"

"ಆಚಿಯ ಹೆಸರಿನಲ್ಲಿ ಒಂದಿಷ್ಟು ಹಣ ಬ್ಯಾಂಕಿನಲ್ಲಿದೆ. ಮೇಲೆ ಸ್ವಲ್ಪ ಸಾಲ ತಗೋತೀನಿ. ಒಡವೆ ವಸ್ತು ವರೋಪಚಾರಕ್ಕೆ ಏನು ಮಾಡೋದು ಅಂತ......"

"ನನ್ನ ಹತ್ತಿರ ಇರೋ ಒಡವೆಗಳಿಗೆ ಪಾಲಿಷ್ ಹಾಕಿಸಿ, ಅವಳಿಗೆ ಕೊಟ್ಟು ಬಿಡ್ತೀನಿ. ಹಸೆಮಣೆ ಮೇಲೆ ಕೂರುವ ಹುಡುಗಿ.... ಭಿಂ ಅಂತ ಅನ್ನಿಸಬಾರದು"

"ಏನೋ ಅದೆಲ್ಲಾ ನಿನಗೇ ಸೇರಿದ್ದು"

"ಯಾವಾಗ ಏನು ಕೆಲಸ ಮಾಡ್ತೀವಿ ಅಂತಂದ್ರೂ ಹಣದ ಮುಗ್ಗಟ್ಟು...." ಶಾಂತ ಗೊಣಗಿದಳು. ಮಗಳ ಮದುವೆಯ ಉತ್ಸಾಹಕ್ಕಿಂತ ಅಧೀರತೆ ಹೆಚ್ಚಾಗಿತ್ತು.

ಹಣವೊಂದಿದ್ದರೆ ಏನನ್ನಾದರೂ ನಿಭಾಯಿಸಬಹುದು. ಏನಾಗುತ್ತೋ ಹೇಗಾಗುತ್ತೋ..... ಇದೇ ಆತಂಕದಲ್ಲಿ ಅತ್ತಿಗೆಗೆ ಮತ್ತೆ ಪತ್ರ ಬರೆದಳು.

"ನಿಮ್ಮ ಕೈಲಾದಷ್ಟು ಹಣವನ್ನು ಸಾಲ ಅಂತ ಕೊಟ್ಟರಿ. ನಿಧಾನವಾಗಿ ಖಂಡಿತಾ ತೀರಿಸುತ್ತೀವಿ...." ಅಂತ. ಅತ್ತಿಗೆ ವನಜ ಒಂದೆರಡು ದಿನಗಳಲ್ಲಿ ಹಣದೊಂದಿಗೆ ಬಂದಿಳಿದಳು.

"ನಾನೇ ಕೊಡೋಣ ಅಂತಿದ್ದೆ. ಆದರೆ ಭಾವ ಏನಂದುಕೊಳ್ತಾರೋ ಅಂತ ಸುಮ್ಮನಿದ್ದೆ. ನಾವು ತಾನೇ ಇನ್ಯಾರಿಗೆ ಖರ್ಚು ಮಾಡಬೇಕು? ನಮಗೆ ಮಕ್ಕಳಿಲ್ಲ. ಆಚೀನೇ ನಮ್ಮ ಮಗಳು. ನೀವು ಸಂಕೋಚ ಪಟ್ಟುಕೊಳ್ಳಬೇಡಿ"

ಅತ್ತಿಗೆಯ ಬೆಂಬಲದಿಂದ ಧೈರ್ಯ ಬಂದರೂ, ಮನ ಮುದುರಿತ್ತು.

"ಮನೆ ಕಟ್ಟಿ ನೋಡು ; ಮದುವೆ ಮಾಡಿ ನೋಡು ಅಂತ ಗಾದೇನೇ ಇದೆ. ನೀನು ಸಂಕೋಚ ಪಟ್ಟುಕೋ ಬೇಡ. ನಾನು ದಾನ ಅಂತ ಕೊಡುತ್ತಿಲ್ಲ. ಸಾಲ ಅಂತ ಕೊಡ್ತಿದೀನಿ. ನೀನೇ ಕೇಳಿದ್ದು ಒಳ್ಳೇದಾಯ್ತು. ಇಲ್ಲದಿದ್ದರೆ ನನಗೆ ಮುಜುಗರವಾಗುತ್ತಿತ್ತು. ಪಾಪ, ಭಾವಂಗೆ ಯಾರ ಬೆಂಬಲ ಇಲ್ಲ. ನಿನ್ನ ತವರಿನವರೂ ಸಹಾಯಕ್ಕೆ ಒದಗಲಿಲ್ಲ ಅನ್ನೋ ಹಾಗಿಲ್ಲ. ಧಾರಾಳವಾಗಿ ಖರ್ಚು ಮಾಡಿ ಜೈ ಅಂತ ಅನ್ನಿಸಿ ಬಿಡು"

"ಅತ್ತಿಗೆ ನಿಮ್ಮ ಈ ಉಪಕಾರಾನಾ ಹೇಗೆ ತೀರಿಸಬೇಕೋ ತಿಳೀತಿಲ್ಲ.... ಅತ್ತಿಗೆಯ ಕೈ ಹಿಡಿದಳು.

"ನನಗೊಬ್ಬಳು ಮಗಳಿದ್ದಿದ್ದರೆ, ನಿನ್ನ ಸೊಸೆಯಾಗಿ ತಂದುಕೋ ಅಂತ ಹೇಳ್ತಿದ್ದೆ ಈಗ ನನಗೆ ಯಾವ ಅವಕಾಶವೂ ಇಲ್ಲ" ವನಜ ನಕ್ಕಂತೆ ಮಾಡಿದಾಗ ಶಾಂತ ನಗಲಿಲ್ಲ.

"ಸೋಮನಿಗೂ ಮುಂಜಿ ಮಾಡೋಣ ಅಂತ ಅಂದ್ಕೊಂಡಿದೀವಿ"

"ಒಳ್ಳೇದೇ.... ಒಟ್ಟಿಗೇ ಎರಡು ಕೆಲಸ ಆಗುತ್ತೆ. ದಿನ, ಲಗ್ನ ಗೊತ್ತು ಮಾಡಿದೀರಿ ತಾನೇ?"

"ಹುಂ ಎಲ್ಲಾ ಆಗಿದೆ...... ಇನ್ನು ಎರಡು ತಿಂಗಳಿಗೆ, ಪ್ರಶಸ್ತವಾಗಿ ಮುಹೂರ್ತಗಳಿವೆ. ಅದಕ್ಕೆ ಮೊದಲು ಲಗ್ನಪತ್ರಿಕೆ ಶಾಸ್ತ್ರ ಸಹ ಮಾಡಬೇಕು"

"ಎಲ್ಲಾ ಹೂವಿನ ಸರ ಎತ್ತಿದಂತೆ ಸುಗಮವಾಗಿ ಆಗುತ್ತೆ ಎದೆಗುಂದಬೇಡ"

"ನನಗೆ ಹೀಗೆ ಧೈರ್ಯ ಹೇಳೋರೇ ಯಾರಿರಲಿಲ್ಲ ಅತ್ತಿಗೆ" ಶಾಂತಳ ಕಣ್ಣು ನೀರಾಡಿತ್ತು.

"ನೀನು ಧೈರ್ಯವಂತೆ ಅಂತ ಅಂದ್ಕೊಂಡಿದ್ದೆ. ಭಾವನ ಹತ್ತಿರ ಅದೆಷ್ಟು ವಾದಿಸುತ್ತೀಯ" ಅತ್ತಿಗೆ ನಕ್ಕಳು.

"ಆ ಮಾತು ಬೇರೆ ; ಈ ಮಾತು ಬೇರೆ. ನಿಮಗೇ ಗೊತ್ತು ನನ್ನ ಗಂಡನ ಕಡೆ ಒಂದು ನರಪಿಳ್ಳೆ ನನಗೆ ಗೊತ್ತಿಲ್ಲ. ನನಗೆ ನೀವೇ ಎಲ್ಲಾ"

"ಬರೀ ಬಾಯಿ ಹೊಗಳಿಕೆ ಸಾಲದು. ಮದುವೇಲಿ ನನಗೆ ಭಾರಿ ಉಡುಗೊರೆ ಕೊಡಬೇಕು. ಹೇಗೂ ಮಂಟಪಕ್ಕೆ ಹೆಣ್ಣನ್ನು ಕರೆ ತರುವುದೂ ನನ್ನ ಗಂಡನೇ...."

"ಅತ್ತಿಗೇ..... ಅವನು ನನ್ನ ಅಣ್ಣ ಕೂಡಾ... ಮದುವೆಗೆ ಒಂದು ವಾರ ಮುಂಚಿತವಾಗಿ ಖಂಡಿತಾ ಬರಬೇಕಂತೆ ಅಂತ ಹೇಳಿ. ಬೇಕಾದಷ್ಟು ಕೆಲಸಗಳಿರುತ್ತವೆ"

"ಲಗ್ನಪತ್ರಿಕೆಯ ಹೊತ್ತಿಗೆ ಮತ್ತೆ ಎಲ್ಲರೂ ಬರ್ತೀವಿ" ಎಂದು ಹೇಳಿ ಅತ್ತಿಗೆ ಹೊರಟು ಹೋಗಿದ್ದಳು.

"ಅದೇನು ನಿನ್ನ ಅತ್ತಿಗೆ ಹೀಗೆ ಬಂದು ಹಾಗೆ ಹೋದದ್ದು..... ಬನ್ನಿ ಅಂತ ಕಾಗದ ಬರೆದಿದ್ಯಾ?"

"ಹುಂ, ಅಮ್ಮ ಸಂಡಿಗೆ ಹಪ್ಪಳಾನೆಲ್ಲಾ ಕಳಿಸಿದಾಳೆ. ಹಾಗೇ ಮದುವೆಯ ಸಿದ್ಧತೆಯ ಒಂದು ಲಿಸ್ಟ್ ಹಾಕಿ ಕಳಿಸಿದಾಳೆ....." ಆದರೆ ಅತ್ತಿಗೆ ಕೊಟ್ಟ ಹಣದ ಬಗ್ಗೆ ಹೇಳಲಿಲ್ಲ.

"ಲಗ್ನಪತ್ರಿಕೆ ಶಾಸ್ತ್ರ ಆಗೋವರೆಗೂ ಉಳಿಸಿಕೊಳ್ಳಬೇಕಾಗಿತ್ತು"

"ಎಲ್ಲರೂ ಮತ್ತೆ ಒಟ್ಟಿಗೇ ಬರ್ತಾರೆ ಬಿಡಿ...... ಸಾಲಕ್ಕೆ ಕೇಳಿ ಆಯ್ತಾ?"

"ಹುಂ, ಅರ್ಜಿ ಕೊಟ್ಟಿದೀನಿ. ಸಿಗುತ್ತೆ..."

"ಕಡೇ ಗಳಿಗೇಲಿ ಕೈ ಅಲ್ಲಾಡಿಸಿ ಬಿಡುಲ್ಲ ತಾನೇ ನೀವು ....."

"ನನಗೇನು ಜವಾಬ್ದಾರಿ ಇಲ್ಲವೆ? ಹೇಗೋ ಹೊಂದಿಸ್ತೀನಿ" ಅವನು ಹಾಗೆ ಹೇಳಿದ್ದರೂ, ಮಾರ್ಗ ತಿಳಿದಿರಲಿಲ್ಲ.

ಒಂದು ವಾರದ ನಂತರ ಲಗ್ನಪತ್ರಿಕೆಯ ಶಾಸ್ತ್ರ ಸಾಂಗವಾಗಿ ನೆರವೇರಿತು. ವರನ ಕಡೆ ಒಂದು ಹತ್ತು ಹನ್ನೆಡರು ಜನ, ಶಾಂತಳ ತವರಿನ ಬಳಗ ಎಲ್ಲಾ ಸೇರಿ, ಒಂದು ಮೂವತ್ತು ಜನ. ಆಚಿಯ ಭಾವೀ ಅತ್ತೆ, ತನ್ನ ಭಾವೀ ಸೊಸೆಗೆಂದು ರೇಶಿಮೆ ಸೀರೆಯನ್ನು ತಂದಿದ್ದಳು. ಕಡಲೆ ಬೆಲ್ಲದ ಉಡಿಯೊಂದಿಗೆ ಅವಳನ್ನು ತಮ್ಮ ಸೊಸೆಯೆಂದು ಮನಃಪೂರ್ವಕವಾಗಿ ಒಪ್ಪಿಕೊಂಡಾಗಿತ್ತು. ರಾಮಸ್ವಾಮಿ ಭಾವಿ ಅಳಿಯನಿಗೆಂದು ಷರಟು, ಪ್ಯಾಂಟಿನ ಬಟ್ಟೆಗಳನ್ನು ಉಡುಗೊರೆಯಾಗಿ ಕೊಟ್ಟ. ಶಾಸ್ತ್ರಿಗಳು ವಿಧಿವತ್ತಾಗಿ ಲಗ್ನಪತ್ರಿಕೆಗಳನ್ನು ಬರೆದು, ಬೀಗ ಬೀಗರು ವಿನಿಮಯ ಮಾಡಿಕೊಳ್ಳುವಂತೆ ಹೇಳಿದರು. ಶಾಂತ ನೆಮ್ಮದಿಯಿಂದ ಉಸಿರಾಡಿದಳು. ನೆಂಟರಿಷ್ಟರಿಗೆ ಸಿಹಿ ಊಟ, ಉಡುಗೊರೆಗಳನ್ನು ಕೊಟ್ಟಿದ್ದಾಯ್ತು"ಮತ್ತೆ ಮದುವೆ ಮಂಟಪದಲ್ಲಿ ಭೇಟಿ" ಎಂದು ನುಡಿದು ಬೀಗರು ಹೊರಟು ಹೋಗಿದ್ದರು.

* * *

- - 15 - -

"ಏನೇ ಆಚಿ, ಪೋಸ್ಟ್‌ಮ್ಯಾನ್‌ಗೆ ಕಾಯ್ತಾ ಇದೀಯ" ಹೊರಬಾಗಿಲಲ್ಲಿ ನಿಂತವಳನ್ನು ಚುಡಾಯಿಸಿದಳು ವನಜಾ.

"ಏನಿಲ್ಲಪ್ಪಾ..... ಸುಮ್ನೆ ನಿಂತಿದ್ದೆ"

"ನಿನ್ನ ಗಂಡನ ಪ್ರೇಮಪತ್ರಕ್ಕೆ ಕಾಯ್ತಾ ಇದೀಯೇನೋ ಅಂತ ಅಂದ್ಕೊಂಡೆ..."

"ಥೂ ಹೋಗೀ ಅತ್ತೆ. ಅವರು ಕಾಗದ ಬರೀತೀನಿ ಅಂತ ಹೇಳ್ಳೇ ಇಲ್ಲ."

"ಹಾಗಾದ್ರೆ ಏನು ಹೇಳಿದ?"

"ಏನೂ ಹೇಳಲಿಲ್ಲ. ಮಾತೇ ಆಡಲಿಲ್ಲ"

"ನೀನಾದ್ರೂ ಹೇಳಬೇಕಾಗಿತ್ತು"

"ಹೇಳಿದ್ರೂ ಬರೀತಿದ್ರೋ ಇಲ್ಲವೋ ಮೊದಲೇ ಬಿಸಿನೆಸ್ಸು ಮಾಡೋರು.. ಒಂದು ರುಪಾಯಿಯ ಕವರಿಗೂ ಲೆಖ್ಖ ಹಾಕ್ತಾರೆ....... ಅಲ್ವೇನತ್ತೆ?"

"ಸುಮ್ಮನಿರು ಆಚಿ. ಹಾಗೆಲ್ಲಾ ಮಾತಾಡಬಾರದು. ಈ ಮಾತುಗಳು ಅವರ ಮನೆಯವರ ಕಿವಿಗೆ ಬಿದ್ದರೆ ಏನಂದುಕೊಂಡಾರು?" ಶಾಂತ ಮಗಳನ್ನು ನಯವಾಗಿ ಗದರಿದಳು.

"ನಾನೂ ನಿನ್ನ ಹಾಗೆ ಇದ್ದುದನ್ನು ಇದ್ದ ಹಾಗೆ ಹೇಳೋಳೆ.... ನನಗೇನು ಭಯ?"

"ಸರಿ ಬಿಡು. ನಮ್ಮ ಮರ್ಯಾದೇನ ಬೀದಿ ಪಾಲು ಮಾಡೋಳು ನೀನು. ಇದೇನಾ ಕಲಿಸಿರೋದು ಅಂತ ನನ್ನನ್ನು ಬೈತಾರೆ ಅಷ್ಟೇ"

"ನನಗೆ ಈಗಲೇ ಮದುವೆ ಬೇಡಾಂತಂದ್ರೂ ಬಲವಂತವಾಗಿ ಮಾಡ್ತಿರೋಳು ನೀನು. ಬೈಸಿಕೋ ನನಗೇನಂತೆ?"

"ಏನು ಮಾತನಾಡ್ತೀಯೆ? ನಾನೇನು ನಿನ್ನ ಶತ್ರುನೇನೇ? ನೋಡಿ ಅತ್ತಿಗೆ ಹೇಗಾಡ್ತಾಳೆ? ಒಳ್ಳೇ ಸಂಬಂಧ ಬಂದಿರೋವಾಗ, ಬಿಟ್ಟು ಬಿಡೋದು ಮೂರ್ಖತನ ಅಷ್ಟೆ ...." ಶಾಂತ ಮತ್ತೆ ಬಿರುಸಾಗಿ ನುಡಿದಾಗ, ವನಜ ಸಮಾಧಾನ ಮಾಡಿದಳು.

"ಏನೋ ಚಿಕ್ಕ ಹುಡುಗಿ. ಏನೋ ಆಡಿರುತ್ತಾಳೆ. ನಿನ್ನ ಹತ್ತಿರವಿರುವ ಸಲುಗೆ ಅತ್ತೆ ಹತ್ತಿರ ಖಂಡಿತಾ ಇರುಲ್ಲ. ಇವತ್ತಿಗೂ ನಾನು ನಿಮ್ಮ ತಾಯಿಯ ಮಾತಿಗೆ ಎದುರಾಡುಲ್ಲ ಗೊತ್ತಾ?"

"ನೀವು ಸ್ವಲ್ಪ ತಿಳುವಳಿಕೆ ಹೇಳಿ ಅತ್ತಿಗೆ....."

ಮದುವೆಯ ಸಿದ್ಧತೆಗಳು ನಿಧಾನವಾಗಿ ಪ್ರಾರಂಭವಾಗಿದ್ದವು. ಸಾಲಕ್ಕಾಗಿ ರಾಮಸ್ವಾಮಿ ಆ ಆಫೀಸ್ನಿಂದ ಈ ಆಫೀಸಿಗೆ ಹಾಗೆ ಹತ್ತಾರು ಬಾರಿ ಓಡಾಡಬೇಕಾಯ್ತು. ಹಾಗೆ ಒಮ್ಮೆ ಒಂದು ಕಡೆ ನಡೆದು ಹೋಗುತ್ತಿದ್ದಾಗ, ಹಿಂದಿನಿಂದ ಯಾರೋ "ಮಾವಾ......" ಅಂತ ಕರೆದ ಹಾಗಾಯ್ತು. ಹಿಂತಿರುಗಿ ನೋಡಿದ. ಸುಜಾತ ನಿಂತಿದ್ದಳು. ಕೈ ಹಿಡಿದು ನಿಂತಿದ್ದ, ಎಂಟು ಹತ್ತು ವರ್ಷದ ಹುಡುಗಿಗೆ, ನೋಡು ತಾತಾ.... ಅಂತ ಪರಿಚಯಿಸಿದಳು.

"ಮಗಳಾ? ತುಂಬಾ ಮುದ್ದಾಗಿದ್ದಾಳೆ. ಅದೇನು ಇಲ್ಲಿ? ಹೇಗಿದೀಯ?"

"ನಾನು ಚೆನ್ನಾಗಿದೀನಿ. ನೀವು ಅತ್ತೆ ಎಲ್ಲಾ ಹೇಗಿದೀರಿ? ಅಂತೂ ಮದುವೆಗೆ ಬರಲೇ ಇಲ್ಲ"

"ಏನೋ ಬರುಕ್ಕಾಗಲೇ ಇಲ್ಲ"

"ಅತ್ತೆಗೆ ಈಗಲೂ ನನ್ನ ಮೇಲೆ ಕೋಪಾನಾ?"

"ನನ್ನದೇ ತಪ್ಪು ಸುಜಾತಾ.... ನಾನು ಮೊದಲೇ ಎಲ್ಲಾ ಹೇಳಿದ್ದರೆ ಚೆನ್ನಾಗಿತ್ತು"

"ಹೇಳಿದ್ರೂ ಅತ್ತೆ ಒಪ್ಪಿಕೊಳ್ತಿದ್ರೋ ಇಲ್ಲವೋ.....? ಮಗಳು ಹೇಗಿದಾಳೆ?"

"ಆ ಮಗಳಿಗೆ ಒಬ್ಬ ತಮ್ಮನೂ ಇದಾನೆ.... ಮಗಳಿಗೆ ಸಧ್ಯದಲ್ಲೇ ಮದುವೆ"

"ಓ ಹೌದಾ? ಅಷ್ಟು ದೊಡ್ಡೋಳಾಗಿ ಬಿಟ್ಟಿದಾಳಾ?"

"ಚಿಕ್ಕೋಳೆ. ಆದರೆ ಬೇಗ ಮದುವೆ ಮಾಡ್ತಿದೀನಿ ಅಷ್ಟೇ .... ನಿನಗೆಷ್ಟು ಮಕ್ಕಳು? ನಿನ್ನ ಯಜಮಾನರು ಏನು ಮಾಡ್ತಿದಾರೆ?"

"ನಾಳೆ ಮನೆಗೆ ಬನ್ನಿ. ಪರಿಚಯ ಮಾಡಿಸಿ ಕೊಡ್ತೀನಿ. ಇವಳಿಗಿಂದ ದೊಡ್ಡವನು ಮಗ. ಅವನನ್ನು ನನ್ನ ಅಣ್ಣ ಓದಿಸುತ್ತಿದ್ದಾನೆ."

"ಓ... ಏನು ಓದುತ್ತಿದಾನೆ? ಪಂಡಿತರು ಹೇಗಿದಾರೆ?"

"ಪಂಡಿತರು ಈಗ ನಮ್ಮ ಜೊತೇಲೇ ಇದಾರೆ. ಕಣ್ಣು ಮಂಜಾಗಿದೆ. ಅದಕ್ಕೇ ಇಲ್ಲಿಯ ಮನೆಯನ್ನು ಮಾರಿ ಬಿಡೋಣ ಅಂತ"

"ಮನೆ ಮಾರ್ತೀರಾ? ಎಷ್ಟಕ್ಕೆ ಹೋಗುತ್ತೋ....?"

"ಏನೋ ಗೊತ್ತಿಲ್ಲ. ನಾಳೆ ನನ್ನ ಅಣ್ಣ ಅತ್ತಿಗೆಯೂ ಬರ್ತಾರೆ. ನೀವೂ ಬನ್ನಿ. ಅತ್ತೇನೂ ಕರೆದುಕೊಂಡು ಬನ್ನಿ"

"ಅತ್ತೆ ಬರ್ತಾಳೋ ಇಲ್ಲವೋ..... ನಾನು ಆದರೆ ಬರ್ತೀನಿ. ಮದುವೆಯ ಖರ್ಚಿಗೆ

ಸ್ವಲ್ಪ ಸಾಲ ಮಾಡಬೇಕಾಗಿದೆ. ಅದಕ್ಕೆ ಓಡಾಡ್ತಾ ಇದೀನಿ. ಬಿಡುವು ಮಾಡಿಕೊಂಡು ಬರ್ತೀನಿ....... ಇಲ್ಲಿ ಎಲ್ಲಿ ಬಂದಿದ್ದೆ?"

"ಇವಳು ಏನೋ ಪುಸ್ತಕ, ಬಳೆ ಟೇಪು ಬೇಕೂಂತ ಅಂದಿದ್ಲು. ಇಲ್ಲೇ ಹತ್ತಿರದ ಅಂಗಡೀಲಿ ಸಿಗುತ್ತೆ"

"ಏನು ಚಿನ್ನಾ? ಏನು ನಿನ್ನ ಹೆಸರು?" ಹುಡುಗಿಯ ಗಲ್ಲವನ್ನೆತ್ತಿ ಕೇಳಿದ.

"ರೂಪಾ......" ಮುದ್ದಾಗಿ ಹೇಳಿತು. ಇಬ್ಬರೂ ಮಾತನಾಡುತ್ತಾ ಅಂಗಡಿಯ ಕಡೆ ನಡೆದರು. ಸುಜಾತಾ ಬೇಡ ಬೇಡವೆಂದರೂ, ರಾಮಸ್ವಾಮಿ ಆ ಮಗುವಿಗೆ, ರಬ್ಬರ್ ಬಳೆ, ಬಣ್ಣದ ರಿಬ್ಬನ್‌ಗಳನ್ನು ತೆಗೆಸಿಕೊಟ್ಟ.

"ಮಗೂನ ನೋಡಿ ನನಗೆ ತುಂಬಾ ಖುಷಿಯಾಯ್ತು ಸುಜಾತಾ.... ಮದುವೆಗೆ ಆಹ್ವಾನ ಪತ್ರಿಕೆ ಕಳಿಸ್ತೀನಿ. ಖಂಡಿತಾ ಎಲ್ಲರೂ ಬರಬೇಕು"

"ನಾನೇನೋ ಖಂಡಿತಾ ಬರ್ತೀನಿ. ಅತ್ತೆ ಏನಾದ್ರೂ ಹಗರಣ ಮಾಡಿದರೆ, ಬೀಗರು ತಪ್ಪು ತಿಳಿದುಕೊಂಡರೇ?"

"ನೋಡು, ನಾನು ಎಷ್ಟು ಅಸಹಾಯಕ? ನನ್ನವರನ್ನು ಬಾಯಿ ತುಂಬಾ ಕರೆಯೋಕೂ ಆಗುಲ್ಲ"

"ನೀವ್ಯಾಕೆ ವ್ಯಥೆ ಪಡ್ತೀರಿ? ನಿಮ್ಮ ತಪ್ಪು ಏನೂ ಇಲ್ಲ.... ಹೋಗಲಿ ಬಿಡಿ. ನನ್ನ ನಿಮ್ಮ ಋಣಾನುಬಂಧ ಇಷ್ಟೇ ಅಂದುಕೊಳ್ಳೋಣ. ಈಗಲಾದ್ರೂ ಅತ್ತೆ ಬದಲಾಗಿರುತ್ತಾರೆ ಅಂತಂದುಕೊಂಡಿದ್ದೆ."

"ಅವಳು ಬದಲಾಗ್ತಾಳೆ ಅನ್ನೋ ನಂಬಿಕೆ ನನಗಿಲ್ಲ. ನಿನ್ನ ವಿಳಾಸ ಸಹ ತಿಳಿದಿರಲಿಲ್ಲ. ತಿಳಿದಿದ್ರೆ ಎಂದಾದ್ರೂ ಬರ್ತಿದ್ದೆ"

"ನಾಳೆ ಬರ್ತೀರಲ್ಲಿ ನಾನು ಬರೆದುಕೊಡ್ತೀನಿ"

ರಾಮಸ್ವಾಮಿ ಸುಜಾತಳಿಗೆಂದು, ಮಲ್ಲಿಗೆ ಹೂವನ್ನು, ಒಂದಿಷ್ಟು ಹಣ್ಣುಗಳನ್ನು ತೆಗೆಸಿಕೊಟ್ಟ. ಬೇಡ ಅನ್ನಬೇಡ ನೀನೂ ನನ್ನ ಮಗಳಿದ್ದ ಹಾಗೆ. ಕರೆದು ಕಳಿಸಿಕೊಡುವ ಭಾಗ್ಯ ನನಗಿಲ್ಲ."

"ನಿಮ್ಮ ಆಶೀರ್ವಾದ ಒಂದಿದ್ದರೆ ಸಾಕು ಮಾವ. ಒಂದಲ್ಲ ಒಂದು ದಿನ ಅತ್ತೆ ನನ್ನ ಸಂಬಂಧವನ್ನು ಒಪ್ಪಿಕೊಳ್ಳಬಹುದು. ಕಾದು ನೋಡೋಣ. ನಾನಿನ್ನು ಬರ್ಲಾ?"

"ಹೂಂನಮ್ಮ" ಕೈಯಾಡಿಸಿದ. ಮಗುವಿನ ಗಲ್ಲ ಸವರಿ, ಟಾ ಟಾ ಮಾಡಿದ. ಅದೂ ಕೈಯಾಡಿಸಿತು. ಅವರಿಬ್ಬರೂ ಮುಂದೆ ಹೊರಟು ಹೋದರು.

ಮಾರನೇ ದಿನ ಮರೆಯದೇ ರಾಮಸ್ವಾಮಿ ಪಂಡಿತರ ಮನೆಗೆ ಬಂದ. ಸುಜಾತ ತನ್ನ ಗಂಡನನ್ನು ಅಣ್ಣನನ್ನು ಪರಿಚಯಿಸಿಕೊಟ್ಟಳು. ಇಬ್ಬರಿಗೂ ಮಾವ ಇದೇ ಊರಿನಲ್ಲಿದಾರೆ ಅನ್ನುವ ವಿಷಯ ತಿಳಿಯದು. ಆಶ್ಚರ್ಯದಿಂದ ಕಣ್ಣರಳಿಸಿದರು. ಪಂಡಿತರ ಮಗ ಮಾತ್ರ ಸುಮ್ಮನೇ ನಕ್ಕ. ಸ್ವಲ್ಪ ಹೊತ್ತು ಅದೂ ಇದೂ ಮಾತನಾಡಿ ರಾಮಸ್ವಾಮಿ ಅಲ್ಲಿಂದ ಹೊರಟ. ಬಿಸಿಲ ಹೊತ್ತಾದುದರಿಂದ ಎಲ್ಲರಿಗೂ ತಣ್ಣನೆಯ ಶರಬತ್ತನ್ನು ಕೊಟ್ಟಿದ್ದಳು.

ಸುಜಾತಳ ಗಂಡ, ತನ್ನದೇ ಆದ ಒಂದು ಸ್ವಂತ ದಿನಸಿ ಅಂಗಡಿಯನ್ನಿಟ್ಟಿದ್ದಾನೆ. ವ್ಯಾಪಾರ ಚೆನ್ನಾಗಿ ನಡೆಯುತ್ತಿದೆ ಎಂದು ತಿಳಿದಿತ್ತು. ಪಂಡಿತರ ಮಗ, ಊರು ಕೇರಿ ಬಿಟ್ಟು ಹೋಗಿ ಮಿಲಿಟರಿ ಸೇರಿಕೊಂಡಿದ್ದನಂತೆ. ಈಗ ನಿವೃತ್ತನಾಗಿದ್ದಾನೆ. ನಿವೃತ್ತಿ ವೇತನ ಬರುತ್ತದೆ. ಅನುಕೂಲವಾಗಿದಾನೆ. ಸ್ವಂತ ಮನೆ ಇದೆ. ಹೆಂಡತಿ ಶ್ರೀಮಂತರ

ಮನೆಯವಳು. ತುಂಬಾ ಒಳ್ಳೆಯವಳು. ಅವರಿಬ್ಬರಿಗೆ ಒಬ್ಬಳೇ ಮಗಳು. ಮತ್ತೆ ಮಕ್ಕಳಾಗಿರಲಿಲ್ಲ. ಸುಜಾತನ ಮಗನನ್ನು ತಮ್ಮ ಬಳಿ ಇಟ್ಟುಕೊಂಡಿದಾರೆ. ಇಷ್ಟು ಸುಜಾತ ಹೇಳಿದ ವಿಷಯ. ಅದನ್ನೇ ಮೆಲಕು ಹಾಕುತ್ತಾ ತನ್ನ ಮನೆಯ ದಾರಿ ಹಿಡಿದ. ಮರೆಯದೇ ಅವರುಗಳ ವಿಳಾಸವನ್ನು ಕೇಳಿ ಪಡೆದಿದ್ದ. ಏನಾದರಾಗಲಿ, ಆಚಿಯ ಮದುವೆಗೆ ಇವರುಗಳು ಬರಲೇಬೇಕು ಎಂದು ತನ್ನಲ್ಲೇ ಬಲವಾಗಿ ಅಂದುಕೊಂಡಿದ್ದ. ಶಾಂತಳಿಗೆ ಏನನ್ನು ಹೇಳುವ ಇಚ್ಛೆಯಾಗಲಿಲ್ಲ. ಮದುವೆಯ ಸಂಭ್ರಮ ಸಡಗರವನ್ನೂ, ಕದನ ಕಲಹದಲ್ಲಿ ಬದಲಾಯಿಸುವ ಬಯಕೆ ಇರಲಿಲ್ಲ. ವನಜ ಶಾಂತಳಿಗಿಂತ ತಿಳುವಳಿಕಸ್ಥೆ. ಅವಳಿಗೆ ಹೇಳಿದರೆ ಸಮಜಾಯಿಸಿ ಹೇಳಬಹುದೇನೋ ಅಂತನ್ನಿಸಿದರೂ ದುಡುಕಲಿಲ್ಲ.

ಮದುವೆಗೆ ಇನ್ನು ಕೆಲವು ದಿನಗಳು ಬಾಕಿ ಇವೆ ಅಂತಿರುವಾಗ, ರಾಮಸ್ವಾಮಿಯ ಹೆಸರಿಗೆ ಒಂದು ರಿಜಿಸ್ಟರ್ಡ್ ಪೋಸ್ಟ್ ಬಂದಿತ್ತು. ಅದರಲ್ಲಿ ಒಂದು ಚೆಕ್ ಇತ್ತು. ಸುಜಾತ ಮಾವನಿಗೆ ಮದುವೆಯ ಉಡುಗೊರೆ ಎಂದು ಎರಡು ಸಾವಿರ ರೂಪಾಯಿಗಳನ್ನು ಕಳಿಸಿದ್ದಳು.

"ಹುಚ್ಚು ಹುಡುಗಿ..... ನಾನೇನು ಮಾಡಿದೀನಿ ಅಂತ ನನಗೆ ಈ ಉಡುಗೊರೆ ಕಳಿಸಿದೀಯೋ......? ತನ್ನಲ್ಲೇ ಅಂದುಕೊಂಡ. ಮರೆಯದೇ ಸುಜಾತಳಿಗೂ, ಅವಳ ಅಣ್ಣನಿಗೂ ಮದುವೆಯ ಕರೆಯೋಲೆಗಳನ್ನು ಪೋಸ್ಟ್ ಮಾಡಿದ. ಬರಲೇ ಬೇಕೆಂದು ಒತ್ತಾಯ ಮಾಡಿದ್ದ.

ಶಾಂತಳ ತವರು ಮನೆಯಿಂದ, ತಂದೆ ತಾಯಿ, ಅಣ್ಣ ಅತ್ತಿಗೆ, ಎಲ್ಲಾ ಬಂದು ಇಲ್ಲೇ ಇದ್ದರು. ಇಲ್ಲಾ ಸಿದ್ಧತೆಗಳೂ ಅವರದೇ. ಒಡವೆ ಜವುಳಿ ಪ್ರತಿಯೊಂದಕ್ಕೂ ಅತ್ತಿಗೆಯ ಸಲಹೆಯನ್ನು ತೆಗೆದುಕೊಳ್ಳುತ್ತಿದ್ದಳು.

"ಅತ್ತಿಗೆ, ನಿಮಗೆಷ್ಟು ಸಂಭ್ರಮ..... ಉತ್ಸಾಹ. ನಿಮಗೆ ಮನೆ ತುಂಬಾ ಮಕ್ಕಳಿರಬೇಕಾಗಿತ್ತು"

"ಮನೆ ತುಂಬಾ ಬೇಡ. ಒಂದೇ ಒಂದು ಮಗು ಹುಟ್ಟಿದ್ದರೂ, ನಾನು ಹೀಗೆ ಇರಲು ಆಗುತ್ತಿರಲಿಲ್ಲ."

"ನಿಮಗೆ ಗೊತ್ತಾ? ನಿಮ್ಮ ಭಾವಂಗೆ ಮಕ್ಕಳೇ ಬೇಕಿರಲಿಲ್ಲವಂತೆ....."

"ಮತ್ಹೇಗೆ ಹುಟ್ಟಿದವು ಇವು?" ಕೀಟಲೆಯಿಂದ ಕೇಳಿದಳು.

"ನಾನು ಮೊಂಡುತನದಿಂದ ಪಂಡಿತರ ಮನೆಗೆ ಹೋಗಿ ಔಷಧಗಳನ್ನು ತಂದೆ. ಅಶ್ವತ್ಥ ಕಟ್ಟೆಗೆ ಪ್ರದಕ್ಷಿಣೆ ಹಾಕಿದೆ"

"ನೀನು ಆಗಲೇ ಹೇಳಿದ್ದರೆ. ನಾನೂ ಮಾಡ್ತಿದ್ದೆ....." ನಕ್ಕಳು.

"ನನಗೆ ಗೊತ್ತು..... ನಿಮಗೂ ಅಣ್ಣನಿಗೂ ಚೆನ್ನಾಗಿಲ್ಲ ಅಂತ. ಅದಕ್ಕೇ ಹೇಳಲಿಲ್ಲ. ಹೆದರಿದೆ"

"ನೀನು ಅದೃಷ್ಟವಂತೆ ಶಾಂತಾ. ನಿನ್ನ ಗಂಡ ತುಂಬಾ ಒಳ್ಳೆಯವರು. ನಿನ್ನನ್ನೆ ಎಷ್ಟು ಪ್ರೀತಿಸ್ತಾರೆ. ನೀನೇ ಒರಟು, ನಿನ್ನ ಅಣ್ಣನ ಹಾಗೆ"

"ಅತ್ತಿಗೆ, ಮೆಲ್ಲಗೆ ಮಾತ್ನಾಡಿ. ಇವರಿಗೆ ಕೇಳಿಸಿದರೆ ಉಬ್ಬಿ ಹೋಗ್ತಾರೆ. ಇವರೂ, ನೀವು ತಿಳಿದುಕೊಂಡಿರುವಷ್ಟು ಒಳ್ಳೆಯವರಲ್ಲ......"

"ನೀನೂ ವಿಪರೀತ ರೇಗಿಸ್ತೀಯ. ಎಷ್ಟು ಅಂತ ಸಹಿಸಿಕೊಳ್ಳೊಕ್ಕಾಗುತ್ತೆ. ಕೆಲವೊಮ್ಮೆ ರೇಗಿರಬಹುದು. ಆದರೆ ನಾನೇ ನೋಡಿದ್ನಲ್ಲ. ಮದುವೆಯಾದ ಹೊಸದರಲ್ಲಿ ಒಂದು

ಗಳಿಗೆ ನಿನ್ನನ್ನು ಬಿಟ್ಟಿರುತ್ತಿರಲಿಲ್ಲ" ಆ ಹಳೆಯ ದಿನಗಳನ್ನು ನೆನೆದು ಶಾಂತ ನಾಚಿದಳು.

"ಈಗಲೂ ಭಾವ ಹಾಗೇ ರಸಿಕರೋ ಹೇಗೆ? ನಿನ್ನ ಮುಖ ಯಾಕೆ ಷ್ಟು ಕೆಂಪಾಗಿದೆ?"

"ಈಗಲೂ ಹಾಗೇ ಇರೋಕೆ ಆಗುತ್ತಾ ಅತ್ತಿಗೆ? ಮಕ್ಕಳು ಬೇಗ ಬೇಗ ಬೆಳೆದರು. ಈಗ ಮದುವೆಗೆ ನೆರೆದು ನಿಂತಿದ್ದಾಳೆ....."

ವನಜ ಭಾವುಕಳಾದಳು. ಕಣ್ಣುಗಳಲ್ಲಿ ಏನನ್ನೋ ಕಳೆದುಕೊಂಡಿರುವ ಅನುಭವವನ್ನು ಗುರುತಿಸಿದಳು.

"ಅಣ್ಣ ಯಾಕೆ ಹೀಗಾಡ್ತಾನೆ ಅಂತ ಅಮ್ಮ ಅಪ್ಪ ಒಂದು ದಿನವೂ ಯೋಚಿಸಲಿಲ್ವಾ? ನಿಮ್ಮ ಬಗ್ಗೇನಾದ್ರೂ ಯೋಚಿಸಬೇಡ್ವಾ?"

"ನಂಗೊತ್ತಿಲ್ಲ. ಅವರಿಗೂ ಮಗನ ಚಾಳಿ ತಿಳಿದಿದೆ. ಅವರನ್ನಂತೂ ಬದಲಾಯಿಸುಕ್ಕೆ ಆಗುಲ್ಲ. ಸುಮ್ಮನಾಗಿ ಬಿಟ್ಟಿದಾರೆ"

"ಈಗಿನ ಹಾಗೆ ನನಗೆ ತಿಳುವಳಿಕೆ ಇದ್ದಿದ್ರೆ ಖಂಡಿತಾ ಬುದ್ಧಿ ಹೇಳ್ತಿದ್ದೆ" ವ್ಯಥೆಯಿಂದ ನುಡಿದಳು.

"ಹೋಗಲಿ ಬಿಡು. ನನಗೇ ವ್ಯಥೆಯಿಲ್ಲ. ನಿನಗೇಕೆ ವ್ಯಥೆ? ಹೊಲಿಯೋಕೆ ಕೊಟ್ಟ ಬಟ್ಟೆಗಳನ್ನೆಲ್ಲಾ ತಂದಾಯ್ತು?"

"ಆಚಿ, ಅಣ್ಣನ ಜೊತೆ ಹೋಗಿದಾಳೆ. ಇನ್ನೇನು ಬರಬಹುದು"

"ಎಲ್ಲಾದನ್ನೂ ಕೈಗೆ ಸಿಕ್ಕುವ ಹಾಗೆ ಜ್ಞಾಪಕದಲ್ಲಿಟ್ಟುಕೋ.... ಸಮಯದಲ್ಲಿ ಸಿಗದೇ ಇದ್ರೆ ಕಷ್ಟವಾಗುತ್ತೆ...."

"ಅತ್ತಿಗೇ... ನಿಮ್ಮ ಸಹಕಾರ ಇಲ್ಲದೇ ಇದ್ದಿದ್ದರೆ ನಾನು ಏನೇನು ಪರದಾಡುತ್ತಿದ್ದೆನೋ....."

"ನಾನಲ್ಲದಿದ್ದರೆ ಇನ್ನೊಬ್ಬರು ಸಿಕ್ಕಿರುತ್ತಿದ್ದರು. ಅದಕ್ಕೇ ಜನ ಸಹಾಯ ಅನ್ನೋದು. ನಾನು ಇವತ್ತು ನಿನಗೆ ಸಹಾಯ ಮಾಡಿದ್ರೆ, ನಾಳೆ ನೀನು ಸಹಾಯ ಮಾಡ್ದೇ ಇರ್ತೀಯಾ?"

"ನಾನು ಏನು ಸಹಾಯ ಮಾಡಬಲ್ಲೆ? ಈಗ ನೀವು ಮಾಡಿರೋ ಉಪಕಾರದ ಋಣಾನ ತೀರಿಸ್ತೀನೋ ಇಲ್ಲವೋ?"

"ಸಾಕು ಸಾಕು. ಅತಿ ದೊಡ್ಡ ಮಾತುಗಳಾಯ್ತು. ಏಳು ಅಡಿಗೆ ಆಗಿದ್ರೆ ಊಟ ಮಾಡೋಣ. ಸಾಯಂಕಾಲ ಕರೆಯೋಕೆ ಬೇರೆ ಹೋಗಬೇಕಲ್ಲ" ಇಬ್ಬರೂ ಕೈ ಕೊಡವಿ ಎದ್ದರು.

"ಉಸ್" ಎಂದು ನಿಟ್ಟುಸಿರುಬಿಟ್ಟು, ಟವೆಲ್ಲಿನಿಂದ ಗಾಳಿ ಬೀಸಿಕೊಳ್ಳುತ್ತಿದ್ದ ಗಂಡನನ್ನು ಕಂಡು ಶಾಂತ ಅಲ್ಲೇ ನಿಂತಳು. ಹಣದ ವ್ಯವಸ್ಥೆ ಆಯಿತೋ ಇಲ್ಲವೋ ಎನ್ನುವ ಆತಂಕ ಅವಳಿಗೆ.

"ಏನಾಯ್ತು ರೀ.... ಸಾಲ ಇನ್ನು ಸಿಕ್ಕಲಿಲ್ವಾ?"

"ಸಿಕ್ಕಿದೆ. ನಾಳೆ ಹಣ ತಂದು ಬಿಡ್ತೀನಿ. ಇನ್ನು ಏನೇನು ಬಾಕಿ ಇದೆ?"

"ಎಲ್ಲಾ ಅಣ್ಣನಿಗೆ ಗೊತ್ತು. ಅವನೆಲ್ಲಿ? ಏಳಿ ಊಟ ಮಾಡೋರಂತೆ."

ರಾಮಸ್ವಾಮಿ ಎದ್ದು ಕೈ ಕಾಲು ತೊಳೆದು ಊಟದ ಮನೆಗೆ ಬಂದ.

"ಅಜ್ಜೀ.... ಅಡಿಗೆ ತುಂಬಾ ರುಚಿಯಾಗಿದೆ. ನನಗೂ ಹೇಳಿ ಕೊಡ್ತೀರಾ?" ಆಚಿ ಕೇಳಿದಾಗ ಎಲ್ಲರೂ ಗೊಳ್ ಅಂತ ನಕ್ಕರು.

"ಯುದ್ಧಕಾಲೇ ಶಸ್ತ್ರಾಭ್ಯಾಸ" ಅನ್ನೋ ಹಾಗಾಯ್ತು. ಹೀಗೆ ಅವಾಂತರ

ಅವಾಂತರವಾಗಿ ಕಲಿಯುಕ್ಕೆ ಆಗುತ್ತಾ ಪುಟ್ಟಾ? ನಿಧಾನವಾಗಿ ಒಂದೊಂದಾಗಿ ತಾನೇ ಬರುತ್ತೆ"

"ನೀನು ಸುಮ್ಮನಿರಮ್ಮ. ನಾನು ಅಜ್ಜೀನ ಕೇಳಿದೆ. ಅಜ್ಜಿ ಕೈನ ಹುಳಿ, ಸಂಡಿಗೆ ಸಖತ್ತಾಗಿದೆ"

"ನನ್ನನ್ನ ನಿನ್ನ ಜತೆ ಕರೆದುಕೊಂಡು ಹೋಗು. ದಿನಾ ಇಂಥದೇ ಅಡಿಗೆ ಮಾಡಿ ಹಾಕ್ತೀನಿ" ಮತ್ತೊಮ್ಮೆ ಎಲ್ಲರೂ ನಕ್ಕರು.

"ಏನಿಲ್ಲ. ನನ್ನ ಗಂಡ ನನ್ನನ್ನೇ ನಿಮ್ಮ ಮನೆಗೆ ಕಳಿಸಿಬಿಡ್ತಾರೆ. ಅಷ್ಟೆ...." ಮತ್ತೆ ಎಲ್ಲರೂ ನಕ್ಕಾಗ ಶಾಂತ ರೇಗಿದಳು.

"ಶ್. ಹಾಗೆಲ್ಲಾ ಮಾತಾಡಬಾರದು. ಅಪ್ಪಿ ತಪ್ಪಿಯಾದರೂ ಇಂಥಾ ಮಾತುಗಳನ್ನಾಡೀಯ ಅಲ್ಲಿ. ಅತ್ತೇ ಮನೇಲಿ ಎಷ್ಟು ಹುಶಾರಾಗಿದ್ರೂ ಸಾಲದು"

"ನನಗೂ ನಿನ್ನ ಹಾಗೆ ಅತ್ತೆ ಮಾವ ಯಾರೂ ಇಲ್ಲರ ಮನೆಯನ್ನೇ ಹುಡುಕಬೇಕಾಗಿತ್ತು" ಶಾಂತ ಮತ್ತೆ ರೇಗಿದಳು.

"ಮನೇಲಿ ಯಾರೂ ಕೇಳೋರು ಹೇಳೋರು ಇಲ್ಲ ಅಂತ ಎಷ್ಟು ಪರದಾಡಿದೀನಿ ಅಂತ ನನಗೇ ಗೊತ್ತು... ನಾನೋ ದೊಡ್ಡ ಕುಟುಂಬದಲ್ಲಿ ಬೆಳೆದವಳು.ಇಲ್ಲಿ ಒಂಟಿ ಸಲಗನಂತಿದ್ದ ಗಂಡನ ಕೈಗೆ ಸಿಕ್ಕಿ ಬಿದ್ದೆ. ನನ್ನ ಕಷ್ಟ ಸುಖ ಸಹ ಹೇಳಿಕೊಳ್ಳೋಕೆ ಯಾರಿರಲಿಲ್ಲ"

"ಶ್. ಆ ಮಾತೆಲ್ಲಾ ಈಗ್ಯಾಕೆ? ಯಾರ್‍ಯಾರ ಹಣೇಲಿ ಏನು ಬರೆದಿರುತ್ತೋ ಹಾಗೇ ನಡೆಯುತ್ತೆ. ಅಲ್ಲದೇ ನಮ್ಮ ಶಾಂತಂದು ಅತ್ತೆಯಿಲ್ಲದ ನಕ್ಷತ್ರ. ಅದಕ್ಕೆ ಅಂತ ಮನೆ ಹುಡುಕಿದೆವು. ಈಗ ಸುಮ್ಮನೇ ಮೌನವಾಗಿ ಊಟ ಮಾಡಿ"

"ನಾನು ಈಗಲೇ ಹೇಳಿದೀನಿ ಆಚಿ..... ಇಂಥಾ ಮಾತುಕತೆಗಳನ್ನೆಲ್ಲಾ ಇಲ್ಲೇ ಮೂಟೆ ಕಟ್ಟಿಟ್ಟು ಹೋಗು......."

"ಹುಂ. ಹೋಗ್ತೀನಿ. ಮೊದಲು ಈ ಆಚಿ ಎನ್ನೋ ಹೆಸರನ್ನು ಅಳಿಸಿ ಹಾಕು...." ಆಚಿ ಇದ್ದಕ್ಕಿದ್ದಂತೆ ಅಳಲು ಪ್ರಾರಂಭಿಸಿದಾಗ, ಮೌನ ಆವರಿಸಿತು. "ತವರು ಮನೆಯನ್ನು ಬಿಟ್ಟು ಹೋಗುತ್ತಿರುವ ಸಂಕಟ ಇದು. ಅತ್ತು ಅವಳೇ ಹೃದಯವನ್ನು ಹಗುರ ಮಾಡಿಕೊಳ್ಳಲಿ. ಸುಮ್ಮನಿದ್ದು ಬಿಡು" ವನಜ ಶಾಂತಳನ್ನು ತಡೆದಳು. ಶಾಂತಳ ಕಣ್ಣುಗಳೂ ಹನಿಗೂಡಿದ್ದವು. ರಾಮಸ್ವಾಮಿ ಅರ್ಧ ಊಟಕ್ಕೆ ಎದ್ದು ಕೈ ತೊಳೆದು ಹೊರಬಾಗಿಲಲ್ಲಿ ನಿಂತ.

"ಅಮ್ಮಾ...... ನಿಮ್ಮನ್ನೆಲ್ಲಾ ಬಿಟ್ಟು ಅಲ್ಲಿ ಹೇಗಿರಲಮ್ಮಾ?" ಆಚಿ ತಾನೇ ಸಮಾಧಾನ ಹೇಳಿಕೊಳ್ಳುತ್ತಾ ನುಡಿದಳು.

"ಅದು ನಿಯಮ ಕಣಮ್ಮಾ..... ಎಲ್ಲಾ ಹೆಣ್ಣು ಮಕ್ಕಳೂ ಹುಟ್ಟಿದ ಮನೆಯನ್ನು ಬಿಟ್ಟು ಗಂಡನ ಮನೆಗೆ ಹೋಗುವಾಗ ಹೀಗೇ ದುಃಖ ಆಗುತ್ತೆ. ಆದರೆ ಕ್ರಮೇಣ ಅದೇ ಸರಿ ಹೋಗುತ್ತೆ. ಆಮೇಲೆ, ತವರು ಮನೇಲಿ ಬಂದು ನಾಲ್ಕು ದಿನ ಇರೋಕು ಆಗುಲ್ಲ. ಅದೇ ನಿನ್ನ ಮನೆಯಾಗುತ್ತೆ" ಅಜ್ಜಿ ಸಮಾಧಾನ ಹೇಳಿದರು. ಆದರೂ ಎಲ್ಲರ ಕಣ್ಣು ಒದ್ದೆಯಾಗಿತ್ತು.

ಮದುವೆಗೆ ಒಂದು ವಾರವಿದೆ ಎನ್ನುವಾಗಲೇ, ದೇವರ ಸಮಾರಾಧನೆ, ನಾಂದಿಪೂಜೆ, ಚಪ್ಪರ ಪೂಜೆಯ ಸಮಾರಂಭ, ಅದರ ಮಾರನೇ ದಿನವೇ ಸುಮಂತನಿಗೆ ಉಪನಯನ. ಬರೀ ಮನೆಯ ಮಟ್ಟಿನ ಜನ ಸರಳ ಸಮಾರಂಭ ಅಂತಂದು ಕೊಂಡರೂ ಸಾಕಷ್ಟು

ಸಿದ್ಧತೆಗಳಾಗಲೇ ಬೇಕಾಗಿತ್ತು. ದಾನ ದಕ್ಷಿಣೆ, ಹವನ ಹೋಮ ಎಲ್ಲಾ ಮಾಡಲೇ ಬೇಕು. ಸುಮಂತನಿಗೆ ಏನೋ ಸಂಭ್ರಮ.

"ಅಪ್ಪಾ. ನನ್ನ ಕ್ಲಾಸಿನ ಹುಡುಗರನ್ನು ಕರೆಯಲೇನಪ್ಪಾ?" ಕೇಳಿದ್ದ.

"ಧಾರಳವಾಗಿ ಕರಿ. ಹಾಗೇ ನಿನ್ನ ಟೀಚರ್ಸ್‌ಗಳನ್ನು ಕರಿ" ಸುಮಂತ ಖುಷಿಯಿಂದ ಓಡಿ ಹೋಗಿದ್ದ.

ಶಾಂತ, ಫಲಪೂಜೆಗೆಂದು, ತಂದೆಗೆ ಪಂಚೆಯನ್ನು ತಾಯಿಗೆ ರೇಶಿಮೆ ಸೀರೆಯನ್ನುತಂದಿದ್ದಳು. ಹಾಗೇ ಅಣ್ಣ ಅತ್ತಿಗೆಗೂ ಪಂಚೆ ಸೀರೆಗಳನ್ನು ತಂದಿದ್ದಳು. ಮಗಳಿಗೆ ಎರಡು ಭಾರಿ ಸೀರೆ, ತನಗೊಂದು ಸೀರೆ, ತನ್ನ ಗಂಡನಿಗೊಂದು, ಮಗನಿಗೊಂದು ರೇಶಿಮೆಯ ಮುಗುಟ ಶಲ್ಯಗಳನ್ನು ಖರೀದಿಸಿದ್ದಳು.

"ಇದನ್ನೆಲ್ಲಾ ನನಗೇಕೆ ತಂದೆ? ನಾನೇ ದಿನಾ ದಿನಾ ಉಡುತ್ತೀನಾ? ಪೆಟ್ಟಿಗೇಲಿ ಮಡಿಸಿಟ್ಟೆ ಹಾಳಾಗುತ್ತೆ."

"ಸುಮ್ಮನೇ ಇರಿ ಭಾವ. ಮಗನಿಗೆ ಗಾಯತ್ರಿ ಉಪದೇಶ ಮಾಡುವಾಗ, ಮಗಳನ್ನು ಧಾರೆಯೆರೆದು ಕೊಡುವಾಗ, ನಿಮ್ಮ ಉಡುಗೆ ಭರ್ಜರಿಯಾಗಿರದಿದ್ದರೆ ಏನು ಚೆನ್ನ?"

"ಹಾಗೆ ಹೇಳಿ ಅತ್ತಿಗೆ. ಬೀಗರೆದುರಿಗೆ ಹೇಗಿರಬೇಕೂಂತ ಸಹ ತಿಳಿಯದು ನಿಮ್ಮ ಭಾವನಿಗೆ" ರಾಮಸ್ವಾಮಿ ಸುಮ್ಮನಾದ.

"ಅಕ್ಕಂದಿರಿಗೆ ಸಾಧಾರಣವಾದ ಸೀರೆ ತಂದಿದೀನಿ. ಭಾವಂದಿರಿಗೆ ಷರಟಿನ ಬಟ್ಟೆ. ಬೀಗರಿಗೆ ಪಂಚೆ ಸೀರೆ, ಅಳಿಯನ ತಂಗಿಯರಿಗೆ ಸೀರೆಗಳು. ಜವುಳೀನೇ ದುಬಾರಿ ಆದದ್ದು. ವರನಿಗೆ ಒಂದು ಚಿನ್ನದ ಉಂಗುರ. ಆಚಿಗೆ ಒಂದೆಳೆ ಸರ. ಇಷ್ಟು ಸಾಕು. ಅವರು ಅವರ ಸೊಸೆಗೆ ಏನು ಬೇಕೋ ಅಷ್ಟು ಒಡವೆಗಳನ್ನು ಹಾಕಿಕೊಳ್ಳಲಿ"

"ಶಾಂತ... ಅವರು ಏನು ತರುತ್ತಾರೆ, ಏನು ಕೊಡ್ತಾರೆ ಅನ್ನೋದನ್ನ ಚೆನ್ನಾಗಿ ನೋಡಿಕೊಳ್ಳಿ. ನಾಳೆ ನೀವೂ ನಿಮ್ಮ ಸೊಸೆಗೆ ತರಬೇಕಲ್ಲ"

"ಸಧ್ಯ ತಾಯೀ ಹೆದರಿಸ ಬೇಡಮ್ಮಾ.... ಮೊದಲು ಸುಧಾರಿಸಿಕೊಳ್ಳೋಣ. ನನ್ನ ಮಾತು ನಡೆಯೋದಾದ್ರೆ, ನಾನು ಶ್ರೀಮಂತರ ಮನೆಯ ಹುಡುಗೀನೇ ನನ್ನ ಸೊಸೆಯಾಗಿ ತಂದುಕೊಳ್ತೀನಿ. ವಡವೆ, ವಸ್ತು, ಖರ್ಚು, ವೆಚ್ಚ ಎಲ್ಲಾ ಅವರದೇ. ನಾನು ಹಾಯಾಗಿ ಕೈ ಬೀಸಿಕೊಂಡು ಹೋಗಿ, ಸೊಸೇನ ನಮ್ಮ ಮನೆಗೆ ಕರೆ ತರುತ್ತೀನಿ"

"ಅಹಹಾ.... ಎಷ್ಟು ಜಾಣೆ ನೀನು......"

"ಇದರಲ್ಲಿ ಜಾಣತನ ಏನು? ನಮ್ಮ ಸ್ಥಿತಿ ಹೇಳಿದೆ. ಸಾಲ ಸೋಲ ತೀರುವ ಹೊತ್ತಿಗೆ......"

"ಸದಾ ಸಾಲ ಸಾಲ ಅಂತ ಮಾತ್ನಾಡಬೇಡ ಶಾಂತಾ. ಆಚಿಗೆ ನೋವಾಗುತ್ತೆ. ಅಪ್ಪ ಅಮ್ಮ ನನಗೋಸ್ಕರ ಕಷ್ಟಪಟ್ಟರು ಅಂತ ಆ ಮಗು ನೊಂದ್ಕೋಬಾರದು" ಶಾಂತ ಪೆಚ್ಚಾದಳು.

"ಎಷ್ಟೋ ಅಂದುಕೊಳ್ತೀನಿ. ಮಾತು ಕಡಿಮೆ ಮಾಡಬೇಕೂಂತ. ಮರತೇ ಹೋಗುತ್ತೆ. ಏನೇನೋ ಆಡಿ ಬಿಡ್ತೀನಿ. ನನ್ನ ತಲೆ ಕೆಟ್ಟು ಹೋಗಿದೆ."

"ನೀನು ರೆಸ್ಟ್ ತಗೋ. ಉಳಿದದ್ದನ್ನ ನಾನು ನೋಡಿಕೊಳ್ತೀನಿ" ವನಜ, ಅವಳ ಕೈನಿಂದ ಸೀರೆಯ ಪ್ಯಾಕೆಟ್ಟನ್ನು ಕಿತ್ತುಕೊಂಡಳು.

ಸುಮುಹೂರ್ತದಲ್ಲಿ ಮನೆ ದೇವರಿಗೆ ವಂದಿಸಿ, ಚಪ್ಪರ ಪೂಜೆಯನ್ನು ಮಾಡಿ, ಎಲ್ಲರೂ ಮದುವೆಯ ಛತ್ರಕ್ಕೆ ತೆರಳಿದರು. ನಾಲ್ಕೈದು ದಿನಗಳ ಮೊದಲೇ ಮನೆಯಲ್ಲಿ

ದೇವರ ಸಮಾರಾಧನೆ ಸಮಾರಂಭ ಹಾಗೂ, ಸುಮಂತನ ಉಪನಯನ ನೆರವೇರಿತ್ತು. ಬೇರೆ ಬೇರೆ ಕಡೆಗಳಿಂದ ಬರುವ ನೆಂಟರುಗಳು ಸೀದಾ ಛತ್ರಕ್ಕೆ ಬರುವವರಿದ್ದರು. ಆ ಗುಂಪಿನಲ್ಲಿ ಸುಜಾತಳೂ ಕಾಣಬಹುದೇನೋ ಎಂದು ರಾಮಸ್ವಾಮಿ ಕಾತುರದಿಂದ ನೋಡಿ ನಿರಾಸೆಗೊಂಡ. ಆಹ್ವಾನಪತ್ರಿಕೆ ತಲುಪಿರಲೇಬೇಕು.... ಸಾಯಂಕಾಲದ ಹೊತ್ತಿಗಾದರೂ ಬರಬಹುದು ಎಂದು ಹೇಳಿಕೊಂಡ.

ಬೀಗರ ದಿಬ್ಬಣ ಸಮಯಕ್ಕೆ ಸರಿಯಾಗಿ ಛತ್ರವನ್ನು ತಲುಪಿತು. ಓಲಗದವರನ್ನು ಮುಂದಿಟ್ಟುಕೊಂಡು, ವರನಿಗೆ ಹಾರ ಹಾಕಿ, ಆರತಿ ಬೆಳಗಿ ದಿಬ್ಬಣವನ್ನು ಸ್ವಾಗತಿಸಿ ಬರಮಾಡಿಕೊಂಡರು. ಬೀಗರಿಗೆ ಉಪಚಾರ ಲೋಪವಿಲ್ಲದಂತೆ ನಡೆಯಿತು. ವರನ ಕಡೆಯವರು ತಕ್ಕಷ್ಟು ಮಂದಿ ಬಂದಿದ್ದರು. ವರೋಪಚಾರದೊಂದಿಗೆ ವರಪೂಜೆ ನೆರವೇರಿತು. ವರನಿಗೆ ಸೂಟು, ವಾಚು, ಉಂಗುರ ಕೊಟ್ಟಾಯಿತು. ವರನ ತಾಯಿ, ತಮ್ಮ ಸೊಸೆಗೆ ಹೊಸ ಸೀರೆಯನ್ನು ಕೊಟ್ಟು, ನಂತರ ಕಡಲೆಬೆಲ್ಲದ ಮಡಿಲು ತುಂಬಿ ಆರತಿ ಬೆಳಗಿದರು.

ಆಚಿಯನ್ನು ಅತ್ತಿಗೆಗೆ ವಹಿಸಿ ಬಿಟ್ಟಿದ್ದಳು ಶಾಂತ. "ಆದಷ್ಟೂ ಯಾರೂ ಆಚಿ ಅಂತ ಕರೀ ಬೇಡಿ. ಲಕ್ಷ್ಮೀ ಅಂತಲೇ ಕರೆಯಿರಿ. ವನಜ ಎಲ್ಲರಿಗೂ ಹೇಳಿದ್ದಳು. ಆದರೂ ಅದ್ಹೇಗೋ ಆ ಮಾತು ವರನ ಕಡೆಯವರಿಗೆ ತಲುಪಿಬಿಟ್ಟಿತ್ತು. ಪಡ್ಡೆ ಹುಡುಗ ಹುಡುಗಿಯರು ಒಬ್ಬರಿಗೊಬ್ಬರು ಆಚೀ ಆಚಿ ಅಂತ ಕರೆದು ಕಿಸಕ್ಕನೆ ನಗುತ್ತಿದ್ದರು. ವರನ ಕಡೆಯವರಿಗೆ ಆ ವಿಷಯ ತಿಳಿದು, ಅವರುಗಳನ್ನು ಕರೆದು ಬೈದು ಬುದ್ಧಿ ಹೇಳಿದರು. ಆಚಿ ನಾಚಿ ನೀರಾಗಿದ್ದಳು.

ಮಾರನೇ ದಿನ ಸಾಂಪ್ರದಾಯಿಕವಾಗಿ ಮದುವೆಯ ಶಾಸ್ತ್ರ ನೆರವೇರಿತು. ನಾಗಲಕ್ಷ್ಮಿ-ಶೇಷಾದ್ರಿ ಸತಿಪತಿಗಳಾದರು. ಧಾರೆ, ನಾಗೋಲಿ, ಲಾಜಾ ಹೋಮ, ಭೂಮ ಪ್ರತಿಯೊಂದು ಪಾಂಗಿತವಾಗಿ ಜರುಗಿತು. ಬೀಗರಾದಿಯಾಗಿ ಬಂದವರಿಗೆ, ಭೋಜನ, ತಾಂಬೂಲ, ಉಡುಗೊರೆಗಳು ಸಂದವು. ನಂತರ ವಿಧಿವತ್ತಾಗಿ ಮಗಳನ್ನು ಮನೆ ತುಂಬಿಸಿಕೊಟ್ಟರು. ಆ ರಾತ್ರಿ ಎಲ್ಲರೂ ಛತ್ರದಲ್ಲೇ ಉಳಿದರು.

ಮಾರನೇ ದಿನ, ಮಧ್ಯಾಹ್ನದ ಊಟದ ನಂತರ ಬೀಗರ ದಿಬ್ಬಣ ಛತ್ರದಿಂದ ಹೊರಟಿತು. ಆಚಿ ಗಂಡನ ಮನೆಗೆ ಹೊರಟಳು. ಬಸ್ಸು ಹೊರಟಿತ್ತು. ಎಲ್ಲರೂ ಕೈಯಾಡಿಸಿದರು. ಕಣ್ಣುಗಳು ಹನಿಗೂಡಿದ್ದವು. ಗಂಟಲುಬ್ಬಿ ಬಂದಿತ್ತು.

* * *

## - - 16 - -

ಮದುವೆಯಾದ ವರ್ಷದೊಳಗೆ ಚೊಚ್ಚಲ ಬಾಣಂತನಕ್ಕೆ ತವರಿಗೆ ಬಂದಿದ್ದಳು.

"ನಿನ್ನ ಓದು ಬರಹ ಹೇಗೆ ನಡೆದಿದೆ?" ತಾಯಿ ಹಾಸ್ಯ ಮಾಡಿದಾಗ, ಆಚಿ ನಾಚಿದ್ದಳು. ತಾಯಿಯ ಕಣ್ಣು ಮಗಳ ಮೇಲೆ ಹರಿದಾಡಿದವು.

"ಪ್ರೈವೇಟ್‌ನಲ್ಲಿ ಪಿಯುಸಿ ಮಾಡ್ತೀನಿ. ನೋಡ್ತಿರು"

"ಧಾರಾಳವಾಗಿ ಮಾಡಮ್ಮ. ನಿನ್ನ ಅತ್ತೆ ನಿನ್ನನ್ನ ಚೆನ್ನಾಗಿ ನೋಡಿಕೊಂಡಿದಾರೆ ಅಂತ ನಿನ್ನ ಅಂಗಾಂಗವೇ ಹೇಳುತ್ತೆ. ಹೀಗೇ ಸದಾಕಾಲ ಸುಖವಾಗಿರು" ಬಾಯಿ ತುಂಬಾ ಹಾರೈಸಿದಳು.

"ಅಪ್ಪ ಎಷ್ಟು ಹೊತ್ತಿಗೆ ಬರ್ತಾರಮ್ಮಾ?"

"ಈ ನಡುವೆ ಅವರಿಗೆ ಬಿಡುವೇ ಇಲ್ಲ. ರಾತ್ರಿ ಹತ್ತಾಗುತ್ತೆ ಮನೆಗೆ ಬರೋದು. ಅಂಗಡಿ ಕೆಲಸ ಜಾಸ್ತಿ ಆಗಿದೆ" ಮಗಳ ಮುಖ ಮಂಕಾದುದನ್ನು ಗಮನಿಸಿದಳು.

"ಇನ್ನೊಂದೆರಡು ವರ್ಷ ಅಷ್ಟೇ. ಯಾವುದೋ ದುಡ್ಡು ಬರುತ್ತೆ ಅಂತ ಹೇಳ್ತಾನೇ ಇರ್ತಾರೆ. ಆಮೇಲೆ ನಿರಾತಂಕ ...."

"ನಾನು ಬಾಣಂತನಕ್ಕೆ ಬರಬಾರದಾಗಿತ್ತು. ಅಲ್ಲೇ ಇರಬೇಕಾಗಿತ್ತು"

"ಹಾಗ್ಯಾಕೆ ಅಂತೀಯ. ಚೊಚ್ಚಲು ಬಾಣಂತನಕ್ಕೆ ತವರಿಗೆ ಬರಲೇಬೇಕು. ನಾನೂ ನಿನ್ನ ಬಾಣಂತನಕ್ಕೆ ಅಜ್ಜಿ ಮನೆಗೆ ಹೋಗಿದ್ದೆ. ಅಳಿಯಂದ್ರು ಎಲ್ಲಿ? ಕಾಫಿ ಗೀಫಿ ಬೇಕಾ ಕೇಳು"

"ಮಾಡಿಕೊಟ್ಟರೆ ಕೊಟ್ಟು ಬರ್ತೀನಿ"

"ಇಂಥಾ ದಿನ ಬರ್ತೀವಿ ಅಂತ ಮೊದಲೇ ತಿಳಿಸಬಾರದಾಗಿತ್ತೇ? ನ್ಯಾಯವಾಗಿ ನಾನೇ ಬರಬೇಕಾಗಿತ್ತು. ನೀವುಗಳು ಬರೋದು ಬೇಡ ಅಂತ ನಿಮ್ಮ ಅತ್ತೆ ಪತ್ರ ಬರೆಸಿದ್ದರು. ಯಾಕೆ?"

"ಯಾರಿಗೆ ಗೊತ್ತು? ಬಹುಶಃ ನಿಮಗೇಕೆ ಕಷ್ಟ ಕೊಡಬೇಕೂಂತ ಇರಬಹುದು"

"ಈ ಆರು ತಿಂಗಳಿನಲ್ಲಿ ಒಂದು ಸಲವೂ ಕಳಿಸಲಿಲ್ಲ. ಮದುವೆಯಾದ ಹೊಸದರಲ್ಲಿ ಒಂದೆರಡು ಸಾರಿ ಬಂದಿದ್ರಿ... ನೀನು ಬಸಿರಿ ಅಂತ ಸಹ ತಿಳಿಸಲಿಲ್ಲ. ಅಷ್ಟು ಮುಚ್ಚಟೇನಾ?"

"ಅಲ್ಲಿಯೂ ಬೇರೆ ಯಾರಿಲ್ಲ. ಹೊರಗಿನ ಬಿಸಿನೆಸ್ಸಿನ ವ್ಯವಹಾರವೆಲ್ಲಾ ಅಪ್ಪ ಮಗನದು. ಅತ್ತೆಗೆ ಮನೆ ಕೆಲಸದಿಂದ ಬಿಡುವಿಲ್ಲ. ನನಗೂ ಏನೂ ಗೊತ್ತಾಗುತ್ತಿರಲಿಲ್ಲ"

"ಹೋಗಲಿ ಬಿಡು. ಸುಖವಾಗಿದೀಯ ತಾನೇ? ಅದು ಮುಖ್ಯ"

"ಹೂಂ, ನಮ್ಮ ನನ್ನ ಬಗ್ಗೆ ಚಿಂತಿಸಲೇ ಬೇಡಿ..... ಸುಮಂತ ಹೇಗೆ ಓದುತ್ತಿದ್ದಾನೆ? ಸಂಧ್ಯಾವಂದನೆ, ಜಪ ಎಲ್ಲಾ ಹೊತ್ತಿಗೆ ಸರಿಯಾಗಿ ಮಾಡ್ತಾನಾ?"

"ಹುಂ ಎಲ್ಲಾ ಮಾಡ್ತಾನೆ. ಆದರೆ ಸೋಮಾರಿತನ ಮಾತ್ರ ಕಡಿಮೆ ಆಗಿಲ್ಲ. ಈಗಲೂ ಸೋಮನೇ"

"ಸೋಮಾರಿ ಸೋಮ ಅಂತ ಹೆಸರಿಟ್ಟವಳೇ ನಾನಂತೆ. ಮರತೇ ಹೋಗುತ್ತೆ. ಅವರೆಲ್ಲಾ ಬಾಯಿ ತುಂಬಾ ಸುಮಂತ ಅಂತಲೇ ಹೇಳ್ತಾರೆ ನನ್ನನ್ನು ಎಲ್ಲರೂ ಲಕ್ಷ್ಮೀ ಅಂತಲೇ ಕರೆಯೋದು. ಎಷ್ಟೋ ಸಲ ನನಗೇ ಮರೆತಿರುತ್ತೆ"

"ಹುಂ, ಹೋಗು ನಿನ್ನ ಯಜಮಾನರಿಗೆ ಕಾಫಿ ಕೊಟ್ಟು ಬಾ. ಬೇಗ ಬೇಗ ಅಡಿಗೆ ಮಾಡ್ತೀನಿ. ಬಿಸಿಯಾಗಿ ಊಟ ಮಾಡಿ, ಬೇಗ ಮಲಗೂವಂತೆ. ಪ್ರಯಾಣದ ಆಯಾಸ ಬೇರೆ."

ಹೊರಗೆ, ಆಚಿ ಗಂಡನ ಜತೆ ಕುಳಿತು ಮಾತನಾಡುತ್ತಿದ್ದಳು. ಸುಮಂತ ಆಟ ಮುಗಿಸಿ ಮನೆಗೆ ಬಂದವನು ಅಕ್ಕನನ್ನು ಕಂಡು ಹಾಗೇ ನಿಂತ.

"ಎಷ್ಟು ಬೇಗ, ಎಷ್ಟುಬೆಳೆದು ಬಿಟ್ಟಿದೀಯಲ್ಲೋ ..... ಆಟ ಆಯ್ತಾ?"

"ಹೂಂನಕ್ಕಾ ....."

"ಭಾವನ್ನ ಮಾತಾಡಿಸೋಲ್ವ ...." ಸುಮಂತ ನಾಚಿದ.

"ಏನಯ್ಯಾ ಭಾಮೈದ ಹೇಗಿದೀಯ?" ಭಾವನೇ ಮಾತನಾಡಿಸಿದಾಗ, ನಾಚುತ್ತಾ ಉತ್ತರಿಸಿದ. ಅಕ್ಕ ಗಂಡನ ಮನೆಗೆ ಹೋಗಿ ಏಳೆಂಟು ತಿಂಗಳುಗಳೇ ಕಳೆದುಹೋಗಿವೆ. ಏನೋ ಸಂಕೋಚ. ಒಳಗೆ ಬಂದು ಕೈಕಾಲು ತೊಳೆದು, ಹಣೆಗೆ ವಿಭೂತಿ ಹಚ್ಚಿ

ಸಂಧ್ಯಾವಂದನೆಗೆ ಕುಳಿತ.

"ಬೇಗ ಮೂರು ಆಚಮನ ಮಾಡಿ ಏಳು. ಸ್ವಲ್ಪ ಅಂಗಡಿಗೆ ಹೋಗಿ ಬರೂವಂತೆ"

ಸುಮಂತನಿಗೆ ಬೇಕಾದದ್ದು ಅದೇ. ಸಂಕ್ಷಿಪ್ತವಾಗಿ ಸಂಧ್ಯಾವಂದನೆಯನ್ನು ಮುಗಿಸಿ ಎದ್ದು ಸಿದ್ಧನಾದ. ತಾಯಿ ಕೊಟ್ಟ ಚೀಟಿಯನ್ನು ಹಣವನ್ನು ಹಿಡಿದು ಅಂಗಡಿಯ ಕಡೆ ಓಡಿದ. ಹಾಗೇ ತಂದೆ ಲೆಖ್ಖ ಬರೆಯುತಿದ್ದ ಅಂಗಡಿಯ ಬಳಿ ಹೋಗಿ, ಅಕ್ಕ ಭಾವ ಬಂದಿರುವ ಸುದ್ದಿಯನ್ನು ತಿಳಿಸಿದ.

"ತಡೀ ನಾನೂ ಬಂದೆ" ಎಂದು ರಾಮಸ್ವಾಮಿ ಹೊರಟರು. ಹಾಗೇ ದಾರಿಯಲ್ಲಿ ಹೂವು ಹಣ್ಣು ತರಕಾರಿಗಳನ್ನು ಕೊಂಡು ಮನೆಗೆ ಇಬ್ಬರೂ ಬಂದರು.

ಒಂದು ರಾತ್ರಿ ಮಾತ್ರ ಉಳಿದುಕೊಂಡ ಶೇಷಾದ್ರಿ ಮಾರನೇ ದಿನವೇ ಹೊರಟ.

"ಇನ್ನೊಂದೆರಡು ದಿನ ಇರಬಹುದಾಗಿತ್ತು" ದೇಶಾವರಿ ನಗೆ ನಕ್ಕು ಹೇಳಿದ ರಾಮಸ್ವಾಮಿ.

"ಮತ್ತೆ ಬರ್ತೀನಿ" ಎಂದಷ್ಟೇ ಹೇಳಿ ಹೊರಟು ಬಿಟ್ಟ. ಶಾಂತಳಿಗೆ ನಿರಾಸೆಯಾಗಿತ್ತು.

"ಅದ್ಯಾಕೇ ಹೀಗಾಡ್ತಾರೆ ನಿನ್ನ ಗಂಡ? ಇನ್ನೆರಡು ದಿನ ಇಲ್ಲಿ ಇದ್ದಿದ್ರೆ. ಊರ್‍ನಲ್ಲಿ ಕೊಳ್ಳೆ ಹೋಗ್ತಿತ್ತಾ?"

"ಬಿಡಮ್ಮ .... ಅವರವರ ಇಷ್ಟ. ಇಲ್ಲಿ ಇದ್ದು ತಾನೇ ಏನು ಮಾಡ್ತಾರೆ? ಅಪ್ಪನ ಹತ್ತಿರ ಏನು ಮಾತಿರುತ್ತೆ? ಅಲ್ಲದೇ ಅಪ್ಪ ರಜಾ ಹಾಕಿ ಮನೇಲಿರುಕ್ಕೆ ಆಗುತ್ತಾ? ಇನ್ನು ಸೋಮ ... ಅವನು ಓದು ಪಾಠ ಬಿಟ್ಟು ಅವರ ಎದುರಿಗೇ ಕೂತಿರೋಕೆ ಆಗುತ್ತಾ?"

"ಅದೂ ನಿಜ ಅನ್ನು. ಸೋಮನಿಗೆ ಈ ಸಾರಿ ಪಬ್ಲಿಕ್ ಪರೀಕ್ಷೆ. ಓದೋದೇ ಕಡಿಮೆ. ಅದೇನು ಪಾಸು ಮಾಡ್ತಾನೋ?"

"ನಾನು ಬಂದಿದೀನಲ್ಲ. ಕಿವಿ ಹಿಂಡಿ ಓದಿಸ್ತೀನಿ... ನೀನು ನಿಶ್ಚಿಂತೆಯಾಗಿರು"

"ರಾತ್ರಿಗೆ ಏನು ಅಡಿಗೆ ಮಾಡಲಿ ಹೇಳು. ನಿನಗೇನು ಇಷ್ಟ?"

"ಯಾವುದೋ ಒಂದು. ಈಗಿನ್ನು ಊಟವಾಗಿದೆ ......"

"ಹಾಗಲ್ಲ ಏನು ಬೇಕೋ ಮುಚ್ಚು ಮರೆ ಇಲ್ಲದೇ ಹೇಳು. ಅತ್ತೆ ನೀನು ಕೇಳಿದ್ದನ್ನೆಲ್ಲಾ ಮಾಡಿ ಹಾಕಿರಬಹುದು. ಆದರೆ, ......"

"ಆದರೆ, ಅಜ್ಜಿ ಮಾಡುವ ಸೊಪ್ಪಿನ ಹುಳಿ ರುಚಿ ಎಲ್ಲಿಯೂ ಇಲ್ಲ. ಅಜ್ಜಿಗೆ ಈಗಲೇ ಬನ್ನಿ ಅಂತ ಕಾಗದ ಬರಿ. ನಾನು ಇಲ್ಲಿ ಇರೋವರೆಗೂ ದಿನಾ ಸೊಪ್ಪಿನ ಹುಳಿ, ಸಂಡಿಗೆ ... ಎರಡೇ ಅಡಿಗೆ ....."

ಶಾಂತ ಬಾಯಿ ತುಂಬಾ ನಕ್ಕಳು. ಹೀಗೆ ನಕ್ಕು ಎಷ್ಟೋ ದಿನಗಳಾಗಿ ಹೋಗಿವೆ ಅಂತೆನ್ನಿಸಿತ್ತು.

"ಅಮ್ಮಾ .... ಅಪ್ಪ ಎಷ್ಟು ಸೊರಗಿ ಹೋಗಿದಾರೆ ಅಲ್ವೇನಮ್ಮಾ ...."

"ಇರಬಹುದು. ವಯಸ್ಸಾಯ್ತಲ್ಲ ......"

"ಪಾಪ, ಅಪ್ಪನಿಗೆ ನಮ್ಮನ್ನು ಬಿಟ್ಟರೆ ಬೇರೆ ಯಾರಿಲ್ಲ. ನಿಮ್ಮ ಮದುವೆಯಾದಾಗ್ಲೂ ಯಾರು ಇರಲಿಲ್ವಾ?"

"ಯಾರೂ ಇರಲಿಲ್ಲ. ಒಂಟಿಯಾಗಿಯೇ ಇದ್ದರು"

"ನಿನಗೆ ಬೇಜಾರಾಗುತ್ತಿರಲಿಲ್ಲವಾ?"

"ಬೇಜಾರಾಗದಂತೆ, ನಿಮ್ಮಪ್ಪ ನನ್ನನ್ನು ಚೆನ್ನಾಗಿ ನೋಡಿಕೊಂಡರು"

"ಅಷ್ಟಾದ್ರೂ ಯಾಕಮ್ಮಾ ಅವರನ್ನ ಬೈತಾನೇ ಇರ್ತೀಯಲ್ಲ"

"ಮುಂಚೆಯೆಲ್ಲಾ ನಾನು ಬೈತಾನೇ ಇರಲಿಲ್ಲ ನಾನು. ಸಂಸಾರ ಬೆಳೀತಾ ಬೆಳೀತಾ ನನ್ನ ಬಾಯಿ ದೊಡ್ಡದಾಯಿತು ಅಷ್ಟೇ ....."

"ಏನಮ್ಮಾ ಗತಿ? ನಿನ್ನ ಹಾಗೇ ನನ್ನ ಬಾಯಿ ದೊಡ್ಡದಾಗಿ ಬಿಟ್ಟರೇ......?"

"ಆಗಲೇ ಬೇಕು. ಇಲ್ಲದಿದ್ದರೆ ಸಂಸಾರ ಸಾಗಿಸೋದೇ ಕಷ್ಟ. ಬಾಯಿ ಇದ್ದೋರು ಬರದಲ್ಲೂ ಗೆದ್ದರು ಅಂತ ತೆಪ್ಪಗಿದ್ದರೆ ಎಷ್ಟೋ ಕಷ್ಟನಷ್ಟಗಳನ್ನು ಅನುಭವಿಸಬೇಕಾಗುತ್ತೆ. ಆದರೆ ನನ್ನ ಹಾಗೇ ನೀನು ಆಗಬೇಕೂಂತ ಏನಿಲ್ಲ. ನಿನ್ನ ಗಂಡನ್ನ ನಿನ್ನ ಹದ್ದು ಬಸ್ತಿನಲ್ಲಿಟ್ಟುಕೊಂಡಿದ್ದರೆ ಸಾಕು..... ನಿನ್ನ ಗಂಡನಿಗೆ ಏನೂ ದುಶ್ಚಟಗಳಿಲ್ಲ ತಾನೇ?"

"ಇಲ್ಲಮ್ಮ ತುಂಬಾ ಒಳ್ಳೆಯವರು ...."

"ಮೇಲು ನೋಟಕ್ಕೆ ಒಳ್ಳೆಯವರಾಗಿರುತ್ತಾರೆ. ಅಂತರಂಗದಲ್ಲಿ ಏನೇನಿರುತ್ತೋ..... ಗೊತ್ತಾಗುಲ್ಲ......."

"ಹಾಗಾದ್ರೆ ಇಂಥೋರಿಗೆ ಕೊಟ್ಟು ಯಾಕೆ ಮದುವೆ ಮಾಡಿದೆ?"

"ಇಂಥೋನು ಅಂಥೋನು ಅಂತ ಮುಖ ನೋಡಿದರೆ ಗೊತ್ತಾಗುತ್ತೇನೇ? ಅವರ ಜತೆ ಸಂಸಾರ ಮಾಡಿದ ಮೇಲೇನೇ ಗೊತ್ತಾಗೋದು....."

"ಒಂದು ವೇಳೆ ಇವರು ಸರಿಯಾಗಿಲ್ಲ ಅಂತ ತಿಳಿದರೆ, ನಾನು ಇಲ್ಲಿಗೇ ವಾಪಸ್ಸು ಬಂದು ಬಿಡ್ತೀನಿ ಅಷ್ಟೇ ....."

"ಹಾಗೆಲ್ಲಾದರೂ ಮಾಡೀಯ ಜೋಕೆ. ನೀನು ಬಿಗಿಯಾಗಬೇಕು. ಇಲ್ಲದಿದ್ದರೆ ಸಂಸಾರವೇ ಹಾಳಾಗುತ್ತೆ"

"ಏನೇನೋ ಹೆದರಿಸಬೇಡಮ್ಮ. ಈಗ ನಾವಿಬ್ಬರೂ ಅನ್ಯೋನ್ಯವಾಗಿದೀವಿ. ಅತ್ತೆ ಮಾವ ಕೂಡ ಒಳ್ಳೆಯವರು"

"ಸಧ್ಯ..... ದೇವರು ಸದಾ ಕಾಲಕ್ಕೂ ನಿಮ್ಮನ್ನೆಲ್ಲಾ ಹೀಗೇ ಕಾಪಾಡಲಿ. ಚಕ್ಕುಲಿ ಕೋಡುಬಳೆ ಇದೆ ಕೊಡ್ಲಾ? ತಿಂತೀಯ ...."

"ಬೇಡಮ್ಮ. ಒಂದು ಗಳಿಗೆ ಮಲಗಿರ್‍ತೀನಿ" ಆಚಿ ಅಲ್ಲೇ ಹಾಗೇ ಚಾಪೆಯ ಮೇಲೆ ಉರುಳಿಕೊಂಡಳು.

ಚೊಚ್ಚಲು ಬಸಿರಿ. ಏಳನೇ ತಿಂಗಳಿನಲ್ಲಿ ಬಳೆ ತೊಡಿಸುವ ಶಾಸ್ತ್ರ ಆರತಿ ಮಾಡಬೇಕು. ಹಸಿರು ಬಣ್ಣದ ಸೀರೆ ತರಬೇಕು. ಸಿಲ್ಕು ಸೀರೆ ಅಂತಂದರೆ ಎಷ್ಟಾಗುತ್ತೋ ಗಂಡನ ಬಳಿ ಹಣವಿಲ್ಲವೆಂದು ಶಾಂತಳಿಗೆ ತಿಳಿದಿತ್ತು. ಅತ್ತಿಗೆ ಕೊಟ್ಟ ಹಣದಲ್ಲಿ ಸ್ವಲ್ಪ ಉಳಿಸಿಟ್ಟುಕೊಂಡಿದ್ದಳು. ತಾನೇ ಹೋಗಿ ನೂರೈವತ್ತು ರೂಪಾಯಿನ ಪ್ರಿಂಟೆಡ್ ಸಿಲ್ಕ್ ಸೀರೆಯನ್ನು ತಂದಳು.

ಮನೆಯಲ್ಲಿ ಮತ್ತೆ ಒಂದು ಸಣ್ಣ ಸಮಾರಂಭ. ಆಚಿಯ ಅತ್ತೆಯ ಮನೆಯವರು, ಶಾಂತಳ ತವರಿನವರು ಕೆಲವರು ಬಂದಿದ್ದರು. ಊಟ ಉಡುಗೊರೆಯ ಖರ್ಚು ರಾಮಸ್ವಾಮಿಯದೇ. ಸುಜಾತ ಕೊಟ್ಟ ಹಣ ಉಪಯೋಗಕ್ಕೆ ಬಂದಿತ್ತು. ಮದುವೆಗೆ ಅವಳು ಬಂದಿರಲಿಲ್ಲವಾದುದರಿಂದ, ಅವಳು ಕೊಟ್ಟ ಹಣದ ಬಗ್ಗೆ ತಿಳಿಸಿರಲಿಲ್ಲ. ಆದರೂ ಮನ ಕುಂದಿತ್ತು.

ಸಂಭ್ರಮದಿಂದ ಮುತ್ತೈದೆಯರು, ಆಚಿಯನ್ನು ಅಲಂಕರಿಸಿ, ಹಸೆಮಣೆಯ ಮೇಲೆ ಕೂರಿಸಿ, ಮಡಿಲು ತುಂಬಿ ಆರತಿ ಎತ್ತಿದರು. ಬಸಿರಿಯ ಆರತಿಗೆಂದು ಮಾಡಿದ್ದ

ಬಗೆಬಗೆಯ ಉಂಡೆಗಳು, ಸಿಹಿತಿಂಡಿಗಳು, ಚಕ್ಕುಲಿ ಮುಚ್ಚೋರೆ ಇತ್ಯಾದಿ, ವಿಧವಿಧವಾದ ಹಣ್ಣುಗಳು, ತಟ್ಟೆಗಳಲ್ಲಿ ಅಲಂಕೃತವಾಗಿದ್ದವು.

"ಇದೆಲ್ಲಾ ನಿನಗೇ.... ಹೆರಿಗೆಗೆ ಮೊದಲು ಇದನ್ನೆಲ್ಲಾ ತಿಂದು ಮುಗಿಸಬೇಕು" ಯಾರೋ ಹೇಳಿದರು. ಆಚಿ ಹೆದರಿದಳು.

"ಅಬ್ಬಾ ನನ್ನ ಕೈಲಾಗುಲ್ಲಪ್ಪಾ...."

"ನಿನಗಿಂತ ಚಿಕ್ಕವರು ತಿನ್ನಬಹುದು...... ನಿನಗೆ ಜಾಸ್ತಿ ಆದರೆ....."

"ನನ್ನ ಗಂಡನೂ ತಿನ್ನಬಾರದಾ? ....."

"ಖಿಲಾಡಿ...... ನೀನು ನಿನ್ನ ಗಂಡ ಇಬ್ಬರೇ ಹಂಚಿಕೊಂಡು ತಿನ್ನುವ ಆಸೇನಾ? ಮನೆ ತುಂಬಾ ಚಿಕ್ಕ ಮಕ್ಕಳಿವೆ. ನೋಡು ಈಗಾಗ್ಲೇ ಹೇಗೆ ಬಾಯಿ ಬಿಟ್ಟುಕೊಂಡು ನೋಡ್ತಿವೆ....."

"ಅವಕ್ಕೆ ಕೊಡದೇ ತಿಂದರೆ ದೃಷ್ಟಿಯಾಗುತ್ತೆ. ಮೊದಲು ಅವುಗಳ ಕೈಗೆ ಒಂದೊಂದು ಪುರಿ ಉಂಡೆ, ಒಂದೊಂದು ಚಕ್ಕುಲಿ ಕೊಟ್ಟು ಉಳಿದದ್ದನ್ನೆಲ್ಲಾ ತೆಗೆದು ಮುಚ್ಚಿ ರೂಮಿನೊಳಗಿಡಿ. ಅವಳಿಗೆ ಯಾವಾಗ ಬೇಕೋ ಆಗ ತಿನ್ನಲಿ" ಅಜ್ಜಿ ಹೇಳಿದರು. ಚಿಕ್ಕ ಮಕ್ಕಳ ಕೈಗೆ ತಿಂಡಿ ಬಿದ್ದ ಕೂಡಲೇ ಅವುಗಳು ಅಲ್ಲಿಂದ ಓಡಿದವು. ಈಗ ಬರೀ ಹಿರಿಯ ಹೆಂಗಸರೇ. ಪೊರಕೆ ಕಡ್ಡಿಯನ್ನು ಹಚ್ಚಿ ನೀವಾಳಿಸಿ ದೃಷ್ಟಿ ತೆಗೆದರು.

ಶಾಂತ ತಾಯಿಯನ್ನು ಉಳಿಸಿಕೊಂಡಳು. ಉಳಿದ ನೆಂಟರಿಷ್ಟರೆಲ್ಲಾ ವಾಪಸ್ಸು ಹೊರಟು ಹೋಗಿದ್ದರು. ಸುಮಂತನ ಬಸಿರಿಯಲ್ಲಿ, ತಾಯಿ ಬರುವ ಮೊದಲೇ ತನ್ನ ಹೆರಿಗೆಯಾಗಿತ್ತೆಂದು ನೆನಪಿಗೆ ಬಂದಿತ್ತು. ಆಚಿ ಚಿಕ್ಕವಳು, ಚೊಚ್ಚಿಲು ಬೇರೆ...... ಹೇಗೋ ಏನೋ ಎಂಬ ಭಯ, ಆತಂಕ. ತಾಯಿ ಜತೆಗಿದ್ದರೆ ಸಮಾಧಾನ.

"ಅಜ್ಜಿ ಹೇಗೂ ಇದೀರಿ...... ನನಗೆ ಸೊಪ್ಪಿನ ಹುಳಿ..... ಸಂಡಿಗೆ ಮಾಡಿ ಬಡಿಸಬೇಕು.... ದಿನಾ ......"

"ದಿನಾ ಸೊಪ್ಪು ತಿಂದರೆ ಕರಿ ಮಗು ಹುಟ್ಟುತ್ತೆ ಅಷ್ಟೇ......" ಆಕೆ ತಮಾಷೆ ಮಾಡಿದರು. ಆಚಿ ಕೆಟ್ಟ ಮುಖ ಮಾಡಿದಳು.

"ಸುಮ್ಮನೇ ತಮಾಷೆ ಮಾಡಿದೆ. ಅದನ್ನೇ ಚಿಂತಿಸಬೇಡ. ಸೊಪ್ಪು ಆರೋಗ್ಯಕ್ಕೆ ಒಳ್ಳೇದು ನಿಜ. ಬೇರೆ ಬೇರೆ ಅಡಿಗೆಯನ್ನು ತಿನ್ನಬೇಕು. ಒಂದೊಂದು ದಿನ ಒಂದೊಂದು ಮಾಡಿ ಹಾಕ್ತೀನಿ ......"

"ಈ ಆಚಿ, ಸುಮ್ಮನೇ ಕೂತು ತಿಂದೂ ತಿಂದೂ ಡುಮ್ಮಿಯಾಗಿದಾಳೆ" ಸುಮಂತ ತಮಾಷೆ ಮಾಡಿದ.

"ನೀನು ಇನ್ನೇನು? ಹೆಸರೇ ಸೋಮಾ.....ಬರಿ ತಿನ್ನೋದು ಮಲಗೋದು ನೀನೇನು ಕಡ್ಡಿ ಹಾಗಿಲ್ಲ"

"ನೀವಿಬ್ರೂ ಜಗಳ ಆಡಬೇಡಿ. ಆಚಿ ನೀನು ದೊಡ್ಡೋಳು.... ಅಲ್ಲದೇ ಮದುವೆ ಆದೋಳು. ನೀನಾದ್ರೂ ಸುಮ್ಮನಿರಬಾರದಾ?"

"ನೋಡಮ್ಮ ಡುಮ್ಮಿ ಗಿಮ್ಮಿ ಅಂತಾನೆ ......."

"ಅವನು ಗಂಡು ಹುಡುಗ. ಅವನಿಗೇನು ತಿಳಿಯುತ್ತೆ? ನೀನು ಈಗಲೂ ಹೀಗೆ ಸಿಟ್ಟು ಕೋಪ ಮಾಡ್ಕೋಬಾರದು....."

"ಹುಂ, ನನಗ್ಯಾಕೆ ತಿಳಿಯುಲ್ಲ. ಎಲ್ಲಾ ತಿಳಿಯುತ್ತೆ..... ನಾನೂ ದೊಡ್ಡೋನಾಗಿದೀನಿ ....."

"ಸರಿ ಸರಿ. ದೊಡ್ಡೋನಾದ ಮೇಲೆ ಜಾಣನೂ ಆಗಬೇಕು ತಾನೇ. ಅಕ್ಕನ್ನ ಸತಾಯಿಸಬೇಡ. ನಾಳೆ ಹುಟ್ಟುವ ಅವಳ ಮಗ ನಿನ್ನನ್ನ ಬೈತಾನೆ ಅಷ್ಟೇ......." ಆಚಿ ನಾಚಿದಳು. ಸುಮಂತನೂ ಕೆಂಪಾಗಿದ್ದ. ಅವನ ಕಡೆ ನೋಡಿ ಅಜ್ಜಿ ನುಡಿದಳು.

"ಅಕ್ಕ ತಮ್ಮ ಅಂತಂದ್ರೆ ಅನ್ಯೋನ್ಯವಾಗಿರಬೇಕು. ಅದು ಬಿಟ್ಟು ಚಿಕ್ಕ ಮಕ್ಕಳ ತರಹ ಕಾದಾಡ್ತೀರಲ್ಲ. ಅವಳು ಮದುವೆಯಾಗಿ ಗಂಡನ ಮನೆಗೆ ಹೋಗಿರುವವಳು. ಇನ್ನು ಮುಂದೆ ಅವಳು ತವರಿಗೂ ಅಪರೂಪವೇ.... ಬಾ.. ಬಾ... ಅಂತ ಬಲವಂತ ಮಾಡಿ ಕರೆದ್ರೂ ಬರುಕ್ಕಾಗುತ್ತೋ ಇಲ್ಲವೋ?"

"ಇದೆಲ್ಲ ಅವನಿಗೇನು ಅರ್ಥವಾಗುತ್ತಮ್ಮ.... ನೀನೂ ಅಷ್ಟೇ ಉಪದೇಶಕ್ಕೆ ಶುರು ಮಾಡಿದರೆ ಆಯ್ತು.... ಮುಗಿಯೋದೇ ಇಲ್ಲ" ಶಾಂತ ಹೇಳಿದಳು.

"ಆಗಾಗ ತಿಳುವಳಿಕೆ ಹೇಳದಿದ್ದರೆ, ತಾವು ಆಡೋ ರೀತೀನೇ ಸರಿ ಅನ್ನೋ ಭಾವನೆ ಬೆಳೆಯುತ್ತೆ. ನೋಡ್ತಿರು ಇನ್ನು ಮುಂದೆ ಇಬ್ಬರೂ ಹೀಗೆಲ್ಲಾ ವಾದ ಮಾಡುಲ್ಲ. ಅಲ್ವೇನೋ ಸೋಮು" ಸೋಮು ಅಲ್ಲಿಂದ ಹೊರಟು ಹೋಗಿದ್ದ. ಆಚಿಗೆ ಬೇಸರವಾಗಿತ್ತು.... ಅವನನ್ನು ಒಂದು ಸ್ವಲ್ಪ ಗೋಳು ಹುಯ್ದುಕೊಳ್ಳಬಹುದಾಗಿತ್ತು. ಈ ಅಜ್ಜಿ ತಪ್ಪಿಸಿದಳು ಅಂತ ಸಹುಕೋಪ ಸಹ ಬಂದಿತ್ತು.

ಆಚಿಗೆ ಹೆರಿಗೆಯ ದಿನಗಳು ಸಮೀಪಿಸಿದ್ದವು. ನೋಡಿದವರು ಅವಳಿ ಮಕ್ಕಳು ಹುಟ್ಟಬಹುದು ಎಂದು ಅನುಮಾನ ಪಡುವ ಹಾಗೆ ಕಾಣುತ್ತಿದ್ದಳು. ಈ ಮಧ್ಯೆ ಅವಳ ಗಂಡ ಶೇಷಾದ್ರಿ ಒಂದೆರಡು ಸಾರಿ ಬಂದು ಹೋಗಿದ್ದ. ಅಳಿಯ ತನ್ನ ಗಂಡನಷ್ಟು ರಸಿಕನಲ್ಲವೆಂದು ಅವನ ಮಾತುಕತೆಗಳಲ್ಲೇ ಅಳೆದಿದ್ದಳು ಶಾಂತ. ಎಷ್ಟಾಗಲೀ ತಂದೆ ತಾಯಿಯ ಅಧೀನದಲ್ಲಿರುವವನು, ತನ್ನ ಗಂಡನಂತೆ ಏಕಾಂಗಿಯಾಗಿರಲಿಲ್ಲವೆಂದೂ ಅಂದುಕೊಂಡಳು.

ಡಾಕ್ಟರು ಹೇಳಿದ್ದ ಅವಧಿಯ ದಿನಾಂಕಕ್ಕೆ ಒಂದು ವಾರವಿರುವಾಗಲೇ ಆಚಿ ಗಂಡು ಮಗುವನ್ನು ಹೆತ್ತಳು.

"ಗಂಡು ಮಗುವೇ ಆಗುತ್ತೇಂತ ನನಗೆ ಗೊತ್ತಿತ್ತು....." ಅಂತ ಅಜ್ಜಿ ಹೇಳಿದಾಗ, ಆಚಿ ನಕ್ಕು ನುಡಿದಳು.

"ಮುಂಚೇನೇ ಯಾಕೆ ಹೇಳಲಿಲ್ಲ? ಈಗ ಸುಮ್ಮನೇ ಹೇಳ್ತೀರಿ ಅಷ್ಟೆ"

"ಹಾಗಲ್ಲ. ಎಷ್ಟೋ ಸಾರಿ ನಮಗೇ ತಿಳಿಯದ ಹಾಗೆ, ನಮ್ಮ ಅನಿಸಿಕೆ ಸುಳ್ಳಾಗಿ ಬಿಡುತ್ತೆ. ಹಾಗಾಗಬಾರದು ಅಂತ ಹೇಳಲಿಲ್ಲ ಅಷ್ಟೆ....."

"ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಅನ್ನೋ ಗಾದೆ ನಿಮಗೆ ಸರಿಯಾಗಿದೆ, ಅಜ್ಜೀ....." ನಕ್ಕಳು.

"ಸುಮ್ಮನೇ ಆಯಾಸ ಮಾಡ್ಕೋ ಬೇಡ ಮಲಕ್ಕೋ" ಅಜ್ಜಿ ಗದರಿದಾಗ, ಆಚಿ ತಾಯಿಯ ಕಡೆ ನೋಡಿ ನಕ್ಕಳು.

ಊರಿಗೆ ಟೆಲಿಗ್ರಾಂ ಕಳಿಸಿ ಆಗಿದೆ. ಇವತ್ತೇ ನಿನ್ನ ಗಂಡ ಬಂದರೂ ಬರಬಹುದು. ಆಗ ಮಾತನಾಡುವೆಯಂತೆ. ಮಗೂನ ನೋಡಿದ್ಯಾ? ಎಲ್ಲಾ ನಿನ್ನ ಹಾಗೇ ಇದಾನೆ ನಿನ್ನ ಮಗ....." ಹೌದು ಎನ್ನುವಂತೆ ತಲೆಯಾಡಿಸಿದಳು.

ಬೀಗರ ಮನೆಯವರೂ, ಅತ್ತಿಗೆ ವನಜಾ ಎಲ್ಲರೂ ಒಟ್ಟಿಗೇ ಬಂದು ಇಳಿದರು. ಮಗುವಿನ ಮುಖವನ್ನು ನೋಡಿ ಶೇಷಾದ್ರಿಯ ಮುಖ ಊರಗಲವಾಗಿತ್ತು. ಹೆಂಡತಿಯೊಡನೆ ಪಿಸುದನಿಯಲ್ಲಿ ಏನೋ ಮಾತನಾಡುತ್ತಿದ್ದ.

"ನಿನ್ನ ಮಗನ ಹಾಗೇ ಇದಾನೆ..... ಸುಮಂತ ಏನಂದ ಮಗುವನ್ನು ನೋಡಿ...." ಅತ್ತಿಗೆ ಕೇಳಿದಳು.

"ಅವನಿನ್ನು ನೋಡಿಯೇ ಇಲ್ಲ. ಏನೋ ಕೋಪ ಅವನಿಗೆ....."

"ಮಗುವಿನದು ರೋಹಿಣಿ ನಕ್ಷತ್ರ ಅಲ್ಲ ತಾನೇ? ಮಾವಂಗೂ ಅಳಿಯಂಗೂ ಆಗದ ನಕ್ಷತ್ರ ಅದು. ಹಾಗೇನಾದ್ರೂ ಇದ್ದರೆ ಶಾಂತಿ ಮಾಡಿಸಬೇಕಾಗುತ್ತದೆ" ಅತ್ತಿಗೆ ಹೇಳಿದಾಗ ಶಾಂತ ಪಿಳಿ ಪಿಳಿ ಕಣ್ಣು ಬಿಟ್ಟಳು.

"ಇಲ್ಲ..... ರೋಹಿಣಿ ನಕ್ಷತ್ರ ಅಲ್ಲ. ಮಖಾ ನಕ್ಷ್ರ. ನಾನು ತಕ್ಷಣವೇ ನೋಡಿದೆ" ಬೀಗಿತ್ತಿ ನುಡಿದಾಗ, ಶಾಂತ ಹಾಯಾಗಿ ಉಸಿರಾಡಿದಳು.

"ನಾಮಕರಣ ಸಮಾರಂಭ ನಮ್ಮ ಮನೇಲಿ ಇಟ್ಟುಕೊಳ್ಳುತ್ತೇನೆ. ಮಗೂಗೆ ಮೂರು ತಿಂಗಳು ಕಳೀಲಿ.... ಒಂದು ಪ್ರಶಸ್ತವಾದ ದಿನವನ್ನು ನೋಡಿ ಮಗೂ ಬಾಣಂತಿಯನ್ನು ಕರೆದುಕೊಂಡು ಬನ್ನಿ" ಎಂದು ಬೀಗರು ಹೇಳಿ ಮಾರನೇ ದಿನವೇ ಹೊರಟು ಬಿಟ್ಟರು. ಶೇಷಾದ್ರಿಯೂ ಹೊರಡಲೇ ಬೇಕಾಯ್ತು.

"ನಿನ್ನ ಗಂಡನೂ ಹೊರಟು ಬಿಟ್ರಲ್ಲೇ. ಎಂಥಾ ಮನುಷ್ಯನೇ? ಮುತ್ತಿನಂಥ ಮಗು ಹುಟ್ಟಿದೆ. ಇನ್ನೊಂದೆರಡು ದಿನವಾದ್ರೂ ಇರಬಹುದಾಗಿತ್ತು.

"ನಾನು ಮನೆಗೆ ಬಂದ ಮೇಲೆ ಮತ್ತೆ ಬರ್ತಾರೆ ಬಿಡಮ್ಮಾ..... ನಾನೀಗ ಆಸ್ಪತ್ರೆಲಿದೀನಿ. ಸದಾ ಇಲ್ಲಿರುಕ್ಕೆ ಆಗುತ್ತಾ?"

"ಹಾಗಾದ್ರೆ ನೀನೇ ಕಳಿಸಿದೆ ಅನ್ನು..... ಏನು ಹುಡುಗ್ರೋ..... ನೀವು ನೀವೇ ಎಲ್ಲಾ ನಿರ್ಧರಿಸಿಬಿಡ್ತೀರಿ..... ಮನೇಲಿ ಬಾಣಂತಿಯಕೋಣೆಗೆ ನಿನ್ನ ಗಂಡ ಬರದ ಹಾಗೆ ನಿನ್ನ ಅಜ್ಜಿಯ ಕಾವಲು ಇರುತ್ತೆ....."

"ನನ್ನ ಬಾಣಂತನಾನ ಅಜ್ಜಿ ಮಾಡ್ತಾರಾ? ಪ್ಲೀಸ್. ಅವರನ್ನು ಇವತ್ತೇ ಊರಿಗೆ ಕಳಿಸಿ ಬಿಡು."

"ಅಮ್ಮ ಇಲ್ಲಿಗೆ ಬಂದಿರೋದೇ ಅದಕ್ಕೆ. ಹೋಗು ಅಂದ್ರೂ ಹೋಗುಲ್ಲ. ಅಲ್ಲದೇ ನಾನು ಹಾಗೆ ಹೇಳುಕ್ಕಾಗುಲ್ಲ....." ಆಚಿ ಮೂತಿ ಉದ್ದ ಮಾಡಿದಳು.

"ಅತ್ತೆಗೆ ಹೇಳಮ್ಮಾ.... ಅವರು ಇರಲಿ. ಅಜ್ಜಿ ಊರಿಗೆ ಹೋಗಲಿ"

"ಅತ್ತಿಗೆ ಆಗಲೇ ಊರಿಗೆ ಹೊರಟಾಯ್ತು....." ಶಾಂತ ನಕ್ಕಳು. ಆಚಿ ನಗಲಿಲ್ಲ.

ಮೂರು ತಿಂಗಳ, ಅಜ್ಜಿಯ ಕಟ್ಟುನಿಟ್ಟಿನ ಬಾಣಂತನ ಆಚಿಗೆ ಸಾಕು ಸಾಕಾಯ್ತು. ಶುಂಠಿಯ ಲೇಹ್ಯ, ಮೆಣಸು, ಬೆಳ್ಳುಳ್ಳಿಯ ಪಥ್ಯ ದಿನ ಬಿಟ್ಟು ದಿನ ಬಿಸಿನೀರಿನ ಅಭ್ಯಂಜನ, ಕೆಂಡದ ಶಾಖದಲ್ಲಿ ತಲೆ ಕಾಯಿಸುವುದು, ಅರಿಶಿನ ಸಾಂಬ್ರಾಣಿಯ ಹೊಗೆಯಲ್ಲಿ ಮೈ ಕಾಯಿಸುವುದು. ಚಿಕ್ಕ ಮಗುವಿನ ಅಳು, ರಗಳೆಯಲ್ಲಿ ನಿದ್ದೆ ಇಲ್ಲದಿರುವುದು...... ಈ ಮಗುವೂ ಸಾಕು... ಈ ಬಾಣಂತನವೂ ಸಾಕು ಎಂದೆನಿಸಿತ್ತು.

ಊರಿನಿಂದ ಗಂಡ ಬಂದಾಗ, ಅವನೊಡನೆ ಮಾತನಾಡಿದರೆ ಬಾಣಂತಿಗೆ ಆಯಾಸವಾಗುತ್ತದೆಂದು ಅಜ್ಜಿ ಅಲ್ಲೇ ಕುಳಿತಿರುತ್ತಿದ್ದಳು. ಒಮ್ಮೊಮ್ಮೆ ಶಾಂತ, ಗಂಡ ಹೆಂಡತಿಯರು ಸರಸವಾಗಿ ಮಾತನಾಡಲಿ ಎಂದು ಕೊಂಡು ತಾಯಿಯನ್ನು ಏನಾದರೂ ನೆಪ ಹೇಳಿ ಕರೆಯುತ್ತಿದ್ದಳು.

"ನಿನಗಾದ್ರೂ ಅಷ್ಟು ತಿಳಿ ಬೇಡವಾ ಶಾಂತ. ಮಾತನಾಡಿ ಗಂಟಲು ಒಣಗಿಸಿ ಕೊಳ್ತಾಳೆ. ಬಾಣಂತಿ ಪದೇ ಪದೇ ನೀರು ಕುಡಿಯಬಾರದು"

"ಹಾಗಲ್ಲಮ್ಮಾ..... ಹೊಸದಾಗಿ ಮದುವೆಯಾದವರು, ಅವರದ್ದೇ ಮಾತುಕತೆ

ಇರುತ್ತೆ... ಅಳಿಯಂಗೂ ಬೇಜಾರಾಗುಲ್ವಾ?"

"ಅದೆಲ್ಲಾ ಇಲ್ಲಿ ನಡೆಯೋಲ್ಲ. ಅವರ ಮನೇಲಿ ಏನು ಬೇಕಾದರೂ ಮಾಡಿಕೊಳ್ಳಲಿ. ನಾನು ಬೇಕಾದ್ರೆ ಹೇಳಿಬಿಡ್ತೀನಿ. ಮೂರು ತಿಂಗಳು ಕಳೆಯುವವರೆಗೂ ಅವನು ಇಲ್ಲಿಗೆ ಬರೋದೇ ಬೇಡ"

"ಅತಿಯಾಯ್ತು ನಿಂದು. ಹಾಗೆಲ್ಲ ಹೇಳುಕ್ಕಾಗುತ್ತಾ ಎಲ್ಲಾದ್ರೂ......"

"ಆ ಬಿಗುಮಾನ ಎಲ್ಲಾ ನಿಮಗೇ. ನನಗೇನು ಮುಲಾಜು? ನಾಳೆ ಏನಾದ್ರೂ ಹೆಚ್ಚು ಕಡಿಮೆ ಆದರೆ, ಆಕ್ಷೇಪಣೆ ಮಾಡೋದು ನಮ್ಮನ್ನೇ....."

"ನಾನೇ ಆಚಿಗೆ ಹೇಳ್ತೀನಿ. ನೀನು ಹೇಳಿದರೆ ಕೋಪ ಮಾಡಿಕೊಳ್ತಾಳೆ."

"ಹಾಗೇ ಎಲ್ಲರಿಗೂ ನನ್ನನ್ನು ಕಂಡರೆ ಕೋಪಾನೆ...... ಯಾಕೆ..... ಹಿಂದೊಂದು ಮುಂದೊಂದು ಆಡುಲ್ಲ ನೋಡು..... ನಿಮಗ್ಯಾರಿಗೂ ಸರಿ ಹೋಗದಿದ್ರೆ ಈಗಲೇ ಹೇಳಿಬಿಡು. ನಾನು ಊರಿಗೆ ಹೊರಟು ಹೋಗ್ತೀನಿ"

"ಅಮ್ಮಾ..... ನಿನ್ನ ದಮ್ಮಯ್ಯ. ಸುಮ್ಮನೇ ಹಗರಣ ಮಾಡಬೇಡ. ನಿನ್ನ ಅಳಿಯಂಗೆ ತಿಳಿದ್ರೆ ಏನಂದುಕೊಳ್ತಾರೆ..."

"ಪಾಪ. ಅವರು ಯಾವ ತಂಟೆಗೂ ಬರುಲ್ಲ. ಅದಕ್ಕೇ ನಾನು ಇಲ್ಲಿದೀನಿ. ಇಲ್ಲದಿದ್ರೆ ನೀವೆಲ್ಲಾ ಎಂಥೋರು ಅಂತ ನನಗೆ ಗೊತ್ತಿಲ್ವಾ?" ಶಾಂತ ಮಾತನ್ನು ಮುಂದುವರಿಸಲು ಇಚ್ಛಿಸದೇ ಅಲ್ಲಿಂದ ಸರಿದು ಹೋಗಿದ್ದಳು.

* * *

## - - 17 - -

ಸುಮಂತನ ಪರೀಕ್ಷೆಗೆ ಕೇವಲ ಎರಡು ತಿಂಗಳು ಉಳಿದಿತ್ತು. ಶಾಲೆಗೆ ರಜೆ ಕೊಟ್ಟಿದ್ದರು. ಆದರೆ, ಮನೆಯಲ್ಲಿ ಓದಿಕೊಳ್ಳಲು ಆಗುತ್ತಲೇ ಇರಲಿಲ್ಲ. ಅಜ್ಜಿಯ ಕಟಿಪಿಟಿ, ಚಿಕ್ಕ ಮಗುವಿ ಅಳು, ಮನೆಗೆ ಬರೋರು ಹೋಗೋರು ಹೀಗೇ ಆದರೆ ತಾನು ಫೇಲಾಗುವುದು ಖಚಿತ ಅಂತೆನ್ನಿಸಿತ್ತು.

ಬೆಳಿಗ್ಗೆ ಕೆಲಸಕ್ಕೆ ಹೋದರೆ ರಾತ್ರಿಗೆ ವಾಪಸ್ಸಾಗುತ್ತಿದ್ದ ತಂದೆ, ಅಡಿಗೆ ಕೆಲಸಗಳಲ್ಲಿ ಸದಾ ನಿರತಳಾಗಿರುತ್ತಿದ್ದ ತಾಯಿ, ಇಷ್ಟಾದರೂ ಹೊತ್ತು ಹೊತ್ತಿಗೆ ತಿಂಡಿಯಿಲ್ಲ ; ಊಟವಿಲ್ಲ. ಅಕ್ಕ ಯಾಕಾದರೂ ಈ ಮಗುವನ್ನು ಹೆತ್ತಳೋ ಅಂತೆನಿಸುತ್ತಿತ್ತು.. ಅವಳೂ ತನ್ನ ಹಾಗೆ ಗಂಡು ಮಗನಾಗಿದ್ದಿದ್ದರೆ ಚೆನ್ನಾಗಿರುತ್ತಿತ್ತು ಅಂತ ಸಹ ಅನ್ನಿಸಿತು.

ಒಮ್ಮೊಮ್ಮೆ ಮಲಗಿರುವ ಮಗುವನ್ನು ನೋಡಿ ಕೆನ್ನೆ ಸವರಿ ಬರುತ್ತಿದ್ದ. ಅಕ್ಕನೊಡನೆ ಮಾತನಾಡಬೇಕೆನಿಸುತ್ತಿರಲಿಲ್ಲ.

"ಏನು ಬೇಕೋ ಸೋಮ? ಯಾಕೆ ಬಂದಿದ್ದೆ?" ಅಕ್ಕ ಕೇಳಿದರೆ,

"ಸುಮ್ಮನೇ ಬಂದಿದ್ದೆ. ಏನೂ ಬೇಕಾಗಿಲ್ಲ" ಅನ್ನುತ್ತಿದ್ದ.

"ಸುಮ್ಮನೇ ಅಲೆದಾಡಿ ಕಾಲ ಕಳೆಯಬೇಡ. ಜಿತವಾಗಿ ಕೂತ್ಕೊಂಡು ಓದು. ಈ ಸಾರಿ ಪಬ್ಲಿಕ್ ಪರೀಕ್ಷೆ. ಚೆನ್ನಾಗಿ ನಂಬರು ತೆಗೀಬೇಕು" ಅಕ್ಕನ ಉಪದೇಶ ಅವನನ್ನು ರೇಗಿಸುತ್ತಿತ್ತು.

"ನನಗೂ ಗೊತ್ತು" ಎಂದು ಒರಟಾಗಿ ನುಡಿಯುತ್ತಿದ್ದ.

ಮಗುವಿಗೆ ಮೂರನೇ ತಿಂಗಳು ಕಳೆಯುವ ಮೊದಲೇ, ಮಗು ಬಾಣಂತಿಯನ್ನು ಕರೆದುಕೊಂಡು ಹೋಗಬೇಕೆಂದು ಹಿರಿಯರು ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿ

ನೆಮ್ಮದಿ ಎನಿಸಿತ್ತು. ಮನೆಯಲ್ಲಿ ಬೇಜಾರಾದಾಗ, ಒಮ್ಮೊಮ್ಮೆ ತನ್ನ ಸ್ನೇಹಿತ ಮಂಜುನಾಥನ ಮನೆಯಲ್ಲಿ ಕುಳಿತು ಓದುತ್ತಿದ್ದ. ಆದೂ ಸರಿ ಎನಿಸುತ್ತಿರಲಿಲ್ಲ. ಓದುವುದಕ್ಕಿಂತ ಆಟ, ಮಾತುಗಳಲ್ಲಿ ಸಮಯ ಕಳೆದು ಹೋಗುತ್ತಿತ್ತು.

ಅಪ್ಪ ಅಮ್ಮನಿಗೆ ನನ್ನ ಮೇಲೆ ಗಮನವೇ ಇಲ್ಲ. ಎಲ್ಲರಿಗೂ ಬರೀ ಅವರವರ ಚಿಂತೆ ಎಂದು ರೇಗುತ್ತಿತ್ತು. "ನಾನೇನಾದರೂ ಫೇಲಾದರೆ ಅದು ನನ್ನ ತಪ್ಪಲ್ಲ" ಎಂದು ಕೂಗಿ ಹೇಳಬೇಕೆಂದೆನಿಸುತ್ತಿತ್ತು.

ಮೂರು ತಿಂಗಳಿಗೆ ಹದಿನೈದು ದಿನ ಮುಂಚಿತವಾಗಿಯೇ ಆಚಿ ತನ್ನ ಮನೆಗೆ ಹೊರಟಳು. ಹೊರಡುವ ಮುನ್ನ ತಮ್ಮನ ಕೈಗೆ ನೂರು ರೂಪಾಯಿಯನ್ನು ಕೊಟ್ಟಳು. ಅವನು ಸಂಕೋಚಗೊಂಡ.

"ಅಜ್ಜಿಗೆ, ಅಮ್ಮಂಗೆ, ಇಬ್ಬರಿಗೂ ಸೀರೆ ತರಿಸಿದ್ದೀನಿ. ಅಪ್ಪಂಗೆ ಏನು ಕೊಡಬೇಕೂಂತ ನನಗೆ ತಿಳೀತಿಲ್ಲ. ಹೋಗಲಿ ಬಿಡು ಈ ಹಣದಲ್ಲಿ ಷರಟು ಪ್ಯಾಂಟು ಹೊಲಿಸಿಕೋ. ಬರೋಕೆ ಆಗೋದಾದ್ರೆ ನಾಮಕರಣಕ್ಕೆ ಬಾ.. ನಾನು ಬಲವಂತ ಮಾಡುವುದಿಲ್ಲ. ನಿನಗೆ ಪರೀಕ್ಷೆಗೆ ಓದಿಕೊಳ್ಳಲು ನನ್ನಿಂದ ಕಷ್ಟವಾಯ್ತು ಅಂತ ನನಗೂ ಗೊತ್ತು. ದಯವಿಟ್ಟು ಕ್ಷಮಿಸಿ ಬಿಡಪ್ಪಾ...." ಆಚಿ ನಾಟಕೀಯವಾಗಿ ನುಡಿದಾಗ, ಅವನಿಗೂ ನಗು ಬಂತು.

"ತೊಂದರೆ ಆದದ್ದೇನೋ ನಿಜ ಕಣೇ..... ನಿನ್ನನ್ನ ನಿನ್ನ ಮಗನ್ನ ಎಷ್ಟೋ ಸಲ ಬೈದುಕೊಂಡಿದೀನಿ. ನೀನೂ ಕ್ಷಮಿಸಿ ಬಿಡು" ಅವನೂ ಅಷ್ಟೇ ನಾಟಕೀಯವಾಗಿ ನುಡಿದ. ಆಚಿ ಪ್ರೀತಿಯಿಂದ ಅವನ ತಲೆಯ ಮೇಲೆ ಮೊಟಕಿದಳು.

"ನೀನು ಮಾವ ನಿನಗೆ ಹೇಗೆ ನನ್ನ ಮಗನ ಮೇಲೆ ಪ್ರೀತಿ ಬರುತ್ತೆ?"

"ಏಯ್ ಹಾಗೆನ್ನ ಬೇಡ. ಪ್ರೀತಿಯಿಂದ ಕೆನ್ನೆ ಸವರಿದುದನ್ನು ನೀನೇ ನೋಡಿದೀಯ"

"ನೀನು ಸಿಟ್ಟಿನಿಂದ ಕೆನ್ನೆ ಚಿವುಟಕ್ಕೆ ಬಂದಿದಿಯೇನೋ ಅಂತ ಅಂದುಕೊಡಿದ್ದೆ. ಅದೋ ಕುಂಭಕರ್ಣ. ಅದಕ್ಕೆ ಗೊತ್ತಾಗ್ತಾನೇ ಇರಲಿಲ್ಲ"

"ಕುಂಭಕರ್ಣ ಅಲ್ಲಮ್ಮ ನಿನ್ನ ಮಗ. ಮಾರೀಚ..... ರಾತ್ರಿ ರಾತ್ರಿಯೆಲ್ಲಾ ಅತ್ತು ಎಲ್ಲರನ್ನು ಎಬ್ಬಿಸುತ್ತಿದ್ದ. ಇನ್ನು ಮೇಲೆ ಹಾಯಾಗಿ ನಿದ್ದೆ ಮಾಡಬಹುದು"

"ಏಯ್ ಸೋಮಾರಿ ಸೋಮ.... ನೀನು ನಿದ್ದೆ ಮಾಡಲಿ ಅಂತ ಅಲ್ಲ. ನಾನು ಬೇಗ ಹೋಗ್ತಾ ಇರೋದು.... ಪರೀಕ್ಷೇಲಿ ಫಸ್ಟ್‌ಕ್ಲಾಸ್‌ನಲ್ಲಿ ಪಾಸಾಗಲಿ ಅಂತ. ಪರೀಕ್ಷೆ ಮುಗಿದ ಕೂಡಲೇ ಕಾಗದ ಬರೆಯಬೇಕು ತಿಳೀತಾ?"

"ಹೂಂ" ಎಂದು ತಲೆಯಾಡಿಸಿದ. ಅವಳು ಮದುವೆಯಾಗಿ ಗಂಡನ ಮನೆಗೆ ಹೊರಟು ನಿಂತಾಗ, ಎಲ್ಲರೂ ಅತ್ತಿದ್ದರು. ಇವನಿಗೂ ಅಳು ಬಂದಿತ್ತು. ಆಮೇಲೆ ಸ್ಕೂಲು, ಪಾಠ ಪ್ರವಚನಗಳಲ್ಲಿ ಬೇಗ ಬೇಗ ಎಲ್ಲವನ್ನು ಮರೆತಿದ್ದ. ಆದರೂ ಜಗಳವಾಡಲು ಆಚಿ ಇಲ್ಲವಲ್ಲ ಎಂದು ಬೇಸರವಾಗುತ್ತಿತ್ತು.

ಈಗ ಮತ್ತೊಮ್ಮೆ ಹಾಗೇ ಆಯಿತು. ಆಚಿ ಅತ್ತ ಹೊರಟು ಹೋದಕೂಡಲೇ ಮನೆ ಬಿಕೋ ಎನ್ನಲಾರಂಭಿಸಿತ್ತು. ಅಜ್ಜಿಯ ವಟ ವಟ ಮಾತಿಲ್ಲ. ಮಗುವಿನ ಅಳುವಿನ ಸದ್ದಿಲ್ಲ. ಮನೆಯಲ್ಲಿ ಯಾರೂ ಇಲ್ಲ. ತಂದೆ ಸಹ ಆಫೀಸಿಗೆ ಹೊರಟು ನಿಂತಿದ್ದರು.

"ಹುಶಾರು ಕಣೋ ಸೋಮು. ಮುಂಬಾಗಿಲು, ಹಿಂಬಾಗಿಲು ಎರಡನ್ನು ಹಾಕಿಕೊಂಡು, ಕೂತ್ಕೊಂಡು ಓದು. ಯಾರೂ ಇಲ್ಲ ಅಂತ ನಿದ್ದೆ ಮಾಡಿ ಬಿಟ್ಟೀಯ...."

"ಇಲ್ಲ ಅಪ್ಪಾ.... ಯಾಕೋ ಬೇಸರವಾಗ್ತಿದೆ. ನಾನೂ ನನ್ನ ಸ್ನೇಹಿತನ ಮನೆಗೆ

ಹೋಗ್ತೀನಿ. ಅಲ್ಲೇ ಓದಿಕೊಳ್ತೀನಿ" ಅವನೂ ತಂದೆಯೊಡನೆ ಹೊರಟ.

ರಸ್ತೆಯ ತಿರುವಿನಲ್ಲಿ ರಾಮಸ್ವಾಮಿ, ಮಗನ ಕೈಗೆ ಮನೆಯ ಬೀಗದ ಕೈಯನ್ನು ಕೊಟ್ಟ. "ಹುಶಾರು, ಕಳೆದು ಹೋದೀತು. ಕತ್ತಲೆ ಆಗೋದರೊಳಗೆ ಮನೆಗೆ ಬಂದು ಬಿಡು. ನಾನೂ ಬೇಗ ಬಂದು ಬಿಡ್ತೀನಿ."

ಬೀಗದ ಕೈಯನ್ನು ನಿಕ್ಕರಿನ ಜೇಬಿನೊಳಕ್ಕೆ ಇಳಿಬಿಟ್ಟು, ಮಂಜುನಾಥನ ಮನೆಯ ಕಡೆ ಓಡಿದ.

ಹೇಳಿದ್ದಂತೆ ರಾಮಸ್ವಾಮಿ ಸ್ವಲ್ಪ ಬೇಗನೇ ಮನೆಯನ್ನು ಬಂದು ಸೇರಿದ. ಮನೆಯಲ್ಲಿ ಉರಿಯುತ್ತಿದ್ದ ದೀಪಗಳನ್ನು ಕಂಡು ಸಮಾಧಾನವಾಗಿತ್ತು. ಓದುತ್ತಾ ಕುಳಿತಿದ್ದ ಮಗನನ್ನು ಕಂಡು ನಸುನಕ್ಕ.

"ಹೊಟ್ಟೆ ಹಸೀತಿದೆಯೇನೋ ಊಟಕ್ಕೆ ಬಡಿಸ್ಲಾ...."

"ಈಗಲೇ ಬೇಡ. ಈ ಅಧ್ಯಾಯ ಮುಗಿಸಿ ಬರ್ತೀನಿ."

ದೇವರ ಮುಂದೆ ದೀಪಗಳನ್ನು ಹಚ್ಚಿಟ್ಟು ಮತ್ತೆ ಹೊರಬಂದು ಅಂದಿನ ದಿನಪತ್ರಿಕೆಯನ್ನು ಕೈಲಿ ಹಿಡಿದು ಕೂತ. ಅಂದ ಹಾಗೇ ಮನೆಯಲ್ಲಿ ಎಷ್ಟು ನಿಶ್ಶಬ್ದ! ಶಾಂತಳ ಮಾತಂತೂ ಮುಗಿಯುತ್ತಲೇ ಇರಲಿಲ್ಲ. ಅವಳ ದನಿ ಕೇಳದೇ ಎಷ್ಟು ವರ್ಷಗಳಾಯ್ತೋ ಅಂತ ಅನ್ನಿಸುತ್ತಿದೆ. ಈ ನಡುವೆ ಅತ್ತೆ ಮನೆಯಲ್ಲಿರುತ್ತಿದ್ದುದರಿಂದ ತಮ್ಮಿಬ್ಬರ ಮಾತುಕತೆ ಎಷ್ಟೋ ಕಡಿಮೆಯಾಗಿತ್ತು. ಏನೋ ಒಂದು ತರಹ ವಿಚಿತ್ರ ಸ್ವಭಾವ ಅವಳದ್ದು. ಸರಿಯೋ ತಪ್ಪೋ ಅರ್ಥವೇ ಆಗುಲ್ಲ. ಮನೆಯಲ್ಲಿ ಅವಳ ಮಾತೇ ನಡೆಯುತ್ತೆ.... ಆದರೆ ಅವಳಿಲ್ಲದೇ ಇದ್ದಿದ್ದರೆ, ನನ್ನೊಬ್ಬನ ಕೈಲಿ ಇದನ್ನೆಲ್ಲ ಮಾಡಕ್ಕಂತೂ ಆಗುಲ್ಲ...

ಕೂತಲ್ಲೇ ತೂಕಡಿಸುತ್ತಿದ್ದ ಸೋಮ ಬೆಚ್ಚಿ ಬಿದ್ದು ಅಬ್ಬಾ.... ಎಂದ. ರಾಮಸ್ವಾಮಿ ಮಗನ ಕಡೆ ತಿರುಗಿದ. "ನಿದ್ದೆ ಬಂದರೆ ಸರಿಯಾಗಿ ಮಲಗೂವಂತೆ. ಏಳು ಮೊದಲು ಊಟ ಮಾಡು" ಇಬ್ಬರೂ ಒಟ್ಟಿಗೆ ಕೂತು ಊಟ ಉಂಡರು.

"ನಿದ್ದೆಗಣ್ಣಲ್ಲಿ ಸೋಮ ಏನು ಊಟ ಮಾಡಿದನೋ ಬಿಟ್ಟನೋ" ಎಂದುಕೊಂಡು ಉಳಿದ ಕೆಲಸಗಳನ್ನು ಮುಗಿಸಿ ಬರುವಷ್ಟರಲ್ಲಿ ಸೋಮ ನಿದ್ದೆಯ ಆಳದಲ್ಲಿ ಮುಳುಗಿ ಹೋಗಿದ್ದ.

ನಿದ್ದೆ ಬಾರದೇ ರಾತ್ರಿಯೆಲ್ಲಾ ಹೊರಳಾಡುತ್ತಿದ್ದ ರಾಮಸ್ವಾಮಿಗೆ, ಸುಜಾತಳ ನೆನಪಾಗಿತ್ತು. ಆನಂತರ, ಶಾಂತ ಒಂದು ದಿನವೂ ತನ್ನನ್ನು ಒಬ್ಬನನ್ನೇ ಬಿಟ್ಟು ಹೋಗಲಿಲ್ಲ. ಸುಮಂತನ ಹೆರಿಗೆಯ ಸಮಯದಲ್ಲಿ ಆಚಿ, ಮಗು.... ತನ್ನ ಜತೆಗಿದ್ದಳು. ಇವತ್ತು.... ಸುಮಂತ ನನ್ನ ಜತೆಗಿದಾನೆ. ಇವನೀಗ ಸ್ವಲ್ಪ ದೊಡ್ಡವನಾಗಿದಾನೆ. ಇವನಿಗೆ ಎಲ್ಲವನ್ನೂ ಹೇಳುವಂತಿದ್ದರೇ.... ಮಗನಿಗೆ ಏನನ್ನಿಸಬಹುದು?ಎಂದೂ ನೋಡಿರದ ಸುಜಾತಳ ಬಗ್ಗೆ ಯಾವ ಕುತೂಹಲ ತಾನೇ ಇರುತ್ತೆ?

ಬೆಳಗಾಯಿತು. ಹಾಲಿನವನು ಒಂದು ಬೆಲ್ ಮಾಡಿದ. ರಾಮಸ್ವಾಮಿ ಎದ್ದು ಹಾಲನ್ನು ಹಾಕಿಸಿಕೊಂಡು ಕಾಯಿಸಿ, ಬಿಸಿ ಬಿಸಿ ಕಾಫಿ ಮಾಡಿ ಮಗನನ್ನು ಎಬ್ಬಿಸಿದ.

"ಏಳಯ್ಯಾ.... ಎದ್ದು ಮುಖ ತೊಳೆದು, ಕಾಫಿ ಕುಡಿದು, ಓದ್ಕೋ.... ಇನ್ನೆರಡು ತಿಂಗಳು ಸ್ವಲ್ಪ ಪರಿಶ್ರಮ ಪಡು. ಆಮೇಲೆ ರಜದಲ್ಲಿ ಮಲಗಿರೋದೇ...."

"ಇನ್ನು ಐದು ನಿಮಿಷ ಅಪ್ಪಾ... ಎದ್ದು ಬಿಡ್ತೀನಿ" ಎನ್ನುತ್ತಾ ಮಗ್ಗುಲು ಬದಲಾಯಿಸಿದ. ತಿಂಡಿ ಮಾಡಿಟ್ಟು ಹೊರಬಂದರೂ ಮಗ ಎದ್ದಿರಲಿಲ್ಲ. ನಯವಾಗಿ

ಗದರಿಸಿದ. ಐದು ನಿಮಿಷ ಅಂತಂದೆ. ಇಪ್ಪತ್ತೈದು ನಿಮಿಷ ಆಗಿದೆ. ನಾನು ಅತ್ತ ಹೋದ ಕೂಡ್ಲೆ ಮತ್ತೆ ಹೇಗೂ ಮಲಗ್ತೀಯ.... ಹೇಳೋರು ಕೇಳೋರು ಯಾರೂ ಇಲ್ಲ. ನಿನ್ನದೇ ರಾಜ್ಯ" ಮೈ ಮುರಿಯುತ್ತಾ ಸೋಮ ಎದ್ದ.

"ಅಪ್ಪಾ..... ನಾನು ನಿಮ್ಮ ಜೊತೆ ಆಫೀಸಿಗೆ ಬರ್ತೀನಿ. ಮನೇಲಿ ಬೇಜಾರು"

"ಥೂ ಓದ್ಕೋಳೋದ್ನ ಬಿಟ್ಟು ಆಫೀಸಿಗೆ ಬಂದು ಏನ್ಮಾಡ್ತೀಯ? ನಿನ್ನ ಸ್ನೇಹಿತನ್ನ ನಮ್ಮ ಮನೆಗೇ ಕರೆದಕೊಂಡು ಬಾ. ಇಬ್ಬರೂ ಇಲ್ಲೇ ಊಟ ಮಾಡಿ. ಅಡಿಗೆ ಮಾಡಿಟ್ಟಿದೀನಿ"

"ಅವರಮ್ಮ ಏನಂತಾರೋ?"

"ಬೇಕಾದ್ರೆ ಅವರಮ್ಮಂಗೆ ನಾನು ಹೇಳ್ತೀನಿ"

"ಏನೂ ಬೇಡ ನಾನೇ ಹೇಳ್ತೀನಿ" ಎಂದ.

"ಒಂದು ದಿನದ ಮಟ್ಟಿಗೆ ಬಂದು ಮಕ್ಕಳಿಗೆ ಆಶೀರ್ವಾದ ಮಾಡಬೇಕು ಎಂದು ಬೀಗರು ಕೇಳಿಕೊಂಡಿದ್ದರು. ಮಗನೂ ಬರುವುದಾದರೆ ಹೋಗಿ ಬರುವುದೆಂದುಕೊಂಡು ಕೇಳಿದ.

"ಏನಯ್ಯಾ ಹೋಗಿ ಬರೋಣ್ವಾ? ಒಂದೇ ದಿನದ ಕಾರ್ಯಕ್ರಮ"

"ನೀವು ಹೋಗಿ ಬನ್ನಿ ಅಪ್ಪಾ... ಪರೀಕ್ಷೆ ಮುಂದಿಟ್ಟುಕೊಂಡು ನಾನು ಬರುಕ್ಕಾಗುಲ್ಲ"

"ನಿನ್ನನ್ನು ಒಬ್ಬನನ್ನೇ ಬಿಟ್ಟು ಬೇರೆ ಊರಿಗೆ ಹೋಗುವುದು ಚೆನ್ನಲ್ಲ. ಬೀಗರಿಗೆ ನಮ್ಮ ಪರಿಸ್ಥಿತಿ ಅರ್ಥವಾಗದ್ದೇನಲ್ಲ" ಆದರೂ ಹದಿನೈದು ದಿನಗಳನ್ನು ಕಳೆಯುವುದು ಕಷ್ಟವೆನಿಸಿತ್ತು. ರಜದದಿನ ಮಗನನ್ನು ಕರೆದುಕೊಂಡು ಹೋಟೆಲ್ಲಿಗೆ ಹೊರಟ.

"ದಿನಾ ಮನೆಯ ತಿಂಡಿ ತಿಂದು ತಿಂದೂ ಬೇಜಾರಾಗಿರುತ್ತೆ. ಮಸಾಲ್ ದೋಸೆ ಕೊಡಿಸ್ತೀನಿ ನಡೀ... ಬೇಕಾದ್ರೆ ನಿನ್ನ ಸ್ನೇಹಿತನನ್ನು ಕರೆದುಕೊಂಡು ಬಾ"

ಸುಮಂತ ಕರೆದ ಕೂಡಲೇ ಮಂಜುನಾಥ ಅವರೊಡನೆ ಹೊರಟಿದ್ದ.

ನಂತರ ಹತ್ತಿರವಿದ್ದ ಪಾರ್ಕಿನಲ್ಲಿ ಕೆಲವು ಸಮಯ ಕೂತಿದ್ದರು. ಪಾರ್ಕಿಗೆ ಸಮೀಪದಲ್ಲಿ ಪಂಡಿತರ ಮನೆ ಇದ್ದುದು. ಒಮ್ಮೆ ನೋಡಿ ಬರುವ ಮನಸ್ಸಾದರೂ ತಡೆದುಕೊಂಡ. ಈಗ ಅಲ್ಲಿ ಅವರ್‍ಯಾರೂ ಇಲ್ಲ. ಹೋಗಿ ಮಾಡುವುದೇನು? ಎಂದುಕೊಂಡು ಸುಮ್ಮನಾದ.

ಮತ್ತೆ ಒಂದು ವಾರ ಕಳೆಯುತ್ತಿದ್ದಂತೆಯೇ ಶಾಂತ ತನ್ನ ಅತ್ತಿಗೆಯೊಡನೆ ವಾಪಸ್ಸಾಗಿದ್ದಳು. ತಾಯಿ ತಂದೆ ಹಾಗೇ ತಮ್ಮೂರಿಗೆ ಹೊರಟು ಹೋಗಿದ್ದರು.

"ಏನು ಭಾವ..... ಶಾಂತ ಇಲ್ಲದೇ ಹೊತ್ತು ಹೋಗುತ್ತಿರಲಿಲ್ಲ ಅಂತ ಕಾಣಿಸುತ್ತೆ" ವನಜ ಚುಡಾಯಿಸಿದಳು.

"ಪುರುಸೊತ್ತೇ ಇರಲಿಲ್ಲ. ಅವಳನ್ನು ನೆನೆಸಿಕೊಳ್ಳೋಕೆ... ಆಫೀಸು, ಮನೆ ಕೆಲಸ ಅದು ಇದು........"

"ಅದೂ ಇದೂ ಯಾವುದು?" ಶಾಂತ ಕಣ್ಣರಳಿಸಿದಳು. ರಾಮಸ್ವಾಮಿ ಕೆಣಕುವಂತೆ ನಕ್ಕ.

"ಸುಮಂತ ನಾನು ಮನೆಯಲ್ಲಿಲ್ಲದಾಗ, ಯಾರಾದ್ರೂ ಬಂದಿದ್ದರೇನೋ?" ಗಂಡನಿಗೆ ತಿಳಿಯದಂತೆ ಕೇಳಿದ್ದಳು.

"ಇಲ್ಲಮ್ಮ ಅಪ್ಪನ್ನ ಕೇಳು ಗೊತ್ತಾಗುತ್ತೆ"

"ಅವರನ್ನೇನು ಕೇಳೋದು? ದಿನಾ ಆಫೀಸಿಗೆ ಹೋಗುತ್ತಿದ್ದರೋ ಅಥವಾ ರಜ ಹಾಕಿದ್ದರೋ....?"

"ರಜ ಹಾಕಿ ಮನೇಲಿ ಯಾಕೆ ಇರ್ತಾರೆ? ನೀನೂ ಇರಲಿಲ್ಲ ಜಗಳವಾಡೋಕೆ?"

"ನೀನೂ ಬರ್ತಾ ಬರ್ತಾ ಅಪ್ಪನ ಕಡೆಗೇ ಮಾತನಾಡ್ತೀಯ..... ಇರಲಿ"

"ಹೋಗಮ್ಮಾ..... ನೀನು ಮನೆಯಲ್ಲಿ ಇಲ್ಲದಿದ್ದೋಳು. ಈಗ ಬಂದು ಸುಮ್ಮನೇ ಪ್ರಶ್ನೆ ಕೇಳಿದರೆ? ನಿಂಗೇನು ಬೇಕೋ ಅಪ್ಪನ್ನ ಕೇಳು"

"ಏನೇ ಶಾಂತ? ಏನೇ ತನಿಖೆ ನಿನ್ನದು?" ಹಿಂದೆಯೇ ಬಂದು ನಿಂತಿದ್ದ ರಾಮಸ್ವಾಮಿ ಕೇಳಿದಾಗ ಶಾಂತ ಪೆಚ್ಚಾದಳು. ಮಗನಿಗೆ ಸುಮ್ಮನಿರು ಎನ್ನುವಂತೆ ಸಂಜ್ಞೆ ಮಾಡಿ ಒಳಗೆ ಹೋದಳು.

ಮನೆಯ ರಂಪ ತೆಗೆದು, ಒಂದು ಸುವ್ಯವಸ್ಥೆಗೆ ತರುವಲ್ಲಿ ವನಜ ಶಾಂತಳಿಗೆ ಸಹಾಯ ಮಾಡಿದಳು. ಒಂದೆರಡು ದಿನಗಳ ನಂತರ ತನ್ನ ಊರಿಗೆ ಹೊರಟು ಹೋದಳು.

ಪರೀಕ್ಷೆ ಸಮೀಪಿಸಿತ್ತು. ತಕ್ಕಷ್ಟು ಮಟ್ಟಿಗೆ ಪರಿಶ್ರಮ ವಹಿಸಿ ಓದಿದ್ದ ಸುಮಂತ ಚೆನ್ನಾಗಿ ಉತ್ತರಗಳನ್ನು ಬರೆದಿದ್ದ. ಫಲಿತಾಂಶಕ್ಕೆ ಕಾಯುತ್ತಿದ್ದ.

ಸುಮಂತ ಎರಡನೇ ವರ್ಷದ ಪಿಯುಸಿಯಲ್ಲಿ ಓದುತ್ತಿದ್ದಾಗ, ಆಚಿ ಎರಡನೇ ಮಗುವಿನ ಬಾಣಂತನಕ್ಕೆ ಸಿದ್ಧಳಾಗಿದ್ದಳು. ಮಗಳನ್ನು ಕರೆತರಲು ಶಾಂತ ಹೋಗಿದ್ದಳು. ಆಚಿ ಬರುವುದಿಲ್ಲವೆಂದು ಬಿಟ್ಟಳು.

"ನನ್ನಿಂದ ಸುಮಂತನಿಗೆ ತೊಂದರೆ ಆಗುತ್ತೆ. ಇವನೋ ಮಹಾ ತುಂಟ. ನೀನೇ ನಾಲ್ಕು ದಿನ ಇಲ್ಲಿ ಬಂದಿರು. ಅತ್ತೆ ನೋಡಿಕೊಳ್ತಾರೆ" ಆಕೆಯೂ ಅವಳ ಮಾತನ್ನು ಅನುಮೋದಿಸಿದರು.

"ನೀವು ಒಂದು ಬಾಣಂತನ ಮಾಡಿದ್ದಾಗಿದೆ. ನಮಗೂ ಒಂದು ಅವಕಾಶ ಇರಲಿ. ನಾವು ಪದೇ ಪದೇ ನಿಮಗೆ ತೊಂದರೆ ಕೊಡುವುದು ಸರಿಯಲ್ಲ"

"ಇದರಲ್ಲಿ ತೊಂದರೆ ಏನು ಬಂತು? ನಮ್ಮ ಕರ್ತವ್ಯ"

"ಈ ಕಾಲದಲ್ಲಿ ಹಿಂದಿನ ಕಾಲದ ಹಾಗೆ, ಹತ್ತಾರು ಮಕ್ಕಳು ಹುಟ್ಟುಲ್ಲ. ಎರಡೋ ಮೂರೋ ಅಷ್ಟೇ. ಈ ಬಾರಿ ನಮ್ಮ ಮನೇಲಿ ಬಾಣಂತನ ನಡೀಲಿ. ನನ್ನ ಸಹಾಯಕ್ಕೆ ನೀವು ಬನ್ನಿ. ನಿಮಗೂ ಒಂದು ಬದಲಾವಣೆ ಇರುತ್ತೆ" ಶಾಂತ ಅವರ ಮಾತಿಗೆ ಒಪ್ಪಬೇಕಾಯ್ತು.

ಸುಮಂತನ ಪರೀಕ್ಷೆಗೆ ಕೇವಲ ಎರಡು ದಿನಗಳು ಬಾಕಿ ಇವೆ ಎನ್ನುವಾಗ, ಆಚಿ ಹೆಣ್ಣು ಮಗುವನ್ನು ಹಡೆದ ಸುದ್ದಿ ತಿಳಿಯಿತು. ಒಂದೇ ಒಂದು ದಿನದ ಮಟ್ಟಿಗೆ, ಶಾಂತ, ರಾಮಸ್ವಾಮಿ ಮೊಮ್ಮಗುವನ್ನು ನೋಡಿಕೊಂಡು ವಾಪಸ್ಸಾಗಿದ್ದರು.

"ಪಾಪ...... ಆಕೆ ಏನಂದುಕೊಂಡಾರೋ ಏನೋ? ಪರೀಕ್ಷೆ ಕಳೆದ ಮೇಲೆ ಈ ಮಗು ಹುಟ್ಟಬಾರದಾಗಿತ್ತೇ?"

"ತಾಯಿಯ ಸಹಾಯಕ್ಕೆ ಅವರ ಮಗಳು ಬರುತ್ತಾಳೆಂದು ಬೀಗರು ಹೇಳಿದರು....."

"ಆದರೆ ಬಾಣಂತನ ಹೇಗೆ ನಡೆಯುತ್ತೋ ಏನೋ? ನಾನು ಮಾಡಿದ ಹಾಗೆ ಆಗುತ್ಯೆ?" ರಾಮಸ್ವಾಮಿ ತನ್ನಲ್ಲೇ ನಕ್ಕ.

ಶಾಂತಾ.... ನಿನ್ನ ಕೋಳಿ ಕೂಗದೇ ಬೆಳಗಾಗುವುದಿಲ್ಲ ಅನ್ನೋ ಮಾತನ್ನೇ ಆಡಬೇಡ ಎಂದು ಹೇಳಬೇಕೆಂದು ಕೊಂಡವನು ಸುಮ್ಮನಾದ.

"ನಮ್ಮ ಸೋಮನ ಪರೀಕ್ಷೆ ಅತ್ಯಂತ ಮುಖ್ಯ ಶಾಂತಾ.... ಈ ಪರೀಕ್ಷೆ ಅವನ

ಜೀವನಕ್ಕೆ ಒಂದು ಮಾರ್ಗವನ್ನು ತೋರುವ ಪರೀಕ್ಷೆ. ಅವನ ಪರೀಕ್ಷೆ ಮುಗಿಯುತ್ತಿದ್ದ ಹಾಗೇ ಆಚಿಯನ್ನು ಮಗುವನ್ನು ನಮ್ಮ ಮನೆಗೆ ಕರೆದುಕೊಂಡು ಬರೋಣ" ಈ ಮಾತು ಸರಿ ಎನಿಸಿದರೂ ಶಾಂತ ಏನನ್ನೂ ಆಡಲಿಲ್ಲ. ಮುಂದಿನ ಹತ್ತು ದಿನಗಳಲ್ಲಿ ಸುಮಂತನ ಪರೀಕ್ಷೆ ಮುಗಿದಿತ್ತು. ಫಸ್ಟ್ ಕ್ಲಾಸ್‌ನಲ್ಲಿ ಪಾಸಾಗುವುದರಲ್ಲಿ ಮೋಸವಿರಲಿಲ್ಲ.

ಫಲಿತಾಂಶ ಬಂದ ದಿನ, ತಾನು ಬಿ.ಕಾಂ. ಸೇರಲು ನಿರ್ಧರಿಸಿರುವುದಾಗಿ ಅವನು ಹೇಳಿದಾಗ, ಶಾಂತಳಿಗೆ ಇಷ್ಟವಾಗಲಿಲ್ಲ.

"ಯಾಕೋ ಚೆನ್ನಾಗಿ ಮಾರ್ಕ್ಸ್‌ಗಳು ಬಂದಿಲ್ವಾ? ನಾನು ಎಷ್ಟು ಹೇಳಿದೆ ನಿದ್ದೆ ಮಾಡೋದನ್ನು ಬಿಟ್ಟು ಚೆನ್ನಾಗಿ ಓದು ಅಂತ"

"ಚೆನ್ನಾಗಿಯೇ ಮಾರ್ಕ್ಸ್‌ಗಳು ಬಂದಿವೆ. ಬಿ.ಕಾಂ. ಮಾಡಿದರೆ ಸುಲಭವಾಗಿ ಕೆಲಸ ಸಿಗುತ್ತೆ. ಬಿ.ಎಸ್ಸಿ. ಮಾಡಿದರೆ, ಎಂ.ಎಸ್ಸಿ. ಮಾಡಬೇಕಾಗುತ್ತೆ. ಇನ್ನು ಐದು ವರ್ಷ ಓದಬೇಕಾಗುತ್ತೆ"

"ಅವನಿಗೆ ಯಾವುದು ಇಷ್ಟವೋ ಅದನ್ನೇ ಓದಲಿ ಬಿಡು ಶಾಂತ. ಬಿ.ಕಾಂ. ಮಾಡಿದವರಿಗೆ ಬ್ಯಾಂಕಿನಲ್ಲಿ ಬೇಗ ಕೆಲಸ ಸಿಗುತ್ತೆ"

"ಇನ್ನು ಚಿಕ್ಕೋನು.... ಈಗಲಿಂದ ಕೆಲಸ ಕಾರ್ಯ ಅಂತ, ಜವಾಬ್ದಾರಿ ಹೆಚ್ಚುತ್ತೆ ಅಷ್ಟೆ...."

ಮಗ ಇಂಜನಿಯರಿಂಗ್ ಓದಲಿ ಎಂಬ ಆಸೆ ಇದ್ದರೂ ಸುಮ್ಮನಾಗಿದ್ದಳು. ಎಷ್ಟು ಖರ್ಚಾಗುತತ್ತೋ, ಸುಲಭವಾಗಿ ಸೀಟು ನಮ್ಮಂತಹವರಿಗೆ ಸಿಗುವುದಿಲ್ಲ. ಹಣಕ್ಕೆ ಏನು ಮಾಡುವುದು ಅಂತಂದುಕೊಂಡಾಗ ಬೇಸರವಾಗಿತ್ತು.

"ನಾನು ಕೆಲಸಕ್ಕೆ ಸೇರಿಕೊಂಡಾಗ, ನನಗೆ ಕೇವಲ ಹತ್ತೊಂಬತ್ತು ವರ್ಷವಾಗಿತ್ತು"

"ನಿಮ್ಮ ಮಾತು ಬೇರೆ. ನಿಮ್ಮ ಮಗನ ಮಾತು ಬೇರೆ"

"ಹೌದು..... ನನಗೆ ನನ್ನ ತಾಯಿಯ ಹೊರತು ಬೇರೆ ಯಾರಿರಲಿಲ್ಲ" ಎಂದು ಹೇಳಬೇಕೆಂದು ಕೊಂಡವನು, ಹಳೆಯ ಮಾತುಗಳೇಕೆ ಎಂದುಕೊಂಡ. ಈ ನಡುವೆ ಹಾಗೇ...... ಎಷ್ಟೋ ವಿಷಯಗಳನ್ನು ಆಡಲು ಹೊರಟವನು, ಆಡದೇ ಸುಮ್ಮನಾಗಿ ಬಿಡುತ್ತಿದ್ದ.

ಆದರೆ ಸುಮಂತ ತನ್ನ ಇಷ್ಟದಂತೆ ಬಿ.ಕಾಂ.ಗೇ ಸೇರಿಕೊಂಡಿದ್ದ. ಹೊಸ ಪರಿಸರ, ಹೊಸ ಸ್ನೇಹಿತರು, ಹೊಂದಿಕೊಳ್ಳಲು ಸ್ವಲ್ಪ ಸಮಯ ಬೇಕಾಗಿತ್ತು.

ಆಚಿ ಬಂದಿರಲಿಲ್ಲವಾದ್ದರಿಂದ, ಇವರುಗಳೇ ಹೋಗಿ ಚಿಕ್ಕ ಮಗುವನ್ನು ನೋಡಿಕೊಂಡು ಬಂದಿದ್ದರು. ಮಗಳಿಗೆ ಸುನೀತಾ ಎಂದು ಹೆಸರನ್ನಿಟ್ಟಿದ್ದರು.

"ಸುಧೀರ, ಸುನೀತಾ... ಹೆಸರುಗಳು ಚೆನ್ನಾಗಿವೆ" ಸುಮಂತ ಹೇಳಿದ್ದ. "ಅಡ್ಡ ಹೆಸರು ಏನೂ ಇಲ್ವಾ?" ನಗುತ್ತಾ ಪ್ರಶ್ನಿಸಿದ.

"ಅವನನ್ನು ಎಲ್ಲರೂ ಏನೇ ಸುಧಾ..... ಎಂದೇ ಮಾತನಾಡಿಸ್ತಾರೆ. ನೋಡೋಣ ಇವಳನ್ನು ಏನೋ...... ಬಾರೋ....... ಅಂತ ಕರಿಯಬಹುದು."

"ತಮಾಷೆಯಾಗಿರುತ್ತಲ್ಲವಾ......?"

"ನಮ್ಮ ಹೆಸರುಗಳೂ ಒಂದು ತರಹ ತಮಾಷೆ, ಮೊದ ಮೊದಲು ಆಚಿ ಅಂತ ಕರದ್ರೆ ಎಷ್ಟು ರೇಗುತ್ತಿತ್ತು ಗೊತ್ತಾ? ಈಗ ಅಭ್ಯಾಸವಾಗಿದೆ... ನೀನು ನಿನ್ನ ಮದುವೆಯ ಹೊತ್ತಿಗೆ, ಸೋಮಾರಿ ಸೋಮನಾಗಿಯೇ ಇರ್ತೀಯೋ? ಸುಮಂತನಾಗ್ತಿಯೋ........

"ಸೋಮ ಅನ್ನೋ ಹೆಸರು, ಆಚಿ ಎನ್ನೋ ಹೆಸರಿಗಿಂತ ಚೆನ್ನಾಗಿದೆ. ಇರಲಿ ಬಿಡು....." ಮುಗುಳ್ನಕ್ಕು ಮಗುವಿನ ಕೆನ್ನೆ ಸವರಿದ.

"ಯಾರ ಹಾಗೆ ಇದಾಳೋ? ನನ್ನ ಹಾಗೋ ಭಾವನ ಹಾಗೋ?"

"ಏನೋ ಗೊತ್ತಾಗುಲ್ಲಮ್ಮ ನಿಮ್ಮ ಅತ್ತೆಯ ಹಾಗಂತೂ ಇಲ್ಲ"

"ಮೆಲ್ಲಗೋ.... ಕೇಳಿಸಿದರೆ ಬೈಕೋತಾರೆ ಅಷ್ಟೆ..... ಬಂದು ಬಂದೋರಿಗೆಲ್ಲ... ನನ್ನ ಹಾಗೇ ಇದಾಳೆ ನನ್ನ ಮೊಮ್ಮಗಳು ಅಂತ ಹೆಮ್ಮೆಯಿಂದ ಹೇಳಿಕೊಳ್ತಾರೆ" ಇಬ್ಬರೂ ಕಿಸಿ ಕಿಸಿ ನಕ್ಕರು.

"ಆಚಿ, ಹುಶಾರಾಗಿದೀಯ? ಏನಂತಾಳೆ ಮಗಳು?" ರಾಮಸ್ವಾಮಿ ವಿಚಾರಿಸಿದ.

"ನೀವೇ ಹೇಳಿ ಅಪ್ಪಾ ಹೇಗಿದೀನಿ ಅಂತ...."

"ಖುಷಿಯಾಗಿದೀರಿ.... ಮದುವೇನ ಬೇಡಾಂತ ಹೇಳ್ತಿದ್ಳೋಳು ನೀನು. ಈಗ ಎರಡು ಮಕ್ಕಳ ತಾಯಿ......" ಶಾಂತ ಮಧ್ಯೆ ಹೇಳಿದ್ದಳು.

"ಅದೇ ಬೇಜಾರು. ಊಟ ನಿದ್ದೆ ಯಾವುದಕ್ಕೂ ಬಿಡುವಿಲ್ಲ. ಏನಾದರೊಂದು ರಗಳೆ ಇದ್ದೇ ಇರುತ್ತೆ" ತಂದೆ ನಕ್ಕಾಗ, ಅವಳು ಕೆಟ್ಟ ಮುಖ ಮಾಡಿದಳು.

ಎರಡು ದಿನಗಳು ಅಲ್ಲಿದ್ದು ಅಲ್ಲಿಂದ ಹೊರಟರು. ಎರಡು ದಿನಗಳೊಳಗೆ, ಸುಧಾ ಸೋಮ ಸ್ನೇಹಿತರಾಗಿದ್ದರು. ಮಾಮಾ.... ಮಾಮಾ.... ಅಂತ ಮಾವನನ್ನು ಬಿಡಲೇ ಒಲ್ಲ.

"ಇವನನ್ನು ಕರೆದುಕೊಂಡು ಹೋಗೋಣ್ವೇನೆ?"

"ಬೇಡಮ್ಮ ಇವರು ಖಂಡಿತಾ ಕಳಿಸೋಲ್ಲ" ಅವರುಗಳು ಹೊರಟಾಗ, ಅವರುಗಳ ಜೊತೆ ತಾನೂ ಬರುವುದಾಗಿ ಹಠ ಮಾಡಿದ, ಮಗನನ್ನು ಶೇಷಾದ್ರಿ ಎತ್ತಿಕೊಂಡು ಸಮಾಧಾನ ಮಾಡಿದ್ದ. ಅಜ್ಜಿ... ತಾತಂಗೆ, ಮಾಮಂಗೆ ಟಾ ಟಾ ಮಾಡು ಎಂದಿದ್ದ. ಪುಟ್ಟ ಕೈ ಟಾ ಟಾ ಮಾಡಿತ್ತು.

ಊರಿಗೆ ವಾಪಸ್ಸಾದ ಮೇಲೂ ಒಂದೆರಡು ದಿನಗಳು ಅಲ್ಲಿಯ ಮಾತೇ. ಸುಧಾ ಹಾಗೆ ಹೀಗೆ ಮಾತನಾಡುತ್ತಿತ್ತು.... ಅಂತ ಆ ಮಾತುಗಳನ್ನೇ ಮೆಲಕು ಹಾಕುತ್ತಿದ್ದರು.

ಕಾಲೇಜು ಪ್ರಾರಂಭವಾಗಿತ್ತು. ಮಂಜುನಾಥ ಬಿ.ಎಸ್ಸಿ.ಗೆ ಸೇರಿಕೊಂಡಿದ್ದ. ಆಗ ಈಗ ಕಾಲೇಜಿನಲ್ಲಿ ಭೇಟಿಯಾಗುತ್ತಿದ್ದರು. ಮೂರು ವರ್ಷಗಳು ಕಳೆದದ್ದೇ ಗೊತ್ತಾಗಲಿಲ್ಲ. ಸುಮಂತ, ಬಿ.ಕಾಂ. ಡಿಗ್ರಿಯನ್ನು ಗಳಿಸುವ ಹೊತ್ತಿಗೆ, ಮನೆಯಲ್ಲಿ ಕೆಲವಾರು ಬದಲಾವಣೆಗಳಾಗಿದ್ದವು. ಆದರೆ ಬದಲಾಗದೇ ಇದ್ದುದು ಸೋಮನ ನಿದ್ದೆ, ಈಗಲೂ ಅವನು ಸೋಮಾರಿ ಸೋಮನೇ.

* * *

## - - 18 - -

ಹೊಸ ಬ್ರ್ಯಾಂಚ್‌ಗೆ ಹೋಗಲಾರಂಭಿಸಿದ ಮೇಲೆ, ಸೋಮನಿಗೆ ಯಾಕೋ ಏನೋ ಆ ಪರಿಸರ ಬೇಸರವಾಗತೊಡಗಿತ್ತು. ಬೇರೆ ಬೇರೆ ಕಂಪೆನಿಗಳಿಗೆ ಅರ್ಜಿ ಸಲ್ಲಿಸಿದ್ದ. ಇಂಟರ್‌ವ್ಯೂ ಸರಿಯಾಗಿದ್ದರೆ, ಸಂಬಳ ಸಾರಿಗೆ ಸರಿ ಇರುತ್ತಿರಲಿಲ್ಲ. ಸಂಬಳ ಹೆಚ್ಚಿಗೆ ಕೊಡುವ ಕಂಪೆನಿಯವರು, ಹೆಚ್ಚು ಹೆಚ್ಚು ಕೆಲಸದ ಅಪೇಕ್ಷೆ ಹೇಳುತ್ತಿದ್ದರು.

"ಹೆಚ್ಚು ಸಂಬಳದ ಆಸೆಗೆ ಹೋದರೆ, ಅಷ್ಟೇ ಕೆಲಸ ಮಾಡಬೇಕಾಗುತ್ತೆ. ನಿನ್ನ ಕೈಲಿ ಆಗುತ್ತೇನೋ.....?"

"ಏನಪ್ಪಾ ನೀವೇ ಹೀಗೆ ಕೇಳ್ತೀರಲ್ಲ?"

"ಹಾಗಲ್ಲಪ್ಪಾ... ನಿನ್ನ ಹತ್ತಿರ ಗಾಡಿ ಇಲ್ಲ. ತಿರುಗಾಟಕ್ಕೆ ಹೆಚ್ಚು ಸಮಯ ಬೇಕಾಗುತ್ತಲ್ಲ"

"ಕಂಪೆನಿಯವರು ಅಡ್ವಾನ್ಸ್ ಸಾಲ ಕೊಟ್ಟರೆ, ಒಂದು ಬೈಕ್ ತಗೋತೀನಿ..... ನಿಧಾನವಾಗಿ ಸಾಲ ತೀರುತ್ತೆ....."

"ಸಾಲಾನಾ?" ಅಲ್ಲೇ ಕೂತಿದ್ದ ಶಾಂತ ಕೇಳಿದಳು.

"ಹೂಂನಮ್ಮ ಈಗ ಎಲ್ಲಾ ಕಂಪೆನಿಗಳಲ್ಲೂ ಗಾಡಿಗೆ, ಸೈಟಿಗೆ, ಮನೆಗೆ, ಮದುವೆಗೆ, ಅಂತ ಸಾಲ ಕೊಡ್ತಾರಂತೆ. ನನಗೂ ಅಂತಹ ಒಂದು ಕಂಪೆನೀಲಿ ಕೆಲಸ ಸಿಗಲಿ. ಗಾಡಿಗೆ ಲೋನ್ ತಗೋತೀನಿ"

"ಅವನ ಇಷ್ಟದಂತೆ ಒಂದು ದೊಡ್ಡ ಕಂಪೆನಿಯಲ್ಲಿ ಅಕೌಂಟ್ಸ್ ಆಫೀಸರನ ಕೆಲಸ ಸಿಕ್ಕಿತ್ತು. ಕೆಲಸದ ಆರ್ಡರ್ ಬಂದ ದಿನ ಶಾಂತ ಹಿಗ್ಗಿ ಹೆಗ್ಗೋಡಾಗಿದ್ದಳು. "ನನ್ನ ಮಗ ಆಫೀಸರ್......." ಹತ್ತಾರು ಬಾರಿ ಹೇಳಿಕೊಂಡಳು.

"ನಾನು ಗುಮಾಸ್ತನಾಗಿಯೇ ರಿಟೈರ್ ಆಗ್ತೀನಿ.... ನನ್ನ ಮಗ ದೊಡ್ಡ ಆಫೀಸರ್ ಆಗ್ತಾ ಇದಾನೆ. ಎಷ್ಟು ವ್ಯತ್ಯಾಸ ಅಲ್ವಾ?" ರಾಮಸ್ವಾಮಿ ನುಡಿದಾಗ, ಶಾಂತ ಸುಮ್ಮನಿದ್ದಳು.

"ಆಫೀಸರ್‌ನ ಅಮ್ಮ ಅನ್ನೋ ಕೋಡು ನಿನಗಾಗಲೇ ಮೂಡಿ ಬಿಟ್ಟಿದೆ. ನಿನ್ನ ಹಿಡಿಯೋಕೇ ಯಾರಿಲ್ಲ..... ಅಲ್ವಾ?"

"ಹಾಗೇನಿಲ್ಲ ನಮ್ಮ ಮಕ್ಕಳು, ನಮ್ಮ ಕಣ್ಣ ಮುಂದೆ ಅಭಿವೃದ್ಧಿ ಹೊಂದಿದರೆ, ನಮಗೆ ಅದಕ್ಕಿಂತ ಹೆಚ್ಚಿನ ಖುಷಿ ಇನ್ನೇನು ಬೇಕು?"

"ಹೌದು. ನಾಳೇನೇ ಆಚೆಗೆ ಕಾಗದ ಬರೆಯುವಂತೆ ಹೇಳು......" ರಾಮಸ್ವಾಮಿ ಸಹ ಭಾವುಕನಾಗಿದ್ದ. ಶಾಂತ ತಾನೇ ಹೇಳಿದಳು,

"ಅತ್ತಿಗೆಗೆ ನಾನೇ ಕಾಗದ ಬರೆದು ಹಾಕ್ತೀನಿ. ಅತ್ತಿಗೆಗೆ ಈ ಮಕ್ಕಳು ಅಂದ್ರೆ ಬಹಳ ಅಚ್ಚು ಮೆಚ್ಚು" ಸುಜಾತನಿಗೆ ಹೇಳುವಂತಿದ್ದರೆ ಅಂತಂದುಕೊಂಡ.

ರಾಮಸ್ವಾಮಿ ಮಗ ಆಫೀಸರ್ ಆಗಿ ಕೆಲಸಕ್ಕೆ ಹೋಗಲಾರಂಭಿಸಿದ ಕೆಲವಾರು ತಿಂಗಳುಗಳ ನಂತರ ರಾಮಸ್ವಾಮಿಗೆ ರಿಟೈರ್ ಆಯಿತು. ಕೈಗೆ ಬಂದ ಹಣಕ್ಕೆ ಅಲ್ಪ ಸ್ವಲ್ಪ ಉಳಿತಾಯದ ಹಣವನ್ನು ಸೇರಿಸಿ ಒಂದು ಚಿಕ್ಕ ಮನೆಯನ್ನು ಕೊಂಡುಕೊಳ್ಳುವ ಆಸೆ ಅವನಿಗೆ. ಮಗನೊಡನೆ ಅದೇ ವಿಷಯವನ್ನು ಪ್ರಸ್ತಾಪ ಮಾಡಿದ.

"ನಿನ್ನ ಮಲೆ ಹೊರೆ ಬೀಳುತ್ತೆ ಅಂತ ಭಯ ಪಟ್ಟುಕೋಬೇಡ. ಪೆನ್ಶನ್ ಬರುತ್ತೆ. ಹೇಗೋ ಆಗುತ್ತೆ. ಒಂದು ಮನೆಯನ್ನು ಕೊಂಡುಕೊಳ್ಳೋಣ ಅಂತ. ಎಂಟು ವರ್ಷ ಕಂತಿನಲ್ಲಿ ಹಣ ಕಟ್ಟಬೇಕಾಗುತ್ತೆ. ಏನಂತೀಯ?"

"ಅವನೇನನ್ನುತ್ತಾನೆ? ಸ್ವಂತ ಮನೆ ಇರಲಿ ಅನ್ನೋ ಆಸೆ ಅವನಿಗಿರುಲ್ಲವೆ? ನನ್ನ ಹತ್ತಿರವೂ ಸ್ವಲ್ಪ ಹಣ ಇದೆ. ಆದಷ್ಟು ಬೇಗ ಮನೆಯನ್ನು ಕೊಂಡುಕೊಳ್ಳೋಣ....."

"ನಿನ್ನ ಹತ್ತಿರ ಎಲ್ಲಿಂದ ಬಂತಮ್ಮ ಹಣ?" ಸುಮಂತ ಅಚ್ಚರಿಯಿಂದ ಕೇಳಿದ.

"ನಮ್ಮ ತಾತನ ಜಮೀನನ್ನು ಮಾರಿದ ಹಣ. ನನ್ನ ಅಪ್ಪ ಎಲ್ಲರಿಗೂ ಎರಡೆರಡು ಸಾವಿರ ಕೊಟ್ಟಿದ್ದರು. ಎಲ್ಲಾ ಸೇರಿ ನನ್ನ ಹತ್ತಿರ ಒಟ್ಟು ನಾಲ್ಕೈದು ಸಾವಿರ ರುಪಾಯಿಗಳಿವೆ"

"ಅಬ್ಬಾ..... ನನಗಿಂತ ಶ್ರೀಮಂತಳು ನೀನು. ಬ್ಯಾಂಕಿನಲ್ಲಿ ಇಟ್ಟಿದ್ದರೆ ಬಡ್ಡಿ

ಬಂದಿರುತ್ತಿತ್ತು."

"ಬ್ಯಾಂಕು ಗೀಂಕು ನನಗ್ಯಾಕೆ ಅಂತ ಸುಮ್ಮನಾದೆ. ಬಡ್ಡಿ ಎಷ್ಟು ಬರುತ್ತಿತ್ತೋ..... ಅಥವಾ ಖರ್ಚಾಗಿಯೇ ಹೋಗಿರುತ್ತಿತ್ತೋ....?"

"ಖರ್ಚು ಮಾಡದೇ ಅದ್ಹೇಗೆ ಕೂಡಿಟ್ಟಿದ್ದೆಯೋ..... ನನಗೂ ಆ ಮ್ಯಾಜಿಕ್ ಹೇಳಿಕೊಡು" ಮಗ ಒತ್ತಾಯಿಸಿದ.

"ಅದೆಲ್ಲಾ ನನ್ನ ಜಾಣತನ. ಇರಲಿ ಅದೆಲ್ಲಾ ನಿನಗೇಕೆ? ಗಂಡಸರು ಯಾವಾಗಲೂ ಧಾರಾಳವಾಗಿ ಖರ್ಚು ಮಾಡಬೇಕು. ಹೆಂಗಸರು ಒಪ್ಪ ಮಾಡಿ ಕೂಡಿಡಬೇಕು. ಅದೇ ಸಂಸಾರದ ಲಕ್ಷಣ"

"ಇದನ್ನೆಲ್ಲಾ ಆಚಿಗೂ ಹೇಳಿಕೊಟ್ಟಿದೀಯ ತಾನೇ......."

"ಅವಳ ಕೈಗೆ ಸಂಸಾರ ಇನ್ನು ಬಂದಿಲ್ಲವಲ್ಲ. ಅತ್ತೆಯ ಕೈಲೇ ಇದೆ"

"ಇದರಿಂದ ನಿನಗೆ ತುಂಬಾ ಬೇಸರ ಅಂತ ಕಾಣುತ್ತೆ"

"ನನಗ್ಯಾಕೆ ಬೇಸರ? ಆಕೆ ನನಗಿಂತ ಜಾಣೆ. ಅವರ ಮುಖಾನ ನೋಡಿದ್ರೆ ತಿಳಿಯುತ್ತೆ" ಮಗ ಅಪ್ಪನ ಕಡೆ ನೋಡಿ ಹುಬ್ಬು ಹಾರಿಸಿ ನಕ್ಕ.

"ಅಪ್ಪ ಮಗ ಇಬ್ಬರಿಗೂ ನನ್ನ ಮಾತು ಅಂದ್ರೆ ತಮಾಷೆ. ನನ್ನ ಬೆಲೆ ಈಗ ಗೊತ್ತಾಗುಲ್ಲ"

"ಬಿಡಮ್ಮ. ನಿನ್ನ ಹತ್ತಿರ ಅಲ್ಲದೇ ಇನ್ಯಾರ ಹತ್ತಿರ ತಮಾಷೆ ಮಾಡಬೇಕು. ಬೇಗ ಊಟ ಹಾಕು. ಬೇಗ ಮಲಗ್ತೀನಿ"

"ಏನಡಿಗೆ ಮಾಡಿದೀಯೆ? ನಾಳೆ ಏನಾದ್ರೂ ರುಚಿಯಾದ ಅಡಿಗೆ ಮಾಡು"

"ಒಬ್ಬರಿಗೆ ರುಚಿಯಾದ ಅಡಿಗೆಯನ್ನು ಊಟ ಮಾಡುವ ಆಸೆ ; ಇನ್ನೊಬ್ಬರಿಗೆ ಏನೋ ಒಂದು ತಿಂದು ಮಲಗುವ ಆಸೆ..... ನನಗೆ ಮಾತ್ರ ಯಾವ ಆಸೆಯೂ ಇಲ್ಲ" ಶಾಂತ ಮೂತಿ ಊದಿಸಿದಳು.

"ಯಾಕೇ ಇಲ್ಲ? ಮಾತು ಮಾತಿಗೂ ನನ್ನನ್ನು ಏನಾದರೂ ಅನ್ನುವ ಆಸೆ ನಿನಗಿದೆಯಲ್ಲಾ"

"ಸರಿಯಾಗಿ ಹೇಳಿದ್ರಿ ಅಪ್ಪಾ....." ಸುಮಂತ ನಕ್ಕಾಗ ಶಾಂತ ಮಗನ ಬೆನ್ನ ಮೇಲೆ ಮೆಲ್ಲಗೆ ಒಂದೇಟು ಹಾಕಿದಳು.

"ಬರ್ತಾ ಬರ್ತಾ ನೀನು ಅಪ್ಪನ ಮಗನಾಗ್ತಿದೀಯ. ನೀವಿಬ್ರೂ ಒಂದು. ನಾನೇ ಒಂದು"

"ಹಾಗ್ಯಾಕಮ್ಮ ಹೇಳ್ತೀಯ? ನಿನ್ನ ಸಲಹೆ ಕೇಳದೇ, ನಿನ್ನ ಒಪ್ಪಿಗೆ ಇಲ್ಲದೇ ಈ ಮನೆಯಲ್ಲಿ ಒಂದು ಇರುವೆ ಸಹ ಓಡಾಡುಲ್ಲ"

"ತಮಾಷೆ ಅತಿಯಾಯ್ತು. ನಡೀ ಬಡಿಸ್ತೀನಿ. ಎಷ್ಟೇ ಬೇಗ ಮಲಗಿದರೂ ಬೆಳಿಗ್ಗೆ ಏಳೋದು ಮಾತ್ರ ನಿಧಾನಾನೇ. ನಿನ್ನನ್ನ ಎಬ್ಬಿಸೋಕೆ ಮಾತ್ರ ನಾನು ಬೇಕೇ ಬೇಕು."

"ನಾನು ಎಬ್ಬಿಸ್ತೀನಿ ಬಿಡೇ. ನಿನಗ್ಯಾಕೆ ಬೇಜಾರು?"

"ಬೇಜಾರ್‍ಯಾಕೆ? ಅಭ್ಯಾಸವಾಗಿ ಹೋಗಿದೆ ನನಗೆ.... ಬನ್ನಿ ತಟ್ಟೆ ಹಾಕಿ ಬನ್ನಿ" ಎಲ್ಲರೂ ಎದ್ದರು. ಊಟ ಮುಗಿಸಿ ಮಲಗಿದರು. ಆ ರಾತ್ರಿ ಕಳೆಯಿತು. ಮತ್ತೊಂದು ದಿನ ಪ್ರಾರಂಭವಾಯಿತು.

ಕಂಪೆನಿಯಲ್ಲಿ ಹೊಸದಾಗಿ, ಕೆಲಸಕ್ಕೆ ಸೇರಿದ ಹುಡುಗಿಯರಲ್ಲಿ ತಾರಾಳು ಒಬ್ಬಳು. ಮೊದಲ ದಿನ ಅವಳ ಪರಿಚಯವಾದಾಗ, ಈ ಮುಂಚೆ ತಾನು ಅವಳನ್ನು

ನೋಡಿರಬಹುದೇ ಅಂತೆನ್ನಿಸಿತ್ತು. ಆದರೆ ಎಲ್ಲಿ ಅಂತ ತಿಳಿದಿರಲಿಲ್ಲ. ಆದರೆ, ಅವಳೇ ಅವನನ್ನು ಗುರುತಿಸಿ ಮಾತನಾಡಿದಳು.

"ನಾನು ಒಂದು ದಿನ ನಿಮ್ಮ ಮನೆಗೆ ಬಂದಿದ್ದೆ ನೆನಪಿದೆಯಾ?"

"ನೀವಾ? ಇಲ್ಲವಲ್ಲ..... ಯಾವಾಗ ಬಂದಿದ್ರಿ?" ಈ ಹುಡುಗಿ ತನ್ನನ್ನು ರ್‍ಯಾಗಿಂಗ್ ಮಾಡುತ್ತಿರಬಹುದೇ ಅಂತೆನ್ನಿಸಿ, ಮೈ ಬೆವತಿತ್ತು.

"ನಮ್ಮ ಸಂಬಂಧಿಗಳೊಬ್ಬರು, ನಿಮ್ಮ ಮನೆಯ ಹತ್ತಿರವೇ ಇದಾರೆ..... ಅವರ ಮನೆಯ ಒಂದು ಸಮಾರಂಭಕ್ಕೆ ನಿಮ್ಮನ್ನು ಕರೆಯಲು ಬಂದಿದ್ದೆ....."

"ನನ್ನನ್ನಾ? ಯಾವ ಸಮಾರಂಭ?"

"ಸಾರಿ..... ನಿಮ್ಮನ್ನಲ್ಲ.... ನಿಮ್ಮ ತಾಯೀನ...." ಕಿಲಕಿಲನೆ ನಕ್ಕಳು ಇವನೂ ನಕ್ಕಂತೆ ಮಾಡಿದ. "ಆ ದಿನವೂ ನೀವು ಹೀಗೇ ನನ್ನನ್ನು ಗಲಿಬಿಲಿ ಮಾಡಿದ್ರಿ" ಅವಳು ನುಡಿದಾಗ, ಇದು ಸೇಡಿಗೆ ಸೇಡು ಅನ್ನುವಂತಿದೆಯಲ್ಲಾ ಅಂತಂದುಕೊಂಡು, "ಏನೋ ನನಗೆ ನೆನಪಿಲ್ಲ" ಅಂತಂದ.

"ಪರವಾಗಿಲ್ಲ ಬಿಡಿ. ನಿಮ್ಮನ್ನು ನೋಡಿದ ಮೇಲೆ, ನೀವು ಅದೇ ವ್ಯಕ್ತಿ ಅನ್ನೋ ನೆನಪು ಬಂತು. ಅದಕ್ಕೇ ಕೇಳಿದೆ." ಸುಮಂತ ಪೆಚ್ಚು ನಗೆ ನಕ್ಕ. ಅವಳು ಅತ್ತ ಹೊರಟು ಹೋದಳು.

"ಪರವಾಗಿಲ್ಲ, ಹುಡುಗಿ ಜೋರಾಗಿದಾಳೆ. ನನಗೇನಾದರೂ ನೆನಪಿಗೆ ಬಂದಿದ್ದರೂ ನಾನಾಗಿಯೇ ನಾನು ಕೇಳುತ್ತಿರಲಿಲ್ಲವೇನೋ ಅಂತ ಅನ್ನಿಸಿತ್ತು. ಸಹೋದ್ಯೋಗಿ ಸತೀಶ ತಮಾಷೆ ಮಾಡಿದ್ದ....

"ಏನೋ ಗಾಳ ಹಾಕುತ್ತಿದ್ದಾಳೆ ಕಣೋ ಮರಿ. ಸ್ವಲ್ಪ ಹುಶಾರಾಗಿರು.... ಅಲ್ಲ, ಅವಳು ನಿನ್ನನ್ನೇ ಏಕೆ ವಿಚಾರಿಸಿದಳು. ನನ್ನನ್ನೇಕೆ ವಿಚಾರಿಸಲಿಲ್ಲ."

"ಕೇಳಿಕೊಂಡು ಬರಲಾ?"

"ಅವಳ ಹತ್ತಿರ ಮಾತನಾಡುಕ್ಕೆ ನೆಪ ಬೇಕಾಗಿದೆಯಾ?"

"ನೆಪ ಗಿಪ ಏನೂ ಬೇಡಾ..... ಇದೇ ಆಫೀಸಿನಲ್ಲಿ ದಿನಾ ಸಿಗುತ್ತಾಳೆ. ಒಂದಲ್ಲ ಒಂದು ದಿನ ಕೇಳ್ತೀನಿ"

"ಅವಳ ಜೊತೆ ಇನ್ನೊಂದು ಹುಡುಗಿ ಇತ್ತಲ್ಲ..... ಅದು ಯಾರೋ..... ಅವಳ ಹೆಸರು ಸ್ಮಿತಾ ಅಂತ ಅಲ್ಲವಾ?"

"ಹುಂ. ಸ್ಮಿತಾ.... ಅವಳು ಇಲ್ಲಿಯವಳಲ್ಲ. ಮಹಾರಾಷ್ಟ್ರದವಳು"

"ಮಹಾರಾಷ್ಟ್ರದ ಹುಡುಗೀರು ತುಂಬಾ ಜೋರಾಗಿರ್ತಾರಯ್ಯಾ..... ಸ್ವಲ್ಪ ಹುಶಾರಾಗಿರಬೇಕು"

"ನಾವೂ ಜೋರಾಗಿದ್ದರಾಯ್ತು... ಹುಡುಗೀರ್ಗೆ ನಾವು ಹೆದರಬೇಕಾ?" ಸತೀಶ ಜೋರಾಗಿ ಮಾತನಾಡಿದಾಗ, ಎಲ್ಲರೂ ಇತ್ತ ತಿರುಗಿದರು.

"ಸ್ವಲ್ಪ ಮೆಲ್ಲಗೆ ಮಾತಾಡೋ..... ಇದು ರಸ್ತೆಯಲ್ಲ"

"ನನಗೆ ರಸ್ತೆ ಆಫೀಸು ಎಲ್ಲಾ ಒಂದೇ. ಏನೂ ಭಯವಿಲ್ಲ."

ಆ ದಿನ ತಾರಾಳೊಡನೆ ಆದ ಪರಿಚಯ ಕ್ರಮೇಣ ಸ್ನೇಹಕ್ಕೆ ತಿರುಗಿತ್ತು. ಪಟಪಟನೆ ಅರಳು ಹುರಿದಂತೆ ಮಾತನಾಡುವ ತಾರಾ, ಸತೀಶ, ಹಾಗೂ ಸುಮಂತನೊಡನೆ ಬಿಚ್ಚು ಸ್ನೇಹದಿಂದ ಮಾತನಾಡುತ್ತಿದ್ದಳು. ಅವರುಗಳೊಡನೆ ಸ್ಮಿತಾ ಇದ್ದರೂ ಹೆಚ್ಚಿಗೆ ಮಾತನಾಡುತ್ತಿರಲಿಲ್ಲ.

"ಯಾಕ್ರೀ ನಿಮ್ಮ ಸ್ನೇಹಿತೆಗೆ ಮಾತು ಬರುಲ್ವಾ? ಎಲ್ಲಾ ನೀವೇ ಆಡ್ತೀರಲ್ಲ" ಸತೀಶ ರೇಗಿಸಿದ್ದ.

"ಅವಳಿನ್ನು ಈ ಪ್ರಾಂತ್ಯಕ್ಕೆ ಹೊಸಬಳು. ಚೆನ್ನಾಗಿ ಕನ್ನಡ ಬರುಲ್ಲ"

"ನಮಗೆ ಇಂಗ್ಲೀಷು ಬರುತ್ತೇರಿ...."

"ಎಲ್ಲರಿಗೂ ಇಂಗ್ಲೀಷ್ ಬರುತ್ತೆ. ನಾನೇ ಅವಳಿಗೆ ಹೇಳಿ ಬಿಟ್ಟಿದೀನಿ. ಚೆನ್ನಾಗಿ ಕನ್ನಡ ಕಲಿತ ಮೇಲೆ ನೀನು ಮಾತನ್ನಾಡಬೇಕೂಂತ" ತಾರಾ ತನ್ನ ದಂತಪಂಕ್ತಿಗಳನ್ನು ತೋರುತ್ತಾ ನಕ್ಕಾಗ, ಸ್ಮಿತಾ ಮುಗುಳ್ನಕ್ಕಳು.

"ಸ್ಮಿತಾ ನಾನು ಒಟ್ಟಿಗೇ ಒಂದೇ ಕಾಲೇಜಿನಲ್ಲಿ ಓದಿದವರಲ್ಲ..... ಇಲ್ಲಿಯ ಇಂಟರ್‌ವ್ಯೂಗೆ ಬಂದಾಗ ನಮ್ಮ ಮೊದಲ ಪರಿಚಯವಾದದ್ದು. ಅವಳೀಗ ನನ್ನ ಜೊತೆಯಲ್ಲಿ ಪೇಯಿಂಗ್‌ಗೆಸ್ಟ್ ಆಗಿದಾಳೆ. ನಾವಿಬ್ಬರೂ, ನಮ್ಮ ಆ ಸಂಬಂಧಿಗಳ ಮನೆಯಲ್ಲಿ ಪೇಯಿಂಗ್ ಗೆಸ್ಟ್ ಆಗಿದ್ದೇವೆ"

"ಅಂದರೇ.... ನೀವು ನಮ್ಮ ಮನೆಯ ಹತ್ತಿರದಲ್ಲೇ..... ಅವರ ಮನೆಯಲ್ಲಿದೀರಾ.....?"

"ಹೌದು. ಎನಿ ಅಬ್ಜಕ್ಷನ್?" ಸುಮಂತ ಕೆಂಪಾದ.

"ನನಗೇನು ಅಬ್ಜಕ್ಷನ್.....? ನನಗೆ ಗೊತ್ತಿರಲಿಲ್ಲ. ಅದಕ್ಕೇ..... ಕೇಳಿದೆ....."

"ಗೊತ್ತಾಗಿದ್ದಿದ್ರೆ ಏನು ಮಾಡ್ತಿದ್ರಿ?"

"ನಿಮ್ಮಿಂದ ದೂರ ಇರ್ತಿದ್ದೆ" ಅಂತ ಹೇಳಬೇಕೆಂದು ಕೊಂಡ. ಆದರೆ ಹೇಳಲಿಲ್ಲ. ಸುಮ್ಮನೇ ನಕ್ಕ.

"ಯಾಕ್ರಿ ನಗ್ತಿದೀರಿ? ನನ್ನ ಪ್ರಶ್ನೆಗೆ ಉತ್ತರ ಹೇಳಲಿಲ್ಲ ನೀವು"

"ಇನ್ನೊಂದು ದಿನ ಹೇಳಿದ್ರಾಯ್ತು. ಈಗ ಲಂಚ್ ಅವರ್ ಮುಗೀತು" ಎನ್ನುತ್ತಾ ಕೈ ಗಡಿಯಾರದಲ್ಲಿ ಸಮಯ ನೋಡಿಕೊಂಡ.

"ನಾಳೆ ಖಂಡಿತಾ ಹೇಳಬೇಕು." ಅವಳು ಅವನ ತೋಳನ್ನು ಒತ್ತಿ ಕೇಳಿದಾಗ, ಅವನು ಮೆಲ್ಲಗೆ ಬೆವತಿದ್ದ. ಗಲಿಬಿಲಿಯಿಂದ .. ಓ..ಕೇ..... ಓ....ಕೇ.... ಎಂದ. ಆ ದಿನ ಸಾಯಂಕಾಲ ಮನೆಗೆ ಬರುವಾಗ, ಮರೆಯದೇ ಆ ರಾಧಮ್ಮನ ಮನೆಯ ಕಡೆ ನೋಡಿದ್ದ. ಅಲ್ಲಿ ಯಾವ ಹುಡುಗಿಯರೂ ಕಾಣಲಿಲ್ಲ. ತಾರಾ ಸುಳ್ಳು ಹೇಳಿರಬಹುದೇ ಅಂತೆನ್ನಿಸಿದ್ದರೂ..... ಕುತೂಹಲ ಅಡಗಲಿಲ್ಲ.

ನಾಲ್ಕಾರು ದಿನಗಳು ಕಳೆದರೂ, ಆ ಮನೆಯ ಬಳಿ, ತಾರಾಳಾಗಲೀ, ಸ್ಮಿತಾಳಾಗಲೀ ಕಂಡುಬರಲಿಲ್ಲ.... ಮತ್ತೆ ಆ ಬಗ್ಗೆ ಪ್ರಸ್ತಾಪ ಬಂದಿರಲಿಲ್ಲ. ಇವನೂ ಸುಮ್ಮನಾಗಿದ್ದ. ಹುಡುಗಿಯರಿಬ್ಬರೂ ಊಟದ ಸಮಯದಲ್ಲಿ ಕಾಣದಿದ್ದಾಗ ಸತೀಶ ಕೇಳಿದ್ದ.

"ಎಲ್ಲಯ್ಯಾ ನಮ್ಮ ತಾರಾಮಣಿ? ಕವಳದ ಡಬ್ಬಿ ಹಿಡಿದುಕೊಂಡು ಇನ್ನು ಪ್ರತ್ಯಕ್ಷವಾಗಿಲ್ಲ...."

"ಯಾಕೆ? ಭವತಿ ಭಿಕ್ಷಾಂ ದೇಹಿ ಅಂತ ಅವಳ ಮುಂದೆ, ನಿನ್ನ ಕೈ ಒಡ್ಡಬೇಕೂಂತ ಅಂದ್ಕೊಂಡಿದ್ದೆಯಾ?....."

"ಪಾಪಾ.... ಅವರ ಡಬ್ಬೀಲಿ ಏನಿರುತ್ತೆ. ಪೇಯಿಂಗ್‌ಗೆಸ್ಟ್‌ಗಳಿಗೆ, ನಮ್ಮ ಮನೆಯವರಂತೆ ಸೊಗಸಾದ ತಿಂಡಿ ಯಾರು ಮಾಡಿ ಕೊಡುತ್ತಾರೆ?"

"ಏನು? ತುಂಬಾ ಕನಿಕರ ತೋರಿಸುತ್ತಿದೀಯ.... ಏನು ವಿಚಾರ?"

"ಏನಿಲ್ಲ..... ಸುಮ್ಮನೇ ಹೇಳಿದೆ. ಈಗ ನೋಡು.... ನಿಮ್ಮಮ್ಮ ಬಗೆ ಬಗೆಯ

ತಿಂಡಿ ಮಾಡಿಕೊಡುತ್ತಾರೆ. ನಿನ್ನ ಊಟದ ಡಬ್ಬಿಯ ಮುಚ್ಚಳ ತೆಗೆದ ಕೂಡಲೇ ಘಂ ಅನ್ನೋ ವಾಸನೆ ಮೂಗಿಗೆ ಬಡಿಯುತ್ತೆ. ಅವರಿಬ್ಬರ ಡಬ್ಬಿಯಿಂದ ಎಂದಾದ್ರೂ ಇಂತ ಸೊಗಸಾದ ವಾಸನೆ ಬಂದಿದ್ದನ್ನು ಕಂಡಿಲ್ಲಪ್ಪಾ....."

"ವಾಸನೆ ಕಣ್ಣಿಗೆ ಕಾಣಿಸೋಲ್ಲ. ನಿನಗೆ ಪಂಚೇಂದ್ರಿಯಗಳ ಜ್ಞಾನವೇ ಇಲ್ಲವಲ್ಲ........ ಹಾಗಾದರೆ ಹುಡುಗಿಯರಿಗೋಸ್ಕರ, ಏನಾದರೂ ಸ್ಪೆಶಲ್ ತಂದಿದೀಯ ಅಂತ ಕಾಣುತ್ತೆ...."

"ರುಚಿ ರುಚಿಯಾದ ಅಡಿಗೆ ತಿಂಡಿ ಮಾಡಿ, ಅಂತ ನಮ್ಮ ಅತ್ತಿಗೆಗೆ ಹೇಗೆ ಹೇಳಲಿ ನಾನು? ಅವರು ಏನು ಮಾಡಿಕೊಡ್ತಾರೋ ಅದನ್ನೇ ತರ್ತೀನಿ. ನಾನು ಒಂದು ತರಹ ಪೇಯಿಂಗ್‌ಗೆಸ್ಟ್ ನಮ್ಮ ಮನೇಲಿ....." ಪೆಚ್ಚು ಮೋರೆ ಹಾಕಿಕೊಂಡು ನುಡಿದ.

"ಅಂತೂ ನನ್ನ ಡಬ್ಬಿಯೊಳಗೆ ನಿನ್ನ ಕಣ್ಣು ಬಿದ್ದಿದೆ. ಈ ಮೊದಲೇ ಯಾಕೆ ಹೇಳಲಿಲ್ಲವೋ..... ನಾನು ನಿನಗೆ ಬೇಕಾದ ತಿಂಡಿಯನ್ನು ಮಾಡಿಸಿಕೊಡ್ತಿದ್ದೆ."

"ನಂಗೊತ್ತಿತ್ತು ನೀನು ಇದೇ ಮಾತನ್ನು ಹೇಳ್ತೀಯ ಅಂತ. ಆದರೆ....., ನಾನೂ ನೀನೂ ಇಬ್ಬರೇ ತಿಂದರೆ ಏನು ಮಜಾ ಹೇಳು. ಹುಡುಗಿಯರಿಗೂ ಕೊಟ್ಟು ತಿನ್ನೋಣ ಅಂತ ಹಾಗೆ ಹೇಳಿದೆ"

"ಯಾಕೆ? ಆಫೀಸಿನವರಿಗೆಲ್ಲ ಕೊಡೋದು ಬೇಡ್ವಾ?"

"ಕೊಡೋಣ ಕೊಡೋಣ..... ನನ್ನ ನಿನ್ನ ಮದುವೆಯಾದ ಮೇಲೆ ನಾವಿಬ್ಬರೂ, ಇಲ್ಲೇ ಒಂದು ಕ್ಯಾಂಟಿನ್ ಶುರು ಮಾಡೋಣ... ಸೈಡ್ ಬಿಸಿನೆಸ್ಸೂ ಆಗುತ್ತೆ"

"ಚೆನ್ನಾಗಿದೆ ಜೋಕು. ಕ್ಯಾಂಟೀನ್ ನಡೆಸೋಕೆ ಇದೇ ಆಫೀಸು ಯಾಕೆ? ಮೂರು ದಿನದಲ್ಲಿ ನಾವು ಪಾಪರ್ ಆಗ್ತೀವಿ ಅಷ್ಟೇ...... ನಮ್ಮ ಕ್ಯಾಂಟೀನ್‌ಗೆ ಈ ಆಫೀಸಿನವರು ಯಾರೂ ಬರುಲ್ಲ"

"ಯಾರು ಬಂದರೆಷ್ಟು ಬಿಟ್ಟರೆಷ್ಟು? ಈ ಹುಡುಗೀರು ಬರಬಹುದು"

"ಈ ಇಬ್ಬರು ಹುಡುಗಿಯರಿಗೋಸ್ಕರ, ನಾನು ಇನ್ವೆಸ್ಟ್ ಮಾಡುಲ್ಲಪ್ಪಾ. ಇವರದ್ದೇನು ಗ್ಯಾರಂಟಿ? ಮೊದಲೇ ಹುಡುಗಿಯರ ಸಹವಾಸ. ಮದುವೆ ಮಾಡಿಕೊಂಡು ಎಲ್ಲೆಲ್ಲಿ ಹೊರಟು ಹೋಗ್ತಾರೋ....?"

"ಅದೂ ನಿಜ ಅನ್ನು.... ಮದುವೆಯಾಗಿ ಹೊರಟು ಹೋಗೋ ಈ ಹುಡುಗಿಯರಿಗಾಗಿ ನಾವೇಕೆ ಕ್ಯಾಂಟೀನ್ ಶುರು ಮಾಡಬೇಕು. ಪ್ಲಾನ್ ಡ್ರಾಪ್ಡ್....." ನಕ್ಕ.

"ಈ ಸಿಲ್ಲಿ ಐಡಿಯಾಸ್‌ಗಳೆಲ್ಲಾ ನಿನ್ನದೇ. ಬಂಡವಾಳ ಎಲ್ಲಿದೆ? ಮಾತಾಡ್ತೀಯ ಅಷ್ಟೇ...."

"ಬಂಡವಾಳವಿಲ್ಲದ ಬಡಾಯಿ" ಅಂತ ಒಂದು ಸಿನಿಮಾನೋ ನಾಟಕಾನೋ ಬಂದಿತ್ತು..... ಗೊತ್ತಾ?"

"ಅದು ನಿನ್ನನ್ನು ಕುರಿತೇ ಮಾಡಿದ್ದು ಅಂತ ನನಗೆ ಈಗ ಗೊತ್ತಾಯ್ತು" ಸ್ನೇಹಿತರಿಬ್ಬರೂ ಹೀಗೇ ಅಸಂಬದ್ಧ ಮಾತನಾಡಿಕೊಂಡು ನಗುತ್ತಾ ಇದ್ದಾಗ, ಆ ಹುಡಿಗಿಯರಿಬ್ಬರೂ ಹೊರಗಿನಿಂದ ಒಳಗೆ ಬಂದು, ಇವರನ್ನು ಸೇರಿದರು.

"ಏನ್ರೀ.. ಬಹಳ ಬಹಳ ನಗ್ತಿದೀರಿ. ರಸ್ತೆಗೇ ಕೇಳಿಸುತ್ತಿತ್ತು" ತಾರ ಕೇಳಿದಾಗ ಸ್ಮಿತಾ ತಲೆಯಾಡಿಸಿದಳು.

"ಪರವಾಗಿಲ್ಲ. ನಿಮ್ಮ ಸ್ನೇಹಿತೆ, ಇಂಪ್ರೂವ್ ಆಗ್ತಿರುವಂತಿದೆ"

"ಇದು ನಗೋ ವಿಷಯಾನ?"

"ಸಾರಿ ಸಾರಿ, ಹೀಗೇ ಏನೋ ಜೋಕ್ಸ್ ಕಟ್ ಮಾಡ್ತಿದ್ದೆವು"

"ಏನೂಂತ ನಮಗೂ ಹೇಳಬಹುದಾದರೆ ಹೇಳಿ" ತಾರಾ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು.

"ನಮ್ಮ ಲಂಚ್ ಡಬ್ಬಿ ಖಾಲಿ....." ಸತೀಶ ಖಾಲಿ ಡಬ್ಬಿಯನ್ನು ತಲೆ ಕೆಳಗು ಮಾಡಿ ತೋರಿದ.

"ಅದಕ್ಕೆ ನಗ್ತಿದೀರಾ?..... ಇವತ್ತಿನ ತಿಂಡಿಯಲ್ಲಿ ಖಂಡಿತಾ ಏನೋ ಬೆರೆತಿದೆ. ಏನು ತಂದಿದ್ರಿ ಇವತ್ತು?"

"ಸ್ಪೆಶಲ್... ಸ್ಪೆಶಲ್. ನಿಮಗೋಸ್ಕರ ತಂದಿದ್ದೆ... ನೀವು ಬರಲೇ ಇಲ್ಲ. ನಾವೇ ಖಾಲಿ ಮಾಡಿದೆವು....."

"ನಾವಿಬ್ಬರೂ, ಹೋಟೆಲ್ಲಿಗೆ ಹೋಗಿದ್ದೆವ. ಇವತ್ತು ಡಬ್ಬಿ ತಂದಿರಲಿಲ್ಲ. ನಾಳೆ ನೀವೇ ನಮ್ಮ ಹೋಸ್ಟ್. ನಾವು ಗೆಸ್ಟ್.... ಓ.. ಕೇ" ತಾರಾ ನಗುತ್ತಾ ನುಡಿದಳು.

* * * *

"ಅಮ್ಮಾ.. ಲಂಚ್‌ಗೆ ಏನು ಇಡ್ತಿದೀಯ?"

"ಎಂದೂ ಕೇಳದಿದ್ದವನು ನೀನು..... ಅದೇನು ವಿಶೇಷ?"

'ಅದೇ ಸ್ಪೆಶಲ್ ಏನು ಇಡ್ತೀಯಾ ಅಂತ ಕೇಳಿದೆ....."

"ಏನು ಬೇಕು ಹೇಳು ಮಾಡಿಕೊಡ್ತೀನಿ"

"ಏನೂ ಬೇಡಾ ಬಿಡು. ಕ್ಯಾಂಟಿನ್‌ನಲ್ಲೇ ತಿಂತೀನಿ....."

"ಏನು ಹುಡುಗನೋ ನೀನು.... ಬೇಕೂಂತೀಯ ಬೇಡಾಂತೀಯ.... ಎಲ್ಲಾ ನೀನೇ ಆಡ್ತೀಯ...."

"ಸುಮ್ಮನೇ ಕೇಳಿದೆ ಅಷ್ಟೇ.... ಮತ್ತೆಂದಾದ್ರೂ ಮಾಡೂವಂತೆ.... ಇವತ್ತು ಏನು ತಿಂಡಿ ಮಾಡಿದೀಯ?"

"ಅಕ್ಕಿ ರೊಟ್ಟಿ.... ಚಟ್ನಿ....."

"ಅದನ್ನೇ ಡಬ್ಬಿಗೆ ಇನ್ನೊಂದೆರಡು ರೊಟ್ಟಿ ಜಾಸ್ತಿ ಇಡು..... ಲಂಚ್‌ಗೆ ಕೂತಾಗ ನಾವುಗಳು ಹಂಚಿಕೊಂಡು ತಿಂತೀವಿ....."

"ಎಷ್ಟು ಜನ ಇದೀರಿ..... ಎಷ್ಟು ರೊಟ್ಟಿ ಮಾಡಲಿ?"

"ಒಂದೈದಾರು ಜನ... ಆರು ರೊಟ್ಟಿ ಸಾಕು...."

"ರೊಟ್ಟಿ ತಿಂದರೆ ಬಾಯಾರಿಕೆ ಆಗುತ್ತೆ... ಅಂತ ಅಂತೀಯ. ಅದಕ್ಕೇ ಮೊಸರನ್ನವನ್ನು ಕಲಿಸಿಕೊಡೋಣ ಅಂತಿದ್ದೆ."

"ಅದನ್ನೂ ಕೊಡು..ಒಂದೊಂದು ರೊಟ್ಟಿ ತಿಂದು, ಸ್ವಲ್ಪ ಮೊಸರನ್ನವನ್ನು ತಿಂತೀವಿ"

"ಇದರ ಬದಲು, ಅವರನ್ನೆಲ್ಲಾ ಮನೆಗೇ ಊಟಕ್ಕೆ ಕರಿ... ಪುಷ್ಕಳವಾಗಿ ಬಡಿಸ್ತೀನಿ" ಶಾಂತಾ ನಗುತ್ತಾ ನುಡಿದಾಗ, ಅಲ್ಲಿಯೇ ಇದ್ದ ರಾಮಸ್ವಾಮಿ ದನಿಗೂಡಿಸಿದ್ದ.

"ನೀನು ಆಫೀಸಿನ ಕೆಲಸಕ್ಕೆ ಹೋಗ್ತೀಯೋ, ಮೇಜುವಾನಿ ನಡಿಸ್ತೀಯೋ ಅಂತ ಅನುಮಾನ ಬರ್ತಿದೆ"

"ಏನಪ್ಪಾ.... ನೀವೂ ತಮಾಷೆ ಮಾಡ್ತೀರಾ.... ಮಾಡೀ ಮಾಡೀ.... ನೀವು ನಿಮ್ಮ ಕಲೀಗ್ಸ್ ಎಲ್ಲಾ ಒಟ್ಟಿಗೆ ಕೂತು ಹಂಚಿಕೊಂಡು ತಿನ್ನುತ್ತಿರಲಿಲ್ಲವಾ?"

"ಇಲ್ಲಪ್ಪಾ..... ಅವರವರ ಪಾಡಿಗೆ ಅವರವರ ಡಬ್ಬಿಯಲ್ಲಿ ಏನಿರುತ್ತಿತ್ತೋ ಅದನ್ನು

ತಿನ್ನುತ್ತಿದ್ದೆವು. ಇನ್ನೊಬ್ಬರಿಗೆ ತೋರಿಸುತ್ತಲೂ ಇರಲಿಲ್ಲ. ಎಲ್ಲಾ ಯಾಂತ್ರಿಕ. ಅವರವರ ಪಾಡು ಅವರವರದ್ದು. ಹಾಗಿತ್ತು"

ತಾಯಿ ಕೊಟ್ಟ ಲಂಚ್ ಬ್ಯಾಗ್ ಹಿಡಿದು, ಬೈಕನ್ನೇರಿದ... ಬಾಗಿಲ ಬಳಿ ನಿಂತಿದ್ದ ತಂದೆ ತಾಯಿಯರಿಗೆ ಕೈ ಬೀಸಿದ. ತಾಯಿ ನಕ್ಕಂತೆ ಅನ್ನಿಸಿತ್ತು. ಇದೆಲ್ಲಾ ಈ ಸತೀಶನ ಕಿತಾಪತಿ. ಆ ಹುಡುಗಿಯರನ್ನು ಮೆಚ್ಚಿಸಲು ಏನೇನೋ ನಾಟಕ ಆಡ್ತಾನೆ. ನಾಳೆ ನಿಮ್ಮ ಗೆಸ್ಟ್ ನಾವು ಅಂತ ಅವಳು ಅಂದಳು. ಇವನು ಒಪ್ಪಿ ಬಿಟ್ಟ.... ಆಮೇಲೆ ನನ್ನನ್ನು ರಿಕ್ವೆಸ್ಟ್ ಮಾಡಿಕೊಂಡ. ತನ್ನ ತಿಂಡಿಯ ಚಪಲವನ್ನು ಈ ರೀತಿ ತೀರಿಸಿಕೊಳ್ಳುತ್ತಿದ್ದಾನೆ.

"ಅಕ್ಕಿ ರೊಟ್ಟಿ ಚಟ್ನಿ..... ಅಹಹಾ ಎಷ್ಟು ಚೆನ್ನಾಗಿರುತ್ತೆ" ಅಂತ ಅವನು ಹೇಳಿದ ಅಂತ ನಾನೂ ಕೇಳಿದೆ. ಅಮ್ಮ ಏನಂದುಕೊಂಡಳೋ....? ಬೈಕ್ ಓಡಿಸುತ್ತಾ ತನ್ನಲ್ಲೇ ಅಂದುಕೊಳ್ಳುತ್ತಿದ್ದ.

ಅವನಿಗಾಗಿ ಕಾಯುತ್ತಾ ನಿಂತಿದ್ದ ಸತೀಶ ಓಡಿ ಬಂದು ಅವನಿಂದ ಚೀಲಗಳನ್ನು ತೆಗೆದುಕೊಂಡ. "ಏನು ತಂದಿದೀಯೋ?"

"ಏನಿದೆಯೋ ನಂಗೊತ್ತಿಲ್ಲ. ಅಮ್ಮ ಕೊಟ್ಟಿದ್ದು...."

"ತೆಗೆದು ನೋಡ್ಲಾ......?"

"ಮೊದಲು ಒಳಗೆ ಹೋಗೋಣ ನಡೀ......"

"ಹಲೋ ಗುಡ್ ಮಾರ್ನಿಂಗ್ ಮಿಸ್...." ಎದುರಿಗೆ ಕಂಡ ತಾರಾಳಿಗೆ ಹೇಳಿದ. ಎಲ್ಲಿ ನಿಮ್ಮ ಸ್ನೇಹಿತೆ....?"

"ಬ್ಯಾಂಕಿಗೆ ಹೋಗಿದಾಳೆ......"

"ಏನು ಬಹಳ ಖುಷಿಯಾಗಿರುವ ಹಾಗೆ ಅನ್ನಿಸುತ್ತೆ.....?"

"ಯಾರು ನಾನೋ ನೀವೋ.....?"

"ನೀವು.... ಏನು ವಿಷಯ ಅಂತಂದೆ......?"

"ಏನೂ ಇಲ್ಲ. ನೀವೇ ಯಾಕೋ ಎಕ್ಸೈಟ್ ಆಗಿದೀರಿ ಅಂತನ್ನಿಸುತ್ತೆ?"

"ಸುಮಂತ್ ನಿಂಗೂ ಹಾಗೇ ಅನ್ನಿಸುತ್ತಾ?"

"ಹೌದು ವಿಪರೀತ ಎಕ್ಸೈಟ್ ಆಗಿದೀಯ....." ತಾರಾ ಹುಬ್ಬೇರಿಸಿ ನಕ್ಕಳು. ಸುಮಂತ ಅವಳನ್ನೇ ನೋಡಿದ. ಹೌದು. ಅದೇ ಹುಡುಗಿ. ಆ ದಿನ ಬಾಗಿಲಿನಲ್ಲಿ ತನ್ನೆದುರು ನಿಂತಿದ್ದ ಬೆಡಗಿ ಅಂತಂದುಕೊಂಡ. ಒಂದೆರಡು ದಿನಗಳು ಅವಳ ನೆನಪು ಕಾಡಿತ್ತು. ಆಮೇಲೆ ಮರೆತಂತಾಗಿತ್ತು. ಈಗ ಮತ್ತೆ ಆ ನೆನಪು ಮರುಕಳಿಸಿತ್ತು.

ಎಲ್ಲರೂ ಅವರವರ ಸೀಟಿನಲ್ಲಿ ಕುಳಿತರು. ಇವನು ಕೂರುತ್ತಿದ್ದ ಜಾಗ ಸ್ವಲ್ಪ ಪ್ರತ್ಯೇಕವಾಗಿತ್ತು. ಅಲ್ಲಿಂದ ಸೀದಾ, ತಾರಾ ಕುಳಿತಿರುವ ಸ್ಥಳ ಕಾಣುತ್ತಿರಲಿಲ್ಲ. ಸತೀಶ ಕುಳಿತಿದ್ದ ಸ್ಥಳ ಕಾಣಿಸಿತ್ತು. ಮೊಟ್ಟ ಮೊದಲ ಬಾರಿಗೆ ಒಂದು ಗಳಿಗೆ ಅಸೂಯೆ ಮೂಡಿತು. ಲಕ್ಕೀ ಫೆಲೋ..... ಹುಡುಗಿಯರು ಕುಳಿತುಕೊಳ್ಳುವ ಜಾಗಕ್ಕೆ ಹತ್ತಿರದಲ್ಲೇ ತನ್ನ ಕುರ್ಚಿ ಹಾಕಿಸಿಕೊಂಡಿದಾನೆ ಅಂತ ಮೆಲ್ಲಗೆ ಬೈದುಕೊಂಡ.

ಗೋಡೆಯ ಮೇಲಿನ ಗಡಿಯಾರ ಒಂದು ಗಂಟೆ ಹೊಡೆಯುವುದನ್ನೇ ಕಾದಿದ್ದವನಂತೆ, ಸತೀಶ ಚಂಗನೆದ್ದು, ಸುಮಂತನ ಬಳಿಗೆ ಬಂದ.

"ನಿಜವಾಗ್ಲೂ ನಿನ್ನ ಲಂಚ್ ಬಾಕ್ಸ್‌ನಲ್ಲಿ ಏನಿದೆ ಅಂತ ಗೊತ್ತಿಲ್ಲವೇನೋ"

"ಸಸ್ಪೆನ್ಸ್...." ನಗುತ್ತಾ ನುಡಿದ. "ನಂಗೂ ಗೊತ್ತಿಲ್ಲ......."

"ಪ್ಲೀಸ್ ಹೇಳೋ....."

"ಹುಡುಗೀರು ಕಾಯ್ತಿದಾರೆ. ನಡೀ ಡಬ್ಬಿಗಳನ್ನು ಎತ್ಕೊಂಡು ಬಾ....."

"ಭಾರವಾಗಿತ್ತು. ಖಾಲಿ ಏನಿಲ್ಲ. ಆದರೆ ಇವತ್ತು ಏಪ್ರಿಲ್ ಫಸ್ಟ್ ಸಹಾ ಅಲ್ಲ.... ನನ್ನನ್ನು ಫೂಲ್ ಮಾಡ್ತಿಲ್ಲ ತಾನೇ....."

"ಅದ್ಯಾಕೆ ಅಷ್ಟು ಎಕ್ಸೈಟ್ ಆಗ್ತೀಯ. ಡಬ್ಬೀಲಿ ಏನಿದೆ ಅಂತ ನೋಡಿಯೇ ಬಿಡೋಣ ನಡೀ......." ಎಲ್ಲರೂ ಪ್ಯಾಂಟ್ರಿಗೆ ಬಂದು ತಮ್ಮ ಡೈನಿಂಗ್ ಟೇಬಲ್ ಬಳಿ ಕೂತರು. ಸತೀಶ ತಾನೇ ಡಬ್ಬಿಗಳ ಮುಚ್ಚಳವನ್ನು ತೆರೆದು ನೋಡಿದ. ಕಣ್ಣುಗಳನ್ನು ಅರಳಿಸಿದ. "ಫ್ಯಾಂಟಾಸ್ಟಿಕ್" ಅಂತಂದ. ಹುಡುಗಿಯರು ಕಿಸಕಿಸನೆ ನಕ್ಕರು. ಸುಮಂತ ತಾರಾಳ ಕಡೆ ತಿರುಗಿ, ಅಕ್ಕಿ ರೊಟ್ಟಿ, ಚಟ್ನಿ, ಮೊಸರನ್ನ, ಉಪ್ಪಿನಕಾಯಿ..... ಎಂದು ಸುರಿದ.

"ನಿಮಗೆ ಹೇಗೆ ಹೊತ್ತು?....." ಅವಳು ನಗುತ್ತಾ ಪ್ರಶ್ನಿಸಿದಳು.

"ನಾನು ಬಂದ ಕೂಡಲೇ ಹೇಳಿದ್ದೆ....." ಸತೀಶ ನುಡಿದ. ಸುಮಂತ ಅವನ ಮೊಣಕೈ ಚಿವುಟಿದ.

"ನಾನೇ ಬೆಳಿಗ್ಗೆ ನಿಮಗಳಿಗೋಸ್ಕರ ತಯಾರಿಸಿದ ರೊಟ್ಟಿ ಚಟ್ನಿ ಎನ್ನುತ್ತಾ ಪ್ಲೇಟ್‌ಗಳಿಗೆ ಹಾಕಿಕೊಟ್ಟ.... ಚೆನ್ನಾಗಿದೆ ಅಲ್ವಾ ಅಂತ ಹೊಗಳುತ್ತಾ ತಿನ್ನಲು ಪ್ರಾರಂಭಿಸಿದ. ಹುಡುಗಿಯರೂ ತಿನ್ನಲು ಶುರು ಮಾಡಿದ್ದರು.

"ನಿಜಕ್ಕೂ ತುಂಬಾ ಚೆನ್ನಾಗಿದೆ. ನಿಮ್ಮ ತಾಯಿಗೆ ಥ್ಯಾಂಕ್ಸ್ ಹೇಳಿಬಿಡಿ" ತಾರಾ ನುಡಿದಳು. ಸ್ಮಿತಾ ತಲೆಯಾಡಿಸಿದಳು. ಸುಮಂತ ಸ್ನೇಹಿತನ ಕಡೆ ತಿರುಗಿ ಸಶಬ್ದವಾಗಿ ನಕ್ಕ.

"ಮೋಸ ಕಣ್ರೀ ನೀವು. ತಂದಿದ್ದು ನಾನು ; ಥ್ಯಾಂಕ್ಸ್ ಮಾತ್ರ ಅವನ ತಾಯಿಗೆ...."

"ತಮಾಷೆ ಸಾಕು ಸತೀಶ್..... ಇದು ಸುಮಂತನ ಡಬ್ಬಿಗಳು... ಹೌದೋ ಅಲ್ವೋ......?"

"ಓ....." ಎಲ್ಲರೂ ಅರ್ಥವಿಲ್ಲದೇ ನಕ್ಕಿದ್ದರು. ಆ ರೂಮಿನಲ್ಲಿದ್ದ ಕೆಲವರು ಇತ್ತ ತಿರುಗಿದರು. ಸುಮಂತ ಸ್ನೇಹಿತನ ಭುಜ ತಟ್ಟಿದ.

"ಸ್ಸಾರಿ ಫ್ರೆಂಡ್. ಜೋಕ್ ಹೆವಿಯಾಯ್ತು. ರೊಟ್ಟಿ ನಿಜವಾಗಿಯೂ ಚೆನ್ನಾಗಿದೆ... ನಿಮ್ಮ ತಾಯಿಗೆ ನನ್ನ ಥ್ಯಾಂಕ್ಸ್ ಹೇಳಿಬಿಡು.

"ನನ್ನ ಜೊತೆ ಬಂದು ನೀನೇ ಖುದ್ದಾಗಿ ಹೇಳು...."

* * *

## - - 19 - -

ಮಗ ಆಗ ಈಗ, ಹೇಳಿ ಮಾಡಿಸಿಕೊಂಡು ಹೋಗುತ್ತಿದ್ದ ತಿಂಡಿಗಳು ಜನಪ್ರಿಯವಾದವು. "ಅಂತೂ ನನ್ನ ಕೈಯಿನ ತಿಂಡಿಯನ್ನು ಹೊಗಳೋ ಜನರೂ ಇದಾರೆ ಅಂತಾಯ್ತು" ಶಾಂತ ನುಡಿದಾಗ ರಾಮಸ್ವಾಮಿ ನಕ್ಕು ನುಡಿದ.

"ಎಲ್ಲೋ ಹೋಟೆಲ್ಲಿನ ತಿಂಡಿ ತಿಂದೂ ತಿಂದೂ ಬೇಜಾರಾಗಿರುತ್ತೆ. ಆಗ ಮನೆಯ ತಿಂಡಿ ತೀರ್ಥ ಅಪ್ಯಾಯಮಾನವಾಗಿರುತ್ತೆ"

"ಈ ಸುಮಂತ ಎಷ್ಟೋ ತಿಂಡಿಗಳನ್ನು ಸೇರುಲ್ಲ ಅಂತ ಬಿಟ್ಟೇ ಬಿಟ್ಟಿದ್ದ. ಈಗ ಆ ಸ್ನೇಹಿತರ ನೆವದಲ್ಲಿ ತಿಂತಾನೆ. ಪರವಾಗಿಲ್ಲ."

"ನಿನ್ನ ಮಗ ಪೆದ್ದ. ಆ ಸ್ನೇಹಿತರು ಹೊಗಳಿ ಹೊಗಳಿ ಮಜಾ ಮಾಡ್ತಿದಾರೆ. ಹೌದೋ

ಅಲ್ಲವೋ ನೀನೇ ಕೇಳಿ ನೋಡು."

"ಹಾಗಂತೀರಾ? ಇವತ್ತು ಅವನು ಮನೆಗೆ ಬರಲಿ. ಮೊದಲು ಅದೇ ಮಾತು" ಮಗನ ಬರುವಿಗಾಗಿ ಕಾಯುತ್ತಾ ನಿಂತಿದ್ದಳು. ಸುಮಂತನ ಬೆನ್ನ ಹಿಂದೆ ಕುಳಿತಿದ್ದ ಸತೀಶನನ್ನು ಕಂಡು ಹುಬ್ಬುಗಳು ಸೇರಿಕೊಂಡವು.

"ಈ ನಡುವೆ ಈ ಹುಡುಗ ನಮ್ಮ ಮನೆಗೆ ಬರೋದು ಜಾಸ್ತಿಯಾಗಿದೆ" ಅಂತ ಬೈದುಕೊಂಡಳು.

"ಹೇಗಿದೀರಿ ಆಂಟಿ?" ಸತೀಶನ ಪ್ರಶ್ನೆಗೆ "ಚೆನ್ನಾಗಿದೀನಿ" ಅಂತ ಉತ್ತರಿಸಿದಳು. ಒಳ ಬಂದ ಸುಮಂತ. ಸತೀಶ ವೆರಾಂಡದಲ್ಲಿ ಕುಳಿತ. ರಾಮಸ್ವಾಮಿ ಮನೆಯಲ್ಲಿರಲಿಲ್ಲ. ವಾಕಿಂಗ್ ಹೋಗಿದ್ದ.

ಶಾಂತ ಮುಗುಳ್ನಗೆಯ ಮುಖವಾಡ ಧರಿಸಿ, ಇಬ್ಬರಿಗೂ, ಕಾಫಿಯನ್ನು ತಂದುಕೊಟ್ಟಳು. ಜತೆಗೆ ಚಕ್ಕುಲಿಯನ್ನು ತಂದಿತ್ತಳು. ಗರಿ ಗರಿಯಾಗಿದ್ದ ಹೊಂಬಣ್ಣದ ಚಕ್ಕುಲಿ ಕೆಲವೇ ಕ್ಷಣಗಳಲ್ಲಿ ಮುಗಿಯಿತು.

"ಆಂಟೀ ಎಷ್ಟು ಚೆನ್ನಾಗಿ ತಿಂಡಿ ಮಾಡ್ತೀರಿ? ನೀವೇಕೆ ಒಂದು ಕುಕಿಂಗ್ ಕ್ಲಾಸ್ ಮಾಡಬಾರದು?" ಸತೀಶ ನುಡಿದಾಗ ಶಾಂತ ನಕ್ಕಳು.

"ನನಗೆ ಅದಕ್ಕೆ ಬಿಡುವೆಲ್ಲಿದೆ? ಅಲ್ಲದೇ ನನಗೆ ಮಹಾ ಬರೋದು ಏನು? ನಮ್ಮ ತಾತನ ಕಾಲದ ತಿಂಡಿಗಳು. ಈಗೇನು ಅಂಗಡಿಗಳಲ್ಲಿ ಬೇಕಾದಷ್ಟು ಹೊಸ ಹೊಸ ರುಚಿಯ ತಿಂಡಿಗಳು ಸಿಗುತ್ತವಂತೆ."

"ಸಿಗುತ್ತವೆ. ಆದರೆ, ಆ ರುಚಿಯೇ ಬೇರೆ, ಈ ರುಚಿಯೇ ಬೇರೆ" ಮತ್ತೆ ಹೊಗಳಿದ. ಅವಳ ಮುಖ ಮೊರದಗಲವಾಯಿತು.

"ನಿಮ್ಮ ಮನೆಯಲ್ಲಿ ಯಾರ್‍ಯಾರು ಇದೀರಿ?" ಸುಮ್ಮನೆ ಕೇಳಿದಳು.

"ಊರ್ನಲ್ಲಿ ನಮ್ಮ ತಂದೆ ತಾಯಿ ಇದಾರೆ. ಇಲ್ಲಿ ನಾನು, ನನ್ನ ಅಣ್ಣ ಅತ್ತಿಗೆಯ ಜತೆಯಲ್ಲಿದೀನಿ"

"ಓ... ಅದಕ್ಕೇ ಹೀಗೆ ಬಾಯಿ ಬಾಯಿ ಬಿಡುತ್ತದೆ" ಅಂತ ತನ್ನಲ್ಲೇ ಅಂದು ಕೊಂಡಳು. ತಿಂಡಿಯ ನಂತರ ಇಬ್ಬರೂ ಮತ್ತೆ ಹೊರಟರು. ಮೂರನೆಯ ಮನೆಯ ಕಡೆ ಕೈ ಮಾಡಿ ಹೇಳಿದ.

"ಇದೇ...... ತಾರಾ...... ಸ್ಮಿತಾ ಇರೋ ಪೇಯಿಂಗ್ ಗೆಸ್ಟ್ ಮನೆ...." ಸತೀಶ ಸುಮ್ಮನೇ ತಲೆಯಾಡಿಸಿದ.

ಒಂದು ವಾರದ ರಜದ ಮೇಲೆ ಹೋಗಿದ್ದ ಸ್ಮಿತಾ ಹತ್ತು ಹನ್ನೆರಡು ದಿನಗಳು ಕಳೆದರೂ ಬರದಿದ್ದಾಗ ಸತೀಶ ತಾರಾಳನ್ನು ಪ್ರಶ್ನಿಸಿದ.

"ಏನ್ರೀ ಮಿಸ್..... ನಿಮ್ಮ ಫ್ರೆಂಡು ಬರಲೇ ಇಲ್ಲ. ಹಾಗೇ ನಾಪತ್ತೆಯಾಗಿ ಬಿಟ್ಟಿದಾರೆ...."

"ಅವಳು ಪೂನಾದಲ್ಲಿ ಕೆಲಸಕ್ಕೆ ಪ್ರಯತ್ನ ಮಾಡ್ತಿದಾಳಂತೆ..... ಅವಳ ಎಂಗೇಜ್‌ಮೆಂಟ್ ಆಯ್ತಲ್ಲ....."

"ಹೌದಾ? ನಮಗೆ ಹೇಳಲೇ ಇಲ್ಲ..... ಕರೀಲೇ ಇಲ್ಲ"

"ಅವಳ ಊರ್ನಲ್ಲಿ ಆಯಿತು. ನಾನೂ ಸಹ ಹೋಗಲಿಲ್ಲ. ಅಲ್ಲಿ ಕೆಲಸ ಸಿಕ್ಕಿದ ಮೇಲೆ, ಇಲ್ಲಿ ಬಂದು ರಿಸೈನ್ ಮಾಡ್ತಾಳಂತೆ."

"ಇಲ್ಲದಿದ್ದರೆ ಇಲ್ಲೇ ಬಂದು ಮತ್ತೆ ರಿಪೋರ್ಟ್ ಮಾಡ್ಕೋತಾರಂತಾ. ಕೇಳಿದ್ಯಾ

ಸುಮಂತಾ.... ಹುಡುಗೀರು ಎಷ್ಟು ಜಾಣರು"

"ಇದರಲ್ಲಿ ಜಾಣತನ ಏನು ಬಂತು? ಹುಡುಗೀರು ಕೆಲಸದಲ್ಲಿರೋದು ತಪ್ಪಾ?"

"ಹುಡುಗೀರು ಮದುವೆಯಾದ ಮೇಲೆ ಯಾಕೆ ಕೆಲಸ ಮಾಡಬೇಕೂಂತ....."

"ಅದರಿಂದ ನಿಮಗೇನು ನಷ್ಟ ಹೇಳಿ. ಅವಳ ವುಡ್‌ಬೀಗೆ, ಸ್ಮಿತಾ ಕೆಲಸದಲ್ಲಿರಲಿ ಅಂತ ಆಸೆ....."

"ಸುಮ್ಮನಿರೋ ಸತೀಶ. ಅವರು ಹೇಳೋ ಹಾಗೆ ನಿನಗೇನು ಕಷ್ಟ ಅಂತ?"

"ನನಗೆ ಕಷ್ಟವೂ ಇಲ್ಲ ; ನಷ್ಟವೂ ಇಲ್ಲ. ಮದುವೆಯಾದ ಮೇಲೆ ಮನೆ ಕೆಲಸವೇ ಸಾಕಷ್ಟು ಇರುತ್ತೆ..... ಅದಕ್ಕೇ ಹೇಳಿದೆ"

"ಅದನ್ನೆಲ್ಲ ಅವರ ಗಂಡ ನೋಡಿಕೊಳ್ತಾರೆ ಬಿಡು.... ನನಗೆ ನಿನಗೆ ಯಾಕೆ?"

"ಅಂತೂ ನೀವು ಒಂಟಿಯಾಗಿ ಬಿಟ್ಟಿರಿ? ನಿಮ್ಮ ಪಯಣ ಯಾವಾಗ?" ಅವಳಿಗೆ ತಕ್ಷಣಕ್ಕೆ ಅರ್ಥವಾಗಲಿಲ್ಲ. ಸುಮಂತ ಅವಳನ್ನೇ ನೋಡುತ್ತಿದ್ದ. ಅವನ ಮಾತಿನ ಅರ್ಥ ತಿಳಿಯುತ್ತಲೇ ಕೆಂಪಾಗಿದ್ದಳು.

"ಈ ನಾಚಿಕೆಯ ರಂಗು ಅದೆಷ್ಟು ಸೊಗಸು?" ಸುಮಂತನ ಯೋಚನಾ ಲಹರಿಗೆ ಸತೀಶ ಕಲ್ಲು ಹೊಡೆದ.

"ನಿನ್ನನ್ನಲ್ಲವೋ ಕೇಳಿದ್ದು ಇವರನ್ನ. ಅದಕ್ಕೆ ನಿನಗೇಕೆ ಅಷ್ಟು ಚಿಂತೆ?"

"ಸುಮ್ಮನಿರೋ ಏನೇನೋ ಆಡಬೇಡ ಅಂತ ಹೇಳಿದರೂ, ಆ ಮಾತುಗಳು ಮುದಗೊಳಿಸಿದ್ದವು.

ಸ್ನೇಹಿತನ ಎದುರಿಗೆ ಕುಳಿತ ಸತೀಶ ತನ್ನ ಸಲಹಾ ಬುಟ್ಟಿಯ ಮುಚ್ಚಳವನ್ನು ತೆರೆದ.

"ತಾರಾ..... ದಿನಾ ಆಫೀಸಿಗೆ ಬಸ್ನಲ್ಲಿ ಬರ್ತಾರೆ ಅಲ್ವಾ?..... ನೀನೇ ಯಾಕೆ ಕರೆದುಕೊಂಡು ಬರಬಾರದು?" ಸುಮಂತ ಬೆರಗಿನಿಂದ ನೋಡಿದ.

" ನಾನಾ? ನಾನ್ಯಾಕೆ? ನೀನೇಕೆ ಕರೆದುಕೊಂಡು ಬರಬಾರದು?"

"ನಾನು ಅವರ ಪಕ್ಕದ ಮನೆಯಲ್ಲಿ ಇದ್ದಿದ್ದರೆ ಖಂಡಿತಾ ಹಾಗೇ ಮಾಡುತ್ತಿದ್ದೆ. ಯಾರೂ ಹೇಳಿಕೊಡಬೇಕಾಗಿರಲಿಲ್ಲ.

ಪಕ್ಕದ ಮನೆಯಲ್ಲಿ ಇದ್ದಾಕ್ಷಣ..... ಅವರ ಪಾಡಿಗೆ ಅವರು ಬಸ್ನಲ್ಲಿ ಓಡಾಡಲಿ ಬಿಡು..... ಎಷ್ಟೋ ಜನ ಬಸ್ನಲ್ಲಿ ತಿರುಗ್ತಾರೆ. ಅವರ ಹಾಗೇ ಇವರು."

"ಅವರ ಹಾಗೇ ಇವರು.... ಅಲ್ಲ. ಒಂದೇ ಬೀದಿಯಿಂದ, ಒಂದೇ ಆಫೀಸಿಗೆ ಬರ್ತೀರಿ. ಒಟ್ಟಿಗೇ ಬಂದರೆ ಏನೀಗ?"

"ಅಂದ್ರೇ ನಾನೂ ಬಸ್ನಲ್ಲಿ ಬರಬೇಕಾ....."

"ತಮಾಷೆ ಮಾಡ್ತಿಲ್ಲ ಸುಮಂತ. ಬೈಕ್‌ನಲ್ಲಿ ಬುರ್ ಅಂತ ಬರ್ತೀಯ. ಅವರು ಬಸ್ಸಿಗೆ ಕಾದು ನಿಂತು ಸುಸ್ತಾಗಿ ನಿಂತುಕೊಂಡು ಬರ್ತಾರೆ ಪಾಪಾ"

"ಅಷ್ಟು ನಿನಗೆ ಅಯ್ಯೋ ಪಾಪಾ ಅಂತನ್ನಿಸಿದರೆ.... ನೀನೇ ಈ ಕೆಲಸ ಮಾಡು. ನಮ್ಮ ಬೀದಿಯಲ್ಲಿ ಯಾವುದಾದ್ರೂ ಮನೆ ಖಾಲಿ ಇದ್ದರೆ ಹೇಳ್ತೀನಿ"

"ನನ್ನ ಹತ್ತಿರ ಬೈಕ್ ಇಲ್ಲವಲ್ಲ...."

"ಒಂದು ತಗೋ..... ಅದೇನು ಕಷ್ಟ......?"

"ಕಷ್ಟವೇನಿಲ್ಲ. ಆದರೆ ಆ ಕೆಲಸ ನಾನು ಮಾಡುಕ್ಕಾಗುಲ್ಲ"

"ನಿನ್ನ ಕೈಲಿ ಆಗದಿದ್ದ ಮೇಲೆ ನನಗೇಕೆ ಸಲಹೆ ಕೊಡ್ತಿದೀಯ...?"

"ಒಳ್ಳೇ ಸಲಹೆ ಕೊಟ್ಟರೆ ರೇಗ್ತಿದೀಯಲ್ಲ. ಯಾಕೆ ಹುಡುಗೀನ ನಿನ್ನ ಹಿಂದೆ

ಕೂರಿಸಿಕೊಂಡು ಬರೋಕೆ ನಿಮ್ಮಮ್ಮನ ಪರ್ಮಿಷನ್ ಬೇಕಾ?"

"ಅದೇನೋ ಗೊತ್ತಿಲ್ಲ. ಅವಳ ಅಮ್ಮಂಗೆ ಗೊತ್ತಾದ್ರೆ ಮಾತ್ರ..... ಕಂಬಿ ಎಣಿಸೋನು ನಾನು......"

"ಒಬ್ಬ ಹುಡುಗ ಹುಡುಗಿ ಬೈಕ್‌ನಲ್ಲಿ ಒಟ್ಟಿಗೇ ಕುಳಿತ ಮಾತ್ರಕ್ಕೆ ಅದು ಅಪರಾಧವಲ್ಲ..... ನನಗೆ ಈ ಛಾನ್ಸ್ ಸಿಕ್ಕಿದ್ದರೆ ಖಂಡಿತಾ ಬಿಡುತ್ತಿರಲಿಲ್ಲ"

ಸುಮಂತ ಏನನ್ನಾದರೂ ಕೇಳುವ ಮೊದಲೇ ಅಲ್ಲಿಂದ ಎದ್ದು ಹೋಗಿದ್ದ. ಆನಂತರ ಸುಮಂತ ತಾರಾಳನ್ನು ಮತ್ತೆ ಮತ್ತೆ ನೋಡಿದ್ದ.

ಇವಳಿಗೂ, ಅವನಿಗೂ ಏನು ಸಂಬಂಧ? ನನಗೇಕೆ ಈ ಸಲಹೆಯನ್ನು ಕೊಟ್ಟ? ಹುಡುಗಿಯರ ಬಗ್ಗೆ ವಿಪರೀತ ತಲೆ ಕೆಡಿಸಿಕೊಳ್ಳುತ್ತಾನೆ ಅಂತ ತಳ್ಳಿ ಹಾಕಿದರೂ, ಮತ್ತೆ ಮತ್ತೆ ಆ ಮಾತುಗಳು ಗುಂಯ್‌ಗುಟ್ಟುತ್ತಿದ್ದವು.

"ತನ್ನ ಮನೆಯ ಬಾಗಿಲಿಗೆ ಬಂದು ನಿಂತಿದ್ದಳು ಎನ್ನೋ ಕಾರಣದಿಂದ ಅವಳೊಡನೆ ಮಾತನಾಡಿದ್ದ. ಮೊಟ್ಟ ಮೊದಲ ಬಾರಿಗೆ ಹುಡುಗಿಯ ಬಗ್ಗೆ ಕಾರಣವಿಲ್ಲದೇ ಅರ್ಥವಿಲ್ಲದೇ ಕೆಲವು ದಿನ ತಲೆ ಕೆಡಿಸಿಕೊಂಡಿದ್ದ. ಅವಳೇ ಇವಳು ಅಂತ ತಿಳಿದಾಗ, ಆಶ್ಚರ್ಯವಾಗಿತ್ತು ಅಷ್ಟೇ. ತನ್ನ ಮನೆಯ ಬೀದಿಯಲ್ಲೇ ಅವಳು ವಾಸವಾಗಿದಾಳೆಂದು ತಿಳಿದರೂ, ಸತೀಶನಂತೆ ತಲೆ ಕೆಡಿಸಿಕೊಂಡಿರಲಿಲ್ಲ. ಈಗ ಅವನ ಮಾತುಗಳಿಂದ ಅವಳ ಬಗ್ಗೆ ಪದೇ ಪದೇ ಯೋಚಿಸುವಂತಾಗಿತ್ತು.

ಅಕ್ಕಪಕ್ಕದ ಮನೆಯಲ್ಲಿ ಎಷ್ಟೋ ಜನ ಹುಡುಗಿಯರಿರಬಹುದು. ಅವರುಗಳನ್ನು ಎಂದೂ ಸರಿಯಾಗಿ ನೋಡಿಲ್ಲ. ಏನೋ ನೋಡಿದ್ದರೂ, ಅರ್ಥವಿಲ್ಲದ ಆಕರ್ಷಣೆ.... ಆಮೇಲೆ ಮರತೇ ಹೋಗುತ್ತಿತ್ತು. ಈಗ ಇವಳು ನನ್ನ ಸಹೋದ್ಯೋಗಿಯಾಗಿದ್ದಾಳೆ ಎಂಬ ಕಾರಣಕ್ಕೆ ನಾನು ಅವಳಿಗೆ ದಿನಾ ಲಿಫ್ಟ್ ಕೊಡಬೇಕೆ? ಇದನ್ನೆಲ್ಲ ಹೇಳೋಕೆ ಇವನ್ಯಾರು? ಇವನ ಮಾತನ್ನೇಕೆ ನಾನು ಕೇಳಬೇಕು? ತಲೆ ಕೊಡವಿಕೊಂಡ.

ಎದುರಿಗೆ ತಾರಾ ನಿಂತಿದ್ದಳು. "ಏನ್ರೀ.... ಸತೀಶ ನಿಮ್ಮನ್ನು ಇಲ್ಲಿಗೆ ಕಳಿಸಿದ್ನಾ?" ಸಿಡುಕಿನಿಂದ ಕೇಳಿದ್ದ. ಅವಳು ಕೋಪದಿಂದ ಕೆಂಪಾಗಿ, ಸರ್ರನೆ ತನ್ನ ಜಾಗಕ್ಕೆ ಬಂದು ಕುಳಿತುಬಿಟ್ಟಳು. ಕೆಲವೇ ನಿಮಿಷಗಳಲ್ಲಿ ಸಮಾಧಾನಗೊಂಡ ಸುಮಂತ, ತಾರಾಳಿಗೆ ಹೇಳಿ ಕಳಿಸಿದ. ಮತ್ತೆ ಬಂದು ನಿಂತಳು. ಇವನು ನೋಡಿದ. ಅವಳು ಅಳುತ್ತಿದ್ದಾಳೆಂದು, ಅವಳ ಕಣ್ಣುಗಳೇ ಹೇಳಿದವು.

"ಸಾರಿ..... ಸಾರಿ....... ನೀವು ಏನೋ ಹೇಳುಕ್ಕೆ ಅಂತ ಬಂದಿದ್ರಿ...... ಹಾಗೇ ಹೊರಟು ಹೋದ್ರೀ."

"ಏನಿಲ್ಲ..... ಸತೀಶನ ಅಣ್ಣ ಫೋನು ಮಾಡಿದ್ದರು. ಅವರು ಬೇಗನೇ ಹೊರಟು ಬಿಟ್ರು. ನಿಮಗೆ ಹೇಳಿ ಬಿಡುವಂತೆ ಹೇಳಿದರು" ಅಷ್ಟನ್ನು ಅವಳು ಹೇಳುವಷ್ಟರಲ್ಲಿ ಬೆವತು ಹೋಗಿದ್ದಳು.

"ನಿಮಗೇನಾಯ್ತು ರೀ. ಯಾಕೆ ಬೆವರುತ್ತಿದೀರಿ?"

"ಏನಿಲ್ಲ. ನಾನು ಹೋಗಲಾ?"

"ಹುಂ. ಸಾಯಂಕಾಲ ಹೋಗೋಕೆ ಮುಂಚೆ, ನನಗೆ ಬಂದು ಹೇಳಿ... ಸ್ವಲ್ಪ ಕೆಲಸವಿದೆ" ಹುಂ ಎನ್ನುವಂತೆ ತಲೆ ಆಡಿಸಿ ಹೊರಟು ಹೋದಳು.

ಹೊರಡುವ ಮುಂಚೆ ಅವಳು ಮರೆಯದೇ ಅವನು ಇದ್ದೆಡೆಗೆ ಬಂದಳು. "ಕೆಲವು ಫೈಲ್ಸ್‌ಗಳಲ್ಲಿ ಸೀನಿಯರ್ ಆಫೀಸರ್‌ಗಳ ಸಿಗ್ನೇಚರ್ಸೇ ಇಲ್ಲ. ಸರಿಯಾಗಿ ಚೆಕ್

ಮಾಡಬೇಡ್ವಾ? ನಾಳೆ ಬೆಳಿಗ್ಗೆ ಸ್ವಲ್ಪ ಬೇಗ ಬಂದು ನೋಡೋಕಾಗುತ್ತಾ?"

"ಹುಂ. ನೋಡ್ತೀನಿ" ಸಣ್ಣ ದನಿಯಲ್ಲಿ ನುಡಿದಳು. ತಲೆ ಎತ್ತಿ ನೋಡಿದ. ಪೆಚ್ಚು ಮುಖ ಹಾಕಿಕೊಂಡು ನಿಂತಿದ್ದಳು. ಸದಾ ನಗುನಗುತ್ತಾ ಮಾತನಾಡುವ ಇವಳನ್ನು ತಾನು ಹೆದರಿಸಿ ಬಿಟ್ಟಿದ್ದೇನೆಂದು ಅನ್ನಿಸಿತ್ತು.

"ಯಾಕ್ರೀ ಹುಶಾರಿಲ್ವಾ? ನಾನು ಮನೇ ತನಕ ಡ್ರಾಪ್ ಕೊಡ್ತೀನಿ... ಇರಿ"

"ಪರವಾಗಿಲ್ಲ ಸಾರ್..... ನಾನು ಬಸ್ನಲ್ಲಿ ಹೋಗ್ತೀನಿ"

"ನಂಗೊತ್ತು ನೀವು ದಿನಾ ಬಸ್ನಲ್ಲೇ ಹೋಗ್ತೀರಿ ಅಂತ. ಬರೋದಾದ್ರೆ ಬನ್ನಿ" ಅವಳು ಪೇಚಿಗೆ ಸಿಕ್ಕಿಬಿದ್ದಳು.

ಬೇಡ ಪರವಾಗಿಲ್ಲ ಅನ್ನುವುದೋ, ಹುಂ ಬರ್ತೀನಿ ಅಂತ ಅನ್ನುವುದೋ ತಿಳಿಯದೇ ಪೇಚಾಡಿದಳು.

"ಯಾಕ್ರೀ ನನ್ನ ಜೊತೆ ಬರೋಕೆ ಹೆದರಿಕೇನಾ?"

"ಹಾಗೇನಿಲ್ಲ.... ಸಾರ್....."

"ಹಾಗಾದ್ರೆ ಸುಮ್ಮನೇ ಬನ್ನಿ....."

"ಆಂಟೀ....."

"ಆಂಟಿ ಏನಂದುಕೊಳ್ತಾರೆ ಅಂತ ಭಯ ಏಕೆ? ನಿಮ್ಮ ಮನೆ ಹತ್ತಿರ ಇಳಿಸ್ತೀನಿ ಸರೀನಾ?"

"ಬೇಡ. ಬೇಡ. ಬಸ್‌ಸ್ಟಾಪ್‌ನಲ್ಲಿ ಇಳಿಸಿ ಬಿಡಿ....."

"ಓ... ಕೇ... ಯಾರಿಗೂ ಗೊತ್ತಾಗಬಾರದು ಅಲ್ವಾ?...."

"ಹಾಗಲ್ಲ ಸಾರ್....."

"ನನಗೂ ಗೊತ್ತು ರೀ..... ನಿಮಗೇಕೆ ಸಂಕಟ? ನಾಳೆಯಿಂದ ಬಸ್ನಲ್ಲೇ ಹೋಗೋರಂತೆ. ಇವತ್ತು ಸತೀಶ ಇಲ್ಲವಲ್ಲ ಅದಕ್ಕೇ ಕೇಳಿದೆ...... "

"ಹೂಂ ಸಾರ್......." ಆಫೀಸಿನ ಸಮಯ ಮುಗಿದಿತ್ತು. ಎಲ್ಲರೂ ಹೊರಬಂದರು. ತಾರಾ, ಸುಮಂತನ ಬೈಕ್‌ನ ಹಿಂದಿನ ಸೀಟನ್ನೇರಿದಳು. ಅವಳನ್ನು ಮನೆಯ ಸಮೀಪದ ಬಸ್‌ಸ್ಟಾಪ್‌ನಲ್ಲಿ ಇಳಿಸಿದ. ಅವಳು ಥ್ಯಾಂಕ್‌ಯೂ ಸಾರ್ ಎಂದಳು.

"ಪರವಾಗಿಲ್ಲ ಥ್ಯಾಂಕ್ಸ್ ಏಕೆ? ತುಂಬಾ ಹೆದರಿ ಬಿಟ್ಟಿದೀರಲ್ಲ.... ನಮ್ಮ ಮನೆಗೆ ಬನ್ನಿ. ಅಮ್ಮನಿಗೆ ನಿಮ್ಮ ಪರಿಚಯ ಮಾಡಿಕೊಡ್ತೀನಿ" ಎನ್ನುತ್ತಾ ಬಲವಂತವಾಗಿ ಅವಳನ್ನು ತನ್ನ ಮನೆಗೆ ಕರೆತಂದ. ಇಬ್ಬರೂ ನಡದೇ ಬಂದರು. ತಾಯಿ ಮನೆಯಲ್ಲಿರಲಿಲ್ಲ. ತಂದೆ ಇದ್ದುದ್ದನ್ನು ಕಂಡ.

ತಾರಾಳನ್ನು ತಂದೆಗೆ ಪರಿಚಯ ಮಾಡಿಕೊಟ್ಟ. "ಇವರು ನನ್ನ ಕಲೀಗ್ ತಾರಾ ಅಂತ.... ಇವರು ನನ್ನ ತಂದೆ."

"ನಮಸ್ಕಾರ ಅಂಕಲ್......"

"ನಮಸ್ಕಾರ ಕೂತ್ಕೋಮ್ಮಾ......"

ಒಳಗೆಲ್ಲಾ ನೋಡಿ ಬಂದ ಸುಮಂತ ತಂದೆಯನ್ನು ಕೇಳಿದ. "ಅಮ್ಮಾ ಮನೇಲಿಲ್ವಾ?"

"ಇಲ್ಲೇ ಎಲ್ಲೋ ಹೊರಗೆ ಹೋಗಿದಾಳೆ. ತಿಂಡಿ ಕಾಫಿ ಕೊಡ್ಲಾ?"

"ಹುಂ. ಕೊಡಿ...." ಎಂದು ಹೇಳಿ ತಾನು ಕುಳಿತ. "ಅಮ್ಮ ಇಲ್ಲ ಎಲ್ಲೋ

ಹೋಗಿದಾರೆ"

"ಅವತ್ತು ನಾನು ಬಂದಾಗಲೂ ನಿಮ್ಮ ತಾಯಿ ಇರಲಿಲ್ಲ. ನಾನು ಅವರನ್ನು ನೋಡಿಯೇ ಇಲ್ಲ"

"ರಾಧಮ್ಮ ನಿಮಗೇನಾಗಬೇಕು?"

"ಏನೋ ದೂರದ ಸಂಬಂಧ? ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆ ಅಂತಂದರೆ ನಮಗೆ ಹೇಳಿ ಕಳಿಸ್ತಾರೆ. ನಾವು ಬರುತ್ತೇವೆ"

"ನಾವುಗಳು ಅಂದರೆ...."

"ತಾಯಿ ತಂದೆ, ಮಾವ, ಅತ್ತೆ... ನನ್ನ ಅಣ್ಣ, ನನ್ನ ಕಸಿನ್.... ಎಲ್ಲಾ ಬರುತ್ತೀವಿ. ನಮ್ಮೂರು ಇಲ್ಲಿಂದ ಮೂವತ್ತು ಮೈಲಿ ದೂರ ಇದೆ. ದಿನಾ ಓಡಾಡೋದು ಕಷ್ಟ ಅಂತ ನಾನು ಪೇಯಿಂಗ್ ಗೆಸ್ಟ್ ಆಗಿದೀನಿ"

"ಅವತ್ತು ಕರೆಯೋಕೆ ಅಂತ ಬಂದಿದ್ರಲ್ಲ.... ನನ್ನ ಮುಖ ನಿಮಗೆ ನೆನಪಿನಲ್ಲಿತ್ತಾ? ಅದು ನಾನೇ ಅಂತ ಹೇಗೆ ಹೇಳಿದ್ರಿ....?"

"ನೀವು ಅದೇ ರಸ್ತೆಯಲ್ಲಿ ಓಡಾಡುವಾಗ ಒಂದೆರಡು ಸಾರಿ ನೋಡಿದ್ದೆ. ಆದರೆ ನೀವು ಇದೇ ಕಂಪೆನಿಯಲ್ಲಿ ಕೆಲಸ ಮಾಡ್ತೀರಿ ಅಂತ ತಿಳಿದಿರಲಿಲ್ಲ."

ತಂದೆ, ಕಾಫಿ ಹಾಗೂ ಕೋಡುಬಳೆಯನ್ನು ತಂದು ಇಟ್ಟಾಗ, ತಾರಾ ಸಂಕೋಚಗೊಂಡಳು.

"ಇದೆಲ್ಲಾ ಯಾಕೆ ಅಂಕಲ್?"

"ಇರಲಿ ತಿನ್ನಮ್ಮ..... ನೀನು ಇರೋದು ಎಲ್ಲಿ?"

"ಇಲ್ಲೇ..... ರಾಧಮ್ಮನ ಮನೆಯಲ್ಲಿ ಪೇಯಿಂಗ್ ಗೆಸ್ಟ್ ಆಗಿದಾರಂತೆ."

"ಹೌದೇನಮ್ಮ ಗೊತ್ತೇ ಇರಲಿಲ್ಲ"

"ನನಗೂ ಗೊತ್ತಿರಲಿಲ್ಲ....." ಸುಮಂತ ನುಡಿದಾಗ, ಆತ ನಕ್ಕ. ಅಕ್ಕಪಕ್ಕದ ಮನೆಯಲ್ಲಿ ಯಾರು ಯಾರು ಇದೀವಿ ಅಂತ ಒಬ್ಬರಿಗೊಬ್ಬರಿಗೆ ತಿಳಿದೇ ಇರುಲ್ಲ. ನನಗೂ ಈ ಹುಡುಗಿಯನ್ನ ನೋಡಿದ ನೆನಪೇ ಇಲ್ಲ"

"ನಾನು ಮಾತ್ರ ನಿಮ್ಮನ್ನು ನೋಡಿದೀನಿ" ಅವಳು ನುಡಿದಾಗ ಸುಮಂತ ಹುಬ್ಬೇರಿಸಿದ. ಚತುರೆ...... ಒಳಗೇ ಕುಳಿತು ಎಲ್ಲರನ್ನು ನೋಡಿಕೊಂಡಿದಾಳೆ ಅಂತಂದುಕೊಂಡ.

"ನಾನಿನ್ನು ಬರ್ತೀನಿ. ಹೊತ್ತಾಗುತ್ತೆ" ಅವಳು ಹೊರಟು ಹೋದಳು. ಯಾವುದೋ ಚಿಂತೆಯಲ್ಲಿದ್ದವನನ್ನು ರಾಮಸ್ವಾಮಿ ಎಚ್ಚರಿಸಿದ.

"ನಾನು ವಾಕಿಂಗ್ ಹೋಗ್ಲೇನಯ್ಯಾ.... ನೀನು ಬಂದಾಯ್ತಲ್ಲ"

"ಹೂಂ. ಹೋಗ್ಬನ್ನಿ....."

"ಅಂದ್ಹಾಗೇ ಆ ಹುಡುಗಿ ಯಾರು? ನೋಡೋಕೆ ಚೆನ್ನಾಗಿದಾಳೆ ಅಲ್ವಾ?"

"ಹೇಳಿದ್ನಲ್ಲ, ಕಲೀಗ್ ಅಂತ....."

"ಸ್ವಭಾವ, ಗುಣ, ನಡತೆ...... ಹೇಗೆ ಅಂತ"

"ಅದೆಲ್ಲಾ ಹೇಗೆ ತಿಳಿಯುತ್ತಪ್ಪಾ.... ನನ್ನನ್ಯಾಕೆ ಕೇಳ್ತಿದೀರಿ...."

"ಹುಡುಗಿ ಚೆನ್ನಾಗಿದಾಳೆ. ರಾಧಮ್ಮನ ಮನೇಲಿದಾಳೆ ಅಂತೀಯ.... ನಿನಗೆ ಒಪ್ಪಿಗೆ ಆದರೆ, ನಿನ್ನ ಅಮ್ಮನಿಗೆ ವಿಚಾರಿಸೋಕೆ ಹೇಳ್ತೀನಿ"

"ಬೇಡ...... ಬೇಡ..... ಈಗಲೇ ಬೇಡ.... ಮದುವೆಗೆ ನನಗೆ ಅವಸರವಿಲ್ಲ....

ಈಗಲೆ ಅಮ್ಮನಿಗೆ ಏನೂ ಹೇಳಬೇಡಿ....."
"ಯಾಕೆ? ಅಮ್ಮನಿಗೆ ಹೆದರ್ತೀಯಾ?" ರಾಮಸ್ವಾಮಿ ನಕ್ಕ.
"ಹೆದರಿಕೆ ಅಂತಲ್ಲ..... ಅಮ್ಮನ ಎದುರಿಗೆ ಮದುವೆ ಮಾತನ್ನೆತ್ತಿದರೆ, ಅವಳಮ್ಮನ ಮನೆ ಕಡೆ ಹುಡುಗೀನ ತಂದು ತೋರಿಸಿ ಮದುವೆ ಮಾಡ್ಕೋ ಅಂತ ಅಂತಾಳೆ..... ಅದಕ್ಕೆ ಆಸ್ಪದ ಕೊಡೋದು ಬೇಡಾಂತ"
"ಪರವಾಗಿಲ್ಲ. ನೀನೂ ಜಾಣ ಕಣಯ್ಯಾ..... ನಿನ್ನ ಅಮ್ಮನ್ನ ಚೆನ್ನಾಗಿ ಅರ್ಥ ಮಾಡಿಕೊಂಡಿದೀಯ...... ನಿಮ್ಮಮ್ಮನ ಊರಿನ ಹೆಣ್ಣನ್ನು, ನಾನೊಬ್ಬ ಸಾಕು ಅಲ್ವಾ ಮದುವೆಯಾದದ್ದು......." ತಂದೆಯ ಮಾತಿಗೆ ಮಗ ನಕ್ಕ. ರಾಮಸ್ವಾಮಿ ಅತ್ತ ಹೊರಟ. ಸುಮಂತ ದಿನ ಪತ್ರಿಕೆಯನ್ನು ಹಿಡಿದು ಕೂತ. ಪೇಪರಿನ ಮುಖ್ಯಾಂಶಗಳ ಮೇಲೆ ಕಣ್ಣಾಡುತ್ತಿದ್ದರೂ, ತಂದೆ ಆಡಿದ್ದ ಮಾತನ್ನು ಮನಸ್ಸು ಮೆಲುಕು ಹಾಕುತ್ತಿತ್ತು.
"ತಾನು ಇದುವರೆಗೂ ಯಾವ ಹುಡುಗಿಯ ಬಗ್ಗೆ ಚಿಂತಿಸಿಯೇ ಇಲ್ಲ. ಇವಳನ್ನೇಕೆ ಪ್ರೀತಿಸಬಾರದು?" ಇದ್ದಕ್ಕಿದ್ದಂತೆ ಬಂದ ತನ್ನ ಆಲೋಚನೆಗೆ ಹೆಮ್ಮೆ ಎನಿಸಿತ್ತು. ಮೊದಲು ಅವಳ ಮನಸ್ಸಿನಲ್ಲಿ ಏನಿದೆ ಅಂತ ತಿಳಿದುಕೊಳ್ಳಬೇಕಾದ್ದು ಮುಖ್ಯ ಅಂತಂದುಕೊಂಡ. ಇದರ ಬಗ್ಗೆ ಸತೀಶನ ಸಲಹೆ, ಸಹಾಯ ಕೇಳಬಹುದೇನೋ ಅಂತಂದುಕೊಂಡರೂ, ಇದು ನನ್ನ ಸ್ವಂತ ವಿಷಯ. ಇದರಲ್ಲಿ ಸತೀಶನನ್ನೇನು ಕೇಳುವುದು ಎಂದೆನಿಸಿತು. ಮಾರನೇ ಬೆಳಿಗ್ಗೆ ತಾರಾ ಮನೆಯಿಂದ ಹೊರಡುವ ಸಮಯಕ್ಕೆ ತಾನು ಹೊರಡಬೇಕು ಎಂದುಕೊಂಡ.
"ಏನೋ ಸೋಮು.... ನೀನೇ ಎದ್ದು ಬಿಟ್ಟೆಯಾ?" ಶಾಂತಂಗೆ ಆಶ್ಚರ್ಯ. ಅಲಾರಾಂ ಹೊಡೆದ ಸ್ವಲ್ಪ ಹೊತ್ನಲ್ಲೇ ಎದ್ದು ಬಿಟ್ಟನಲ್ಲಾ ಅಂತ.
"ಹೂಂನಮ್ಮ ಆಫೀಸಿಗೆ ಸ್ವಲ್ಪ ಬೇಗ ಹೋಗಬೇಕು"
"ಕೊಡೋ ಸಂಬಳಕ್ಕೆ ಅದೆಷ್ಟು ಕೆಲಸ ತೆಗಿತಾರೋ ನಿಮ್ಮ ಆಫೀಸಿನವರು....." ಆಕ್ಷೇಪಿಸಿದಳು.
"ಹಾಗೆನ್ನಬೇಡಮ್ಮಾ..... ಅವರು ಕೊಡೋ ಸಂಬಳಕ್ಕೆ ನಾವು ಮಾಡೋ ಕೆಲಸ ಕಡಿಮೇನೇ...... ಇವತ್ತು ತಿಂಡಿ ಬೇಡ. ಹೊರಗಡೇನೇ ತಿಂತೀನಿ."
"ನಿನಗೆ ಇಷ್ಟ ಅಂತ ಅವರೇಕಾಳಿನ ಉಪ್ಪಿಟ್ಟು ಮಾಡ್ತಾ ಇದೀನಲ್ಲೋ"
"ಡಬ್ಬಿಗೆ ಹಾಕಿಕೊಡು. ಮಧ್ಯಾಹ್ನ ತಿಂತೀನಿ...." ಸ್ನಾನ ಮಾಡಿ, ಸಿದ್ಧನಾಗಿ ಬಸ್‌ಸ್ಟಾಪ್ ಬಳಿಗೆ ಬಂದ ಕೆಲವೇ ನಿಮಿಷಗಳಲ್ಲಿ ತಾರಾ ಬಸ್‌ಸ್ಟಾಪ್‌ಗೆ ಬಂದಳು. ಕೈ ಬೀಸಿ ಕರೆದವನ ಬಳಿಗೆ ಬಂದಳು. ಹೆದರಿದ್ದಂತೆ ಅನ್ನಿಸಿತ್ತು. ಮುಖ ಕೆಂಪಾಗಿತ್ತು. ಅತ್ತಿತ್ತ ನೋಡುತ್ತಿದ್ದಳು.
"ನನ್ನ ಜೊತೆ ಬರೋಕೆ ನಿಮಗೆ ಭಯಾನಾ......"
"ಹೂಂ. ಒಂಥರಾ.... ಯಾರಾದ್ರೂ ನೋಡಿದ್ರೆ....."
"ನೋಡಿದೋರಿಗೆ ಹೆದರುವಂತಹ ಕೆಲಸ ನಾವೇನು ಮಾಡಿದೀವಿ?...... ನಿಮಗೆ ಅಷ್ಟು ಬೇಸರವಾದರೆ ಬರಬೇಡಿ ಬಿಡಿ"
"ಪರವಾಗಿಲ್ಲ. ಇವತ್ತೊಂದು ದಿನ ಬರ್ತೀನಿ" ಅನುಮಾನಿಸುತ್ತಾ ಅವಳು ಬೈಕನ್ನೇರಿದಳು. ಸುಮಂತನಿಗೂ ಮುಜುಗರವೆನಿಸಿತ್ತು. ಆಫೀಸಿನೊಳಕ್ಕೆ ಒಟ್ಟಾಗಿ ಬಂದವರನ್ನು ಅನೇಕ ಕಣ್ಣುಗಳು ನೋಡಿ, ಬಗೆ ಬಗೆಯಾಗಿ ಅರ್ಥೈಸಿದವು.
"ಹೆದರಬೇಡಿ" ಎನ್ನುತ್ತಾ ಸುಮಂತ ಅವಳ ಕೈಯನ್ನು ಒತ್ತಿದ. ಅವಳು ಕೈಯನ್ನು

ಬಿಡಿಸಿಕೊಂಡಳು. ಈ ದಿನವೂ ಸತೀಶ ಬಂದಿರಲಿಲ್ಲ.

ಅವನು ಬಂದಿದ್ದರೆ ಚೆನ್ನಾಗಿತ್ತೆನಿಸಿತ್ತು. ಇಬ್ಬರಿಗೂ. ಈ ದಿನ ಆಫೀಸಿನವರು ವಿಚಿತ್ರವಾಗಿ ನೋಡಿದ್ದಾರೆ. ನಾಳೆ ಬೀದಿಯವರು ನೋಡಬಹುದು. ತಾನು ಒಂದು ತೀರ್ಮಾನ ತೆಗೆದುಕೊಳ್ಳುವವರೆಗೂ.... ತಾವಿಬ್ಬರೂ ಒಟ್ಟಿಗೇ ಓಡಾಡಬಾರದು ಎಂದು ನಿರ್ಧರಿಸಿದ.

ಮಧ್ಯಾಹ್ನ ಊಟದ ಸಮಯ ಅವಳೂ ಇವನೂ ಒಟ್ಟಿಗೆ ಕುಳಿತು ತಮ್ಮ ಡಬ್ಬಿಯನ್ನು ಹೊರತೆಗೆದರು.

"ಇವತ್ತು ಏನು ತಂದಿದೀರಿ?" ಅವಳೇ ಕೇಳಿದಳು.

"ಅವರೇ ಕಾಳಿನ ಉಪ್ಪಿಟ್ಟು...... ನಿಮಗೆ ಇಷ್ಟಾನಾ?"

"ಇಷ್ಟವೇನೋ ಹೌದು...."

"ನನಗೆ ಕಡಿಮೆಯಾಗುತ್ತೆ ಅಂತ ಸಂಕೋಚ ಪಟ್ಟುಕೋಬೇಡಿ. ಡಬ್ಬಿಯ ತುಂಬಾ ಇದೆ ನೋಡಿ...." ಎನ್ನುತ್ತಾ ಅವಳ ಪ್ಲೇಟ್‌ಗೆ ಬಡಿಸಿದ.

"ನೀವು ಏನು ತಂದಿದೀರಿ?" ಎನ್ನುತ್ತಾ ಅವಳ ಡಬ್ಬಿಯನ್ನು ಎತ್ತಿ ನೋಡಿದ. ಅದರಲ್ಲಿ ನಾಲ್ಕು ಬ್ರೆಡ್‌ನ ಸ್ಲೈಸ್‌ಗಳಿದ್ದವು. ಅವಳು ಡಬ್ಬಿಯನ್ನು ಕಿತ್ತುಕೊಂಡಳು. "ಇವತ್ತು ಅಡಿಗೆಯವರು ಬಂದಿರಲಿಲ್ಲ. ತಿಂಡಿ ಏನೂ ಮಾಡಿರಲಿಲ್ಲ...."

"ನಂಗೆ ಕನಸು ಬಿದ್ದಿತ್ತು. ಅದಕ್ಕೇ ಡಬ್ಬಿ ತುಂಬಾ ತಿಂಡಿಯನ್ನು ತಂದಿದೀನಿ" ಮುಗುಳ್ನಕ್ಕು ಅವಳೆಡೆ ಡಬ್ಬಿಯನ್ನು ಸರಿಸಿದ.

"ಥ್ಯಾಂಕ್ ಯೂ ಸಾರ್....."

"ಈಗ ನಾನು ಸಾರ್ ಅಲ್ಲ. ನಿಮ್ಮ ಸ್ನೇಹಿತ. ಸುಮಂತ್ ಅನ್ನಿ ಸಾಕು" ಇಬ್ಬರೂ ನಗು ನಗುತ್ತಾ ಮಾತನಾಡುತ್ತಾ ಡಬ್ಬಿಯನ್ನು ಖಾಲಿ ಮಾಡಿದರು. ಏಳುವ ಮೊದಲು ಅವಳಿಗೆ ಮಾತ್ರ ಕೇಳುವಂತೆ ಹೇಳಿದ.

"ನಾನು ನಿಮ್ಮ ಹತ್ತಿರ ಮುಖ್ಯವಾದ ವಿಷಯವನ್ನು ಮಾತ್ನಾಡಬೇಕು... ಸಾಯಂಕಾಲ ನನ್ನ ಜೊತೆ ಬರ್ತೀರಿ ತಾನೇ?"

"ನಿಮ್ಮ ಮನೇಗಾ?"

"ನೋ... ನೋ...... ಎಲ್ಲಾದ್ರೂ ಬೇರೆ ಕಡೆಗೆ ಹೋಗೋಣ...."

"ಅಂಥ ಮಾತು ಏನಿದೆ ಅಂತ ಕೇಳಬಹುದಾ?"

"ಕೇಳಬಹುದು ಆದರೆ ಈಗಲ್ಲ" ಎನ್ನುತ್ತಾ ಚಮಚ ಡಬ್ಬಿಗಳನ್ನು ತೆಗೆದಿಟ್ಟು ಕೈ ತೊಳೆದು ಬಂದ.

ತಾರಾಳಿಗೆ ಸ್ವಲ್ಪ ಸ್ವಲ್ಪವಾಗಿ ಅರ್ಥವಾಗಿತ್ತು...... ತಾನು ಏನು ಹೇಳಬೇಕೆಂದು ಯೋಚಿಸುತ್ತಿದ್ದಳು. ಆಗಾಗ್ಗೆ ಗಡಿಯಾರದ ಕಡೆ ನೋಡುತ್ತಿದ್ದಳು. ಆಫೀಸು ಬಿಟ್ಟೊಡನೆ, ಇಬ್ಬರೂ ಸೀದಾ ಸ್ವಲ್ಪ ದೂರದಲ್ಲಿದ್ದ ರೆಸ್ಟೋರೆಂಟ್‌ಗೆ ಬಂದರು. ಸುಮಂತ ತಿಂಡಿ ಕಾಫಿಗೆ ಆರ್ಡರ್ ಮಾಡಿದ.

"ಸುಮಂತ್, ಏನು ಹೇಳಬೇಕೂಂತ ಇದೀರೋ ಅದನ್ನು ಬೇಗ ಹೇಳಿಬಿಡಿ.... ಹೊತ್ತಾದರೆ, ಆಂಟಿ ಗಾಬರಿಯಾಗ್ತಾರೆ"

"ನನ್ನ ನಿಮ್ಮ ಸ್ನೇಹ, ತುಂಬಾ ಹೊಸದೂ ಅಲ್ಲ ; ಹಳೆಯದೂ ಅಲ್ಲ. ನಾನು ನಿಮ್ಮನ್ನು ಇಷ್ಟ ಪಡ್ತೀನಿ ; ನೀವೂ ಇಷ್ಟಪಡುವುದಾದರೆ, ನಾವಿಬ್ಬರೂ ಮದುವೆಯಾಗ ಬಹುದು. ನಿಮ್ಮ ಅಭಿಪ್ರಾಯ ಏನೂಂತ..... ನಿಧಾನವಾಗಿ ಹೇಳಿ ಪರವಾಗಿಲ್ಲ....."

ಅವಳು ಗಲಿಬಿಲಿಗೊಂಡಳು.

"ಓ.... ಕೇ.... ನಿಮ್ಮ ಯಾವುದೇ ನಿರ್ಧಾರ ನನಗೆ ಸಮ್ಮತ.. ಆದರೂ ನಾನು ಯಾವ ಉತ್ತರವನ್ನೂ ಅಪೇಕ್ಷಿಸುತ್ತೀನಿ ಅಂತ ಅರ್ಥವಾಗಿರಬಹುದಲ್ಲವೆ?"

ಅಷ್ಟರಲ್ಲಿ ಬೇರರ್ ತಿಂಡಿಯನ್ನು ತಂದಿತ್ತ. ಇಬ್ಬರೂ ಮಾತಿಲ್ಲದೇ ತಿಂಡಿ ಕಾಫಿಯನ್ನು ಮುಗಿಸಿ, ಬಿಲ್ ಪೇ ಮಾಡಿ ಅಲ್ಲಿಂದ ಹೊರಟರು.

ಬೈಕ್ ಹತ್ತುವ ಮೊದಲು ಅವಳ ಕಡೆ ಪ್ರಶ್ನಾರ್ಥಕವಾಗಿ ನೋಡಿದ. ಅವಳು ಅವನ ಮನಸ್ಸನ್ನು ಅರಿತಳು. ಮುಗುಳ್ನಕ್ಕು ನುಡಿದಳು.

"ನನಗೂ ನೀವು ಇಷ್ಟ.... ಆದರೆ ಕೆಲವು ಸಮಸ್ಯೆಗಳಿವೆ....."

"ಸಮಸ್ಯೆ? ಸಮಸ್ಯೆ ಯಾರಲ್ಲಿ ಇಲ್ಲ. ಅದಕ್ಕೆಲ್ಲಾ ಒಂದು ಪರಿಹಾರವಿರುತ್ತೆ.... ನಿಧಾನವಾಗಿ ಅದರ ಬಗ್ಗೆ ಯೋಚಿಸೋಣ. ಆದರೆ ಈಗ ನೀವು ಒಪ್ಪಿಗೆ ಕೊಟ್ಟಿರಲ್ಲ. ಸಧ್ಯಕ್ಕೆ ಅಷ್ಟು ಸಾಕು...." ಎನ್ನುತ್ತಾ ಮೋಟಾರು ಬೈಕನ್ನು ಸ್ಟಾರ್ಟ್ ಮಾಡಿದ. ಇಳಿಯುವಾಗ ಹೇಳಿದಳು.

"ಮರತೇ ಬಿಟ್ಟಿದ್ದೆ. ಸ್ಮಿತಾ ತನ್ನ ಮದುವೆಯ ಆಮಂತ್ರಣ ಪತ್ರಿಕೆಗಳನ್ನು ಕಳಿಸಿದ್ದಾಳೆ. ತಗೊಳ್ಳಿ, ಎನ್ನುತ್ತಾ ತನ್ನ ಬ್ಯಾಗ್‌ನಿಂದ ಆಹ್ವಾನ ಪತ್ರಿಕೆಯನ್ನು ತೆಗೆದುಕೊಟ್ಟಳು. ಇನ್ನೊಂದು ಸತೀಶ್‌ಗೆ... ಅವರು ಇವತ್ತು ಆಫೀಸಿಗೆ ಬರಲಿಲ್ಲವಲ್ಲ ಯಾಕೋ....."

"ನಿಮಗೆ ಏನು ಹೇಳಿದ್ದ....?"

"ಅಣ್ಣನಿಂದ ಫೋನ್ ಬಂದಿದೆ. ಹೋಗ್ತಿದೀನಿ ಅಂತಷ್ಟೇ ಹೇಳಿದ್ದು...., ಹೋಗಲಿ, ಪರವಾಗಿಲ್ಲ ಬಂದ ಮೇಲೆ ಕೊಟ್ಟರಾಯ್ತು....."

"ನಾಡಿದ್ದು ಅವಳ ಮದುವೆ. ನಾನು ನಾಳೆ ಅವಳ ಊರಿಗೆ ಹೋಗ್ತಾ ಇದೀನಿ..... ನೀವು ಬರ್ತೀರಾ?"

"ಯೋಚಿಸ್ತೀನಿ. ಬಂದರೆ ನಾಡಿದ್ದು ಬೆಳಿಗ್ಗೆ ಬರ್ತೀನಿ."

"ನನಗೆ ಈ ಮೂರು ದಿನಕ್ಕೆ ರಜ ಬೇಕಿತ್ತಲ್ಲ ಸಾರ್......"

"ರಜಕ್ಕೆ ಅಪ್ಲಿಕೇಷನ್ ಬರೆದು ಕೊಡಿ. ಊರಿಂದ ಬಂದ ಮೇಲೆ ಕೊಟ್ಟರೂ ಆಯಿತು"

"ಥ್ಯಾಂಕ್ ಯೂ" ಎಂದು ಹೇಳಿ ತನ್ನ ಮನೆಯ ಕಡೆ ತಿರುಗಿದಳು. ನಾಳೆ ಹೇಗೂ ತಾರಾ ಆಫೀಸಿಗೆ ಬರುವುದಿಲ್ಲ. ತಾನೂ ಏಕೆ ರಜ ಹಾಕಬಾರದು ಅಂತ ಅನ್ನಿಸಿದರೂ ಅದು ಸರಿಯಲ್ಲ ಅಂತಂದುಕೊಂಡ.

ಎಂದಿನಂತೆ ಆಫೀಸಿಗೆ ಬಂದ. ತನ್ನ ಜಾಗದಲ್ಲಿ ಕುಳಿತಿದ್ದ ಸತೀಶನನ್ನು ಕಂಡು ತಾನೇ ಮಾತನಾಡಿಸಿದ.

"ಇದ್ದಕ್ಕಿದ್ದ ಹಾಗೇ ಎರಡು ದಿನ ನಾಪತ್ತೆ. ಏನು ವಿಷಯ?"

"ಸಧ್ಯದಲ್ಲೆ ಏನೂಂತ ತಿಳಿಯುತ್ತೆ. ಈಗ ಸಸ್ಪೆನ್ಸ್....."

"ನನಗೂ ಹೇಳಬಾರದಾ?"

"ನಿಂದೇನಯ್ಯಾ ಸ್ಪೆಶಾಲಿಟಿ. ಹುಡುಗೀರು ಇಬ್ಬರೂ ಇದ್ದಿದ್ದರೆ ಅವರು ಕೇಳದೇ ಇದ್ದಿದ್ದರೂ ಹೇಳ್ತಿದ್ದೆ"

ತನ್ನ ಬಳಿ ಇದ್ದ ಸ್ಮಿತಾಳ ಮದುವೆಯ ಆಹ್ವಾನ ಪತ್ರಿಕೆಯನ್ನು ಅವನಿಗೆ ಕೊಟ್ಟ.

"ನಾಳೆ ಸ್ಮಿತಾಳ ಮದುವೆಯಂತೆ.... ಆಹ್ವಾನ ಬಂದಿದೆ ಹೋಗೋಣ್ವಾ?"

"ಓ.... ಷೂರ್...." ಎಂದ ಉತ್ಸಾಹದಿಂದ ಸತೀಶ.

* * *

- - 20 - -

ಬಸ್ಸಿನಿಂದ ಇಳಿದು ಇಬ್ಬರೂ, ಮದುವೆ ನಡೆಯುತ್ತಿದ್ದ ಛತ್ರಕ್ಕೆ ಬಂದರು. ಇವರಿಬ್ಬರನ್ನು ಕಂಡು ತಾರಾ ಸರಸರನೆ ಬಂದಳು. ವಿಶೇಷವಾಗಿ ಅಲಂಕರಿಸಿಕೊಂಡಿದ್ದ ತಾರಾ ಅಪ್ಸರೆಯಂತೆ ಕಂಡು ಬಂದಳು ಸುಮಂತನಿಗೆ. ಮದುಮಕ್ಕಳ ಬಳಿಗೆ ಇಬ್ಬರನ್ನು ಕರೆದೊಯ್ದಳು. ಸ್ಮಿತಾ ತನ್ನ ಪತಿಗೆ ಇಬ್ಬರನ್ನು ಪರಿಚಯಿಸಿದಳು. ಇಬ್ಬರಿಗೂ ಶುಭಾಶಯ ಕೋರಿ, ತಿಂಡಿ ತಿನ್ನುವ ಸ್ಥಳಕ್ಕೆ ಬಂದರು.

ಸತೀಶ ಎಡೆ ಬಿಡದೇ ತಾರಾಳ ಬಳಿ ಮಾತನಾಡುತ್ತಿದ್ದ. ಸುಮಂತನ ಸಹನೆ ಎಲ್ಲೆ ಮೀರಿತ್ತು. ನಾನು ಇಲ್ಲಿಗೆ ಬಂದದ್ದು ಇವಳಿಗೋಸ್ಕರ. ಈ ಕರಡಿ ಎಲ್ಲಿಂದ ಬಂತಪ್ಪಾ ಶಿವಪೂಜೇಲಿ ಎಂದು ಅಂದುಕೊಳ್ಳುವಂತಾಗಿತ್ತು.... ತಾರಾ ಆಗಾಗ್ಗೆ ಸುಮಂತನ ಕಡೆ ಕುಡಿ ನೋಟ ಬೀರುತ್ತಿದ್ದಳು. ಸತೀಶನಿಗೆ ತಿಳಿಯದಂತೆ ಸುಮಂತ ಹಲ್ಲು ಕಡಿಯುತ್ತಿದ್ದ.

ಮದುವೆಯ ಶಾಸ್ತ್ರಗಳು ಮುಗಿದಿದ್ದವು. ಅತಿಥಿಗಳಿಗೆ ಊಟ ಉಪಚಾರಗಳಾಗಿದ್ದವು. ತಾರಾ, ಸ್ಮಿತಾಳ ತಂದೆ ತಾಯಿಗೆ, ಇವರಿಬ್ಬರ ಪರಿಚಯ ಮಾಡಿಕೊಟ್ಟಿದ್ದಳು. ಸ್ವಲ್ಪ ಸಮಯದ ನಂತರ ಇವರಿಬ್ಬರೂ ಊರಿಗೆ ವಾಪಸ್ಸು ಹೊರಟರು. ತಾರಾ ಆ ರಾತ್ರಿ ಅಲ್ಲೇ ಉಳಿದಳು. ಸತೀಶ ಹೇಳಿದ್ದ.

"ನೀವೂ ನಮ್ಮ ಜೊತೆಗೆ ಬರಬಹುದಲ್ಲ..... ಹೇಗೂ ನಿಮ್ಮ ಸ್ನೇಹಿತೆ ಇನ್ನು ನಿಮಗೆ ಸಿಗುಲ್ಲ"

"ನಾನು ನಾಳೆ ಬೆಳಿಗ್ಗೆ ಬರ್ತೀನಿ ನನಗೆ ಇಲ್ಲಿ ಸ್ವಲ್ಪ ಕೆಲಸವಿದೆ" ಸುಮಂತನಿಗೆ ಅವಳೊಡನೆ ಹೆಚ್ಚು ಮಾತನಾಡಲು ಆಗಿರಲಿಲ್ಲ. ಆ ಅಸಮಾಧಾನ ಅವನ ಮುಖದಲ್ಲಿ ಕಂಡು ಬಂದಿತ್ತು. ಛತ್ರದ ಬಾಗಿಲವರೆಗೆ ಬಂದು ನಿಂತಿದ್ದಳು. ಸತೀಶ ಕೈಯಾಡಿಸಿದರೂ, ಅವನು ಕೈ ಬೀಸಿರಲಿಲ್ಲ. ಅವಳಿಗೆ ನಗು ಬಂದಿತ್ತು.

ಎರಡು ಮೂರು ದಿನಗಳಾದರೂ ತಾರಾ ಆಫೀಸಿಗೆ ಬರದಿದ್ದಾಗ ಸುಮಂತ ಚಡಪಡಿಸಿದ. ಅನೇಕ ಬಾರಿ ತನಗೆ ತಾನೇ ಎಂಬಂತೆ, ಸತೀಶನೊಡನೆ ಅವಳೇಕೆ ಬಂದಿಲ್ಲವೆಂದು ಪ್ರಶ್ನಿಸಿದ್ದ......

"ಅದ್ಯಾಕಪ್ಪಾ ಅಷ್ಟು ಅಕ್ಕರೆ? ನಾನೂ ನೋಡ್ತಾ ಇದೀನಿ. ನಾನು ಊರಲ್ಲಿಲ್ಲದ ಸಮಯದಲ್ಲಿ ತುಂಬಾ ಮುಂದುವರೆದುಬಿಟ್ಟಿದೀರಿ...."

"ಹಾಗೇನೂ ಇಲ್ಲ......"

"ಏನೂ ಹಾಗೇನೂ ಇಲ್ಲ..... ನೆನ್ನೆ ಇಬ್ಬರೂ ವಿರಹಿಗಳಂತೆ ವಿರಹಗಾನವನ್ನು ಹಾಡುತ್ತಿದ್ದಿರಿ......"

"ನೀನು ಇಲ್ಲದೇ ಇದ್ದಿದ್ದರೆ ಮಧುರ ಗಾನವನ್ನೂ ಹಾಡುತ್ತಿದ್ದೆವು....."

"ನಿಮ್ಮ ಮಧುರಗಾನಕ್ಕೆ ಮುನ್ನುಡಿ ಬರೆದವನು ನಾನೇ ಗೊತ್ತಾ?" ಎನ್ನುತ್ತಾ ತಮಾಷೆಯಾಗಿ ನಕ್ಕ. ಸುಮಂತನೂ ನಕ್ಕ. ಅವನೇನಾದರೂ ಕೇಳುವ ಮೊದಲೇ ಸತೀಶ ತನ್ನ ಕೆಲಸಗಳಲ್ಲಿ ಮಗ್ನನಾಗಿದ್ದ. ಸುಮಂತ ತನ್ನ ಜಾಗಕ್ಕೆ ಬಂದು ಕುಳಿತ.

ಆಫೀಸಿನಿಂದ ಮನೆಗೆ ವಾಪಸ್ಸು ಬರುತ್ತಿದ್ದಂತೆಯೇ ಮುಂಬಾಗಿಲಿಗೇ ಅತ್ತೆ ಮಾತನ್ನಾಡುತ್ತಿದ್ದುದು ಕೇಳಿಸಿತ್ತು. ಬಗ್ಗಿ ನೋಡಿದ. ಇಬ್ಬರೂ ಮಾತನ್ನಾಡುತ್ತಾ ಕೂತಿದ್ದರು. "ಓ...... ಅತ್ತೇ.... ಯಾವಾಗ ಬಂದ್ರಿ.... ಅಜ್ಜಿ ಎಲ್ಲಾ ಚೆನ್ನಾಗಿದಾರಾ?"

"ಮಧ್ಯಾಹ್ನಾನೇ ಬಂದೆ... ನಿನ್ನನ್ನು ನೋಡಬೇಕೂಂತ ಅನ್ನಿಸ್ತು ಬಂದು

ಬಿಟ್ಟೆ....."

"ಮಾವ ಬರಲಿಲ್ವಾ?....."

"ಮಾವಂಗೆ ಬಿಡುವೆಲ್ಲಿ? ಮಂಡಿ ಕೆಲಸದ ಮೇಲೆ, ಯಾವುದೋ ಊರಿಗೆ ಹೋಗಿದ್ದಾರೆ."

"ಈಗ ಬರ್ತೀನಿ ಅನ್ನುತ್ತಾ ಒಳಗೆ ಹೋದ. ನಿನ್ನ ಮಗ ನಿನಗೆ ಅಂತ ಟಿ.ವಿ., ಸೋಫಾ, ಸೀರೆ ಒಡವೆಗಳಿಗೆ ಹಣ ಎಲ್ಲಾ ಸಂಪಾದಿಸಿ ಕೊಟ್ಟಿದ್ದಾನೆ. ಆದರೆ ಸೋಸೇನ ಇನ್ನು ತಂದು ಕೊಟ್ಟಿಲ್ಲ ನೋಡು....."

"ಸೊಸೇನ ಅವನೇನು ನನಗೆ ತಂದುಕೊಡೋದು. ಅವನಿಗೆ ಹೆಂಡತೀನ ನಾನು ತಂದುಕೊಡ್ತೀನಿ" ಈ ಮಾತು ಸುಮಂತನಿಗೆ ಕೇಳಿಸಿತ್ತು.

"ತಮಾಷೆಯಾಗಿದೆ ನಿನ್ನ ಮಾತು...... ಅವನೇನು ಚಿಕ್ಕ ಮಗುವೇ.... ಒಳ್ಳೇ ಹೊಸ ಬೊಂಬೆಯನ್ನು ತಂದು ಕೊಡುವಂತೆ ಮಾತಾಡ್ತೀಯಲ್ಲ."

"ಸುಮಂತ ಇನ್ನು ಚಿಕ್ಕವನು..... ಅವನಿಗೆ ಎಂತಹ ಹುಡುಗಿ ಬೇಕೂಂತ ನನಗೆ ಗೊತ್ತು. ಅವನಿಗೇನು ತಿಳಿಯುತ್ತೆ...?"

"ನಿನ್ನ ಮಾತನ್ನು ಯಾರೂ ಒಪ್ಪಲ್ಲ ಶಾಂತ..... ನೀನು ಹುಡುಕಿದ ಹೆಣ್ಣನ್ನು ಸೋಮ ಒಪ್ಪದಿದ್ದರೆ....?"

"ಅವನು ಒಪ್ಪುವಂತಹ ಹುಡುಗಿಯನ್ನೇ ಹುಡುಕ್ತೀನಿ....."

"ನಿನಗೆ ಎಂತಹ ಹುಡುಗಿ ಬೇಕು ಹೇಳು... ನಾನು ನಿನಗೆ ಸಹಾಯ ಮಾಡ್ತೀನಿ" ಸುಮಂತ ಅವರುಗಳಿದ್ದೆಡೆಗೆ ಬಂದ ಮಾತು ನಿಂತಿತು. ಶಾಂತ ಎಲ್ಲರಿಗೂ ಕಾಫಿ ತಿಂಡಿಯನ್ನು ತಂದಿತ್ತಳು. ತಾಯಿ ಕಾಫಿ ತಿಂಡಿಯ ತಟ್ಟೆಗಳನ್ನು ಒಳಗಿಡಲೆಂದು ಹೋದಾಗ, ಸುಮಂತ ಅತ್ತೆಗೆ ಪಿಸುದನಿಯಲ್ಲಿ ಹೇಳಿದ.

"ನಾನೇ ನಿಮ್ಮೂರಿಗೆ ಬರೋಣ ಅಂತಿದ್ದೆ. ನನಗೆ ನಿಮ್ಮಿಂದ ಒಂದು ಕೆಲಸವಾಗಬೇಕು..... ನಿಮಗೆ ಮಾತ್ರ ಹೇಳುವಂಥದ್ದು....."

"ಏನಪ್ಪಾ.... ಏನಾದರೂ ಎಡವಟ್ಟು ಮಾಡಿಕೊಂಡಿದೀಯ ಹೇಗೆ?"

"ಹಾಗೇನಿಲ್ಲ. ಆದರೆ...... ಮುಖ್ಯವಾದ ವಿಚಾರ......."

"ಏನೋ ಗಹನವಾದ ವಿಚಾರಾನೇ ಹಾಗಾದ್ರೆ... ನಿಮ್ಮಮ್ಮ ಬೈಯುವಂತಾಗ ಬಾರದು ಮತ್ತೆ...."

"ಅಮ್ಮ ಯಾರನ್ನೂ ಬೈಯಬಾರದು. ಅಂತಹ ಉಪಾಯ ಬೇಕು"

"ನೋಡೋಣ. ನನಗೇನು ಫೀಸು ಕೊಡ್ತೀಯ?"

"ನೀವು ಕೇಳಿದ್ದು......."

"ಎಷ್ಟು ಜಾಣ ನೋಡು. ಆಮೇಲೆ ಇಲ್ಲ ಅನ್ನಬಾರದು......"

"ಇಲ್ಲ. ಪ್ರಾಮಿಸ್ ಮಾಡ್ಲಾ....." ಕೈ ಎತ್ತಿದ.

"ಏನೋ ಅತ್ತೆಯ ಬಳಿ ಕೂತಿದೀಯ. ಪೂಸಿ ಹೊಡೆಯುತ್ತಿರುವ ಹಾಗಿದೆ..."

"ಹೇಳಬೇಡಿ" ಎಂದು ಸಂಜ್ಞೆ ಮಾಡಿ ಅವನು ಎದ್ದು ತನ್ನ ರೂಮಿಗೆ ಹೋದ.

"ಏನು ಹೇಳ್ತಿದ್ದ" ಅತ್ತಿಗೆಯನ್ನು ಪ್ರಶ್ನಿಸಿದಳು.

"ಅವನೀಗಲೇ ಮದುವೆಯಾಗುಲ್ಲವಂತೆ"

"ಈಗಲೇ ಮದುವೆಯಾಗಲಿ ಅಂತ ನಾನೆಲ್ಲಿ ಹೇಳಿದೆ. ಅವನಿಗೆ ತಕ್ಕ ಹೆಂಡತಿ ಸಿಗುವವರೆಗೂ ಅವನು ಮದುವೆಯಾಗುವಂತಿಲ್ಲ"

"ನಿನ್ನ ಮಾತು ಕೇಳಿದರೆ ಭಯವಾಗುತ್ತೆ, ಶಾಂತಾ... ನೀನು ತಕ್ಕನಾದ ಹುಡುಗಿಯನ್ನು ಹುಡುಕ್ತಾ ಹುಡುಕ್ತಾ ಅವನೆಲ್ಲಿ ಮುದುಕನಾಗಿ ಬಿಡ್ತಾನೋ ಅಂತ ಗಾಬರಿಯಾಗುತ್ತೆ. ಒಂದು ಕೆಲಸ ಮಾಡು. ಪೇಪರ್ನಲ್ಲಿ ಹಾಕಿಸಿಬಿಡು. ಹೆಣ್ಣು ಹೇಗಿರಬೇಕು ಅಂತ ವಿವರವನ್ನು ಕೊಡು.... ನಿನಗೆ ಬೇಕಾದ ಹುಡುಗಿಯನ್ನು ಆರಿಸಿಕೊಳ್ಳಬಹುದು."

"ಪೇಪರ್ನಲ್ಲಿ ಹಾಕಿಸೋದು ಯಾಕೆ? ನಿಮಗೆ ಹೇಳಿದೀನಲ್ಲ. ನೀವೇ ಹುಡುಕಿಕೊಡಬೇಕು....."

"ನನಗೆ ನಿನಗೆ ಮನಸ್ತಾಪ ಬರುತ್ತೆ ಅಷ್ಟೇ....."

"ಮನಸ್ತಾಪ ಬರದೇ ಇರಬೇಕಾದರೆ...... ಓ.... ಇವರು ಬಂದ್ರು" ಶಾಂತ ಮಾತನ್ನು ಅಷ್ಟಕ್ಕೇ ನಿಲ್ಲಿಸಿದಳು.

"ಏನಮ್ಮಾ ವನಜ ಯಾವಾಗ ಬಂದೆ? ಒಬ್ಬಳೇ ಬಂದ್ಯಾ?"

"ಹುಂ. ನಿಮ್ಮನ್ನೆಲ್ಲಾ ನೋಡಿ ಮಾತನಾಡ್ಸಿಕೊಂಡು ಹೋಗೋಣ ಅಂತ ಬಂದೆ"

"ಹೇಗೂ ಬಂದಿದೀಯ. ನಮ್ಮ ಸುಮಂತನಿಗೆ ಒಂದು ಹೆಣ್ಣನ್ನು ನೋಡಬೇಕು." ಶಾಂತ ತನಗೆ ಸಂಬಂಧಿಸುದುದೇ ಅಲ್ಲವೆನ್ನುವಂತೆ ನಡೆದಳು.

"ಇವತ್ತು ನೀವೆಲ್ಲರೂ ನನಗೆ ಈ ಕೆಲಸ ವಹಿಸಿದೀರಿ... ಅದಕ್ಕೋಸ್ಕರವೇ ನಾನು ಬಂದಿದೀನಿ ಅಂತ ಅನ್ನಿಸ್ತಿದೆ." ಶಾಂತಳ ಬೆನ್ನನ್ನೇ ನೋಡಿದಳು.

"ಸುಮಂತನೂ...... ಅವನು ಏನಾದ್ರೂ ಹೇಳಿದ್ನಾ?"

"ಇನ್ನು ಏನನ್ನೂ ಹೇಳಿಲ್ಲ. ಆದರೆ ಖಂಡಿತಾ ಏನೋ ಮಾತಿದೆ...."

" ಮೊದಲು ಅವನ ಮನಸ್ನಲ್ಲಿ ಏನಿದೆ ಅಂತ ತಿಳಿದುಕೊಳ್ಳುವುದು ಮುಖ್ಯ..... ಇದು ಅವನ ಜೀವನದ ಪ್ರಶ್ನೆ......"

ಎರಡು ದಿನಗಳು ಕಳೆದರೂ, ಸುಮಂತನಿಗೆ ಅತ್ತೆಯೊಡನೆ ಪ್ರತ್ಯೇಕವಾಗಿ ಮಾತನಾಡಲು ಅವಕಾಶ ಸಿಕ್ಕಿರಲಿಲ್ಲ. ತಾಯಿ ಯಾವಾಗಲೂ ಜತೆ ಜತೆಯಲ್ಲಿಯೇ ಇರುತ್ತಿದ್ದಳು. ಮಾರನೇ ದಿನ ಅತ್ತೆ ಊರಿಗೆ ವಾಪಸ್ಸು ಹೊರಟಳು.

"ಅತ್ತೆ ನಿಮ್ಮನ್ನು ಬಸ್‌ಸ್ಟಾಪ್‌ಗೆ ಬಿಡ್ತೀನಿ ಬನ್ನಿ.... ಬೈಕ್‌ನಲ್ಲಿ ಕುಳಿತು ಕೊಳ್ಳೋಕೆ ಬರುತ್ತೆ ತಾನೇ......"

"ಬರುತ್ತೆ ಆದರೆ ನಿಧಾನವಾಗಿ ಓಡಿಸಬೇಕಪ್ಪಾ....."

"ಹೂಂ. ನಿಧಾನವಾಗಿ ಓಡಿಸ್ತೀನಿ..... ಹತ್ತಿ...." ವನಜ ಹಿಂದಿನ ಸೀಟನ್ನು ಹತ್ತಿ, ಬಿಗಿಯಾಗಿ ಹಿಡಿದು ಕುಳಿತಳು. ಗಾಡಿಯನ್ನು ನಿಧಾನವಾಗಿ ಓಡಿಸಿದ. ಮಧ್ಯ ದಾರಿಯಲ್ಲಿ ಒಂದು ಕಡೆ ಗಾಡಿಯನ್ನು ನಿಲ್ಲಿಸಿದ. ವನಜ ಇಳಿದಳು.

"ಅತ್ತೆ ಒಂದು ಸಮಸ್ಯೆ..... ನಾನು ಒಂದು ಹುಡುಗೀನ ಪ್ರೀತಿಸ್ತಿದೀನಿ. ನನ್ನ ಜತೆ ಕೆಲಸ ಮಾಡ್ತಿದಾಳೆ... ಅವಳನ್ನೇ ಮದುವೆಯಾಗಬೇಕೂಂತ ನಿರ್ಧರಿಸಿದೀನಿ. ಆದರೆ ಅಮ್ಮ ಏನಂತಾಳೋ ಅಂತ ಭಯ...."

"ಅಮ್ಮನ್ನ ಕೇಳಿ ಅವಳನ್ನ ಪ್ರೀತಿಸಿದ್ಯಾ? ಈಗ ನಿನಗೆ ಅಮ್ಮನ ಒಪ್ಪಿಗೆ ಏಕೆ? ನೀವು ಅಪ್ಪ ಮಗ ಇಬ್ಬರೂ ಶಾಂತಂಗೆ ಹೆದರ್ತೀರಿ...."

"ಹೆದರೋ ಪ್ರಶ್ನೆ ಅಲ್ಲ, ಏಕೋ ಏನೋ ಅವಳನ್ನು ವಿರೋಧಿಸುವ ಧೈರ್ಯವಿಲ್ಲ"

"ಧೈರ್ಯವಿಲ್ಲದಿದ್ದ ಮೇಲೆ ಪ್ರೀತಿ ಪ್ರೇಮ ಅಂತ ಯಾಕೆ ಮುಂದುವರೆದೆ? ಹೇಗೂ ನಿಮ್ಮಮ್ಮ ನಿನಗೆ ತಕ್ಕನಾದ ಹುಡುಗಿಯನ್ನು ತಂದು ಕೊಡುತ್ತಾಳೆ. ಅದನ್ನೇ

ಒಪ್ಪಿಕೋ....."

"ಹಾಗಿದ್ದಿದ್ದರೆ.... ನಿಮಗೆ ನನ್ನ ಸಮಸ್ಯೆ ಯಾಕೆ ಹೇಳುತ್ತಿದ್ದೆ?"

"ಹುಡುಗಿ ಎಲ್ಲಿಯವಳು? ಎಲ್ಲಿದಾಳೆ?"

"ಅವಳ ತಂದೆ ತಾಯಿ ಬೇರೆ ಊರಿನಲ್ಲಿದ್ದಾರೆ. ಅವಳು ಇಲ್ಲೇ ಪಕ್ಕದ ಮನೇಲಿ ಪೇಯಿಂಗ್‌ಗೆಸ್ಟ್ ಆಗಿದಾಳೆ."

"ಮೊದಲೇ ಹೇಳಬಾರದಾಗಿತ್ತೇನಪ್ಪಾ. ನೋಡಿರಬಹುದಾಗಿತ್ತು...."

"ಅಮ್ಮನೆದುರಿಗೆ ಹೇಗೆ ಎಲ್ಲಾ ಹೇಳೋದು...?"

"ಎಂದಾದರೂ ನಿಮ್ಮಮ್ಮನಿಗೆ ಗೊತ್ತಾಗಲೇ ಬೇಕಲ್ವಾ? ನಡೀ ವಾಪಸ್ಸು ಮನೆಗೆ ಹೋಗೋಣ. ಒಂದು ಇತ್ಯರ್ಥ ಮಾಡಿಯೇ ಹೋಗ್ತೀನಿ...." ಜ್ಯೆಕು ಮತ್ತೆ ಮನೆಯ ದಾರಿಯನ್ನು ಹಿಡಿಯಿತು.

"ಯಾಕತ್ತಿಗೆ ವಾಪಸ್ಸು ಬಂದ್ರಿ? ಬಸ್ಸು ಸಿಗಲಿಲ್ವಾ?"

"ಇಲ್ಲ. ಶಕುನ ಸರಿ ಹೋಗಲಿಲ್ಲ. ಇನ್ನೊಂದೆರಡು ದಿನ ಇದ್ದು ನಂತರ ಹೊರಡ್ತೀನಿ"

"ಹಾಗೇ ಮಾಡಿ.... ಆದರೆ ಈ ಶಕುನ.... ಅದ್ನೆಲ್ಲಾ ನಂಬ್ತೀರಾ?"

"ನಿಮ್ಮ ಅಣ್ಣನ ಜೊತೆ ಮದುವೆಯಾದ್ಮೇಲೆ.... ಏನೇನನ್ನೋ ನಂಬುಕ್ಕೆ ಶುರು ಮಾಡಿದೀನಿ. ಶಕುನ ಸರಿ ಹೋದರೆ ಎಲ್ಲಾ ಸರಿ ಹೋಗುತ್ತೆ. ಇಲ್ಲದಿದ್ದರೆ ಇಲ್ಲ"

"ಅಂದ್ರೇ......" ಶಾಂತ ಸಂದೇಹದಿಂದ ನೋಡಿದಳು.

"ಬೇಕಾದಷ್ಟು ಮಾತುಗಳಿವೆ ಶಾಂತಾ...... ಅದನ್ನೆಲ್ಲಾ ನಿಧಾನವಾಗಿ ಆಡಿದರಾಯ್ತು. ಒಂದು ಲೋಟ ನೀರು ಕೊಡ್ತೀಯ?"

"ಈಗ ತಂದೆ" ಎನ್ನುತ್ತಾ ಶಾಂತ ಒಳಗೆ ಹೋದಳು. ರಾಮಸ್ವಾಮಿ ಪಿಳಿ ಪಿಳಿ ಅವಳನ್ನೇ ನೋಡಿದ. ಮಗ, ಅವನ ಅತ್ತೆಯೊಡನೆ ಏನೋ ಮಾತನಾಡಿದ್ದಾನೆ. ಅದೇ ವಿಷಯವಾಗಿ ಇವಳು ನಿಂತಿದ್ದಾಳೆಂದು ಭಾವಿಸಿದ. ವನಜಾ ತನ್ನಲ್ಲೇ ಏನು ಮಾಡಬೇಕೆಂದು ಚಿಂತಿಸುತ್ತಿದ್ದಳು. ಶಾಂತಾ ಸದಾ ಮನೆಯಲ್ಲಿಯೇ ಇರುತ್ತಿದ್ದುದರಿಂದ ರಾಮಸ್ವಾಮಿಯೊಡನೆ ರಹಸ್ಯವಾಗಿ ಮಾತನಾಡುವಂತೆಯೇ ಇಲ್ಲ. ರಾಮಸ್ವಾಮಿಯ ಜೊತೆ ಹೊರಗೆ ತಾನು ಹೋಗುವಂತಿಲ್ಲ ; ಶಾಂತ ತಮ್ಮಿಬ್ಬರನ್ನೇ ಬಿಟ್ಟು ಹೋಗುವುದಿಲ್ಲ. ರಿಟೈರ್ ಆದರೂ, ರಾಮಸ್ವಾಮಿ ಹೊರಗೆ ಒಂದೆರಡು ಸಣ್ಣಪುಟ್ಟ ಅಂಗಡಿಯ ಲೆಖ್ಖ ಬರೆದುಕೊಡಲು ಹೋಗುತ್ತಿದ್ದ.

"ಆಚಿ ಮಕ್ಕಳಿಗೆ ರಜೆ ಇದ್ದರೆ, ಕರೆಸಿ, ನಾನು ಅವಳನ್ನು ಮಕ್ಕಳನ್ನು ನೋಡಿದ ಹಾಗಾಗುತ್ತೆ" ವನಜಳ ಮಾತಿಗೆ ಒಪ್ಪಿ ಶಾಂತ ಟೆಲಿಗ್ರಾಂ ಕೊಡಿಸಿದಳು.

ಮಾರನೇ ದಿನವೇ, ಆಚಿ ತನ್ನ ಗಂಡ ಮಕ್ಕಳೊಡನೆ, ಗಾಬರಿಯಿಂದ ಬಂದಿಳಿದಳು. ಎಲ್ಲರೂ ಕ್ಷೇಮವಾಗಿರುವುದನ್ನು ಕಂಡಳು. ಆದರೂ ಅತ್ತೆ ಬಂದಿರುವುದರಿಂದ ಏನೋ ವಿಶೇಷತೆ ಇರಬೇಕೆಂದು ಊಹಿಸಿದಳು.

"ಏನತ್ತೆ ಏನು ವಿಶೇಷ? ಟೆಲಿಗ್ರಾಂ ಕೊಟ್ಟು ಕರೆಸಿಕೊಂಡಿದೀರಿ?" ತಮಾಷೆ ಮಾಡಿದಳು. ಶೇಷಾದ್ರಿ ವಾಪಸ್ಸು ಹೊರಟು ಹೋಗಿದ್ದ.

" ಏನಿಲ್ಲ..... ನಮ್ಮ ಸುಮಂತನ ಮದುವೆ ವಿಷಯವನ್ನು ಮಾತನಾಡೋಣ ಅಂತ...."

"ಮದುವೆ ಗೊತ್ತಾಯ್ತಾ? ಯಾರು ಹುಡುಗಿ? ನನಗೆ ತಿಳಿಸಲೇ ಇಲ್ಲ ನೀವ್ಗಳು"

ತಾಯಿಯ ಕಡೆ ನೋಡಿ ಆಕ್ಷೇಪಣೆ ಮಾಡಿದಳು.

"ಛೀ.... ಅನ್ನೋಕೆ ಅವಳೇ ಇಲ್ಲ. ಪುಳ್ಳೆ ಪೆಸ್ರು ರಾಮಕೃಷ್ಣ" ಅಂತ ಅಂತಾರಲ್ಲ ಹಾಗಾಯ್ತು.... ಹುಡುಗೀನ ನೋಡಿದ್ರೆ ತಾನೇ ಮದುವೆ...?"

"ಮತ್ಯಾಕೆ ಕರೆಸಿದ್ರಿ ನನ್ನನ್ನ......"

"ನಿಮ್ಮ ಕಡೆ ಯಾವುದಾದ್ರೂ ಚೆನ್ನಾಗಿರೋ ಹುಡುಗೀ ಇದಾಳಾ?"

"ಈ ತಕ್ಷಣಕ್ಕೆ ಹೇಗೆ ನೆನಪಿಗೆ ಬರುತ್ತೆ..... ಮೊದಲು ಹೊಟ್ಟೆಗೇನಾದ್ರೂ ಬೀಳಬೇಕು..."

"ರುಚಿ ರುಚಿಯಾಗಿ ಅಮ್ಮ ತಿಂಡಿ ಕಾಫಿ ಎಲ್ಲಾ ಮಾಡಿಕೊಡ್ತಾಳೆ.... ಆಗ ನೆನಪಿಗೆ ಬರಬಹುದು. ತವರಿಗೆ ಬಂದಿದೀನಿ ಅಂತ ತಿಂದು ಗಡದ್ದಾಗಿ ನಿದ್ದೆ ಹೊಡೆದು ಬಿಡಬೇಡ"

"ಗಡದ್ದಾಗಿ ನಿದ್ದೆ ಎಂದೂ ಹೊಡೆದವಳಲ್ಲ ನಾನು. ಅದರಲ್ಲೂ ಮದುವೆ ಆದ ಮೇಲಂತೂ ನಿದ್ದೆಯೇ ಸಾಲದು...."

"ಅದಕ್ಕೇ ಹಾಗಂದೆ. ನಿನ್ನ ಅಮ್ಮನಿಗೆ ಕೇಳಿಸಿದರೆ ಮಲಕ್ಕೋ ಮಲಕ್ಕೋ ಅಂತ ಉಪಚಾರ ಮಾಡ್ತಾನೇ ಇರ್ತಾಳೆ"

"ಹೌದು ಅತ್ತೆ.... ಒಂದು ಅರ್ಧ ದಿನವಾದ್ರೂ ಈ ಮಕ್ಕಳ ಜಗಳ ಕದನದ ಕಾಟವಿಲ್ಲದೇ ಹೆಬ್ಬಾವಿನಂತೆ ಮಲಗಿ ನಿದ್ದೆ ಮಾಡೋ ಆಸೆ ನನಗೆ....."

"ಅದು ಹೇಗೆ ಸಾಧ್ಯ? ಈ ಮಕ್ಕಳು ಇಷ್ಟು ದೊಡ್ಡೋವಾಗಿವೆ.... ಸದಾ ನಿನ್ನ ಸೆರಗು ಹಿಡಿದುಕೊಂಡೇ ಓಡಾಡುತ್ತವೆ. ಅದೇನು ಮುದ್ದು ಮಾಡಿ ಬೆಳೆಸಿದೀಯೋ....?" ಅಷ್ಟರಲ್ಲಿ ಶಾಂತ ಹೊರಬಂದು ನುಡಿದಳು.

"ಈ ಸಾರಿ ಇಲ್ಲೇ ಬಿಟ್ಟು ಹೋಗ್ತೀನಿ. ಅದ್ಹೇಗೆ ಬೆಳೆಸ್ತೀಯೋ ಬೆಳೆಸು"

"ಸಧ್ಯ ಸಾಕು ತಾಯೀ..... ನಿಮ್ಮಿಬ್ಬರನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡಿ ಪುಣ್ಯ ಕಟ್ಟಿಕೊಂಡಿದ್ದಾಗಿದೆ. ನನಗೆ ಅಷ್ಟೇ ಸಾಕು."

"ನಿಮ್ಮಪ್ಪ ಮಕ್ಕಳೇ ಬೇಡ... ನಾವಿಬ್ರೇ ಹಾಯಾಗಿರೋಣ ಅಂತ ಸದಾ ಹೇಳಿದ್ರಂತೆ. ಇದಕ್ಕೇಯೋ ಏನೋ...... ಆದರೇನು ಮಕ್ಕಳಿಲ್ಲದ ಮನೆ ಏನು ಚೆಂದ? ನನ್ನನ್ನು ಕೇಳು ನಾನು ಹೇಳ್ತೀನಿ."

"ಅತ್ತೆ.... ನೀವು ಒಂದೆರಡು ಮಕ್ಕಳನ್ನು ದತ್ತು ತಗೋಬಹುದಾಗಿತ್ತು..."

"ನನ್ನ ಮನಸ್ಸು ಒಪ್ಪಲಿಲ್ಲ. ಅದರದ್ದೇ ಒಂದು ಕತೆ... ಹೋಗಲಿ ಬಿಡು. ಆ ಮಾತೇಕೆ. ನಿನ್ನ ವಿಷಯ ಹೇಳು....."

"ಕರೆಸಿದ್ದು ನೀವು..... ನನ್ನ ವಿಷಯ ಏನಿದೆ?"

"ಮೊದಲು ನಿನ್ನ ಮಕ್ಕಳನ್ನು ಹತ್ತಿರದ ಪಾರ್ಕಿಗೆ ಕಳಿಸು. ನಿಧಾನವಾಗಿ ಮಾತನಾಡೋಣ."

"ಕರೆದುಕೊಂಡು ಹೋಗೋಕೆ ಯಾರಿದಾರೆ? ನಿಮ್ಮಪ್ಪನೂ ಮನೇಲಿಲ್ಲ."

"ಅಮ್ಮಾ ನೀನೇ ಕರೆದುಕೊಂಡು ಹೋಗಮ್ಮ....."

"ಹೂಂ. ಸರಿ. ಎಲ್ರೂ ಹೋಗೋಣ. ಅಲ್ಲಿ ಮಕ್ಕಳು ಆಡಿಕೊಳ್ಳುತ್ತವೆ. ನಾವು ಮಾತನಾಡೋಣ." ಶಾಂತ ಸರಸರನೆ, ತಿಂಡಿ ಮಾಡಿ ಕೊಟ್ಟಳು. ಅಷ್ಟರಲ್ಲಿ ಆಫೀಸ್ನಿಂದ ಸುಮಂತನೂ ಬಂದ.

"ಅದೇ ಆಚಿ..... ನೀನ್ಯಾವಾಗ ಬಂದೆಯೆ?..... ರಜಾ ಇತ್ತಾ?"

"ನಿಮ್ಮತ್ತೆ ಟೆಲಿಗ್ರಾಂ ಕೊಟ್ಟು ಕರೆಸಿಕೊಂಡಿದಾರೆ. ನಿನ್ನ ಮದುವೆ ವಿಷಯ ಮಾತನಾಡುಕ್ಕೆ...." ಸುಮಂತ ಬೆದರುತ್ತಾ ಅತ್ತೆಯ ಕಡೆ ನೋಡಿದ. ಏನೋ ಸಂಜ್ಞೆ ಮಾಡಿದ. ಆಚಿ ಕಣ್ಣರಳಿಸಿದಳು.

"ಏನೋ ಅದು..... ನಿಮ್ಮಿಬ್ಬರ ಗುಟ್ಟು... ನಮ್ಮ ಮನೆಯ ಹತ್ತಿರ ಒಬ್ಬಳು ಶೂರ್ಪನಖಿ ಇದಾಳೆ. ಅವಳನ್ನು ತಂದು ಕಟ್ಟಿ ಬಿಡ್ತೀನಿ ಅಷ್ಟೇ....."

"ಅವಳ ಕಿವಿ ಮೂಗು ಕತ್ತರಿಸಿ, ಕಾಡಿಗೆ ಓಡಿ ಹೋಗ್ತೀನಿ ಅಷ್ಟೇ....." ನಗುವಿನ ಅಬ್ಬರ, ಅಡಿಗೆ ಮನೆಗೆ ಕೇಳಿಸಿತ್ತು. ಶಾಂತ ಹೊರಬಂದಳು.

"ಓ.... ನೀನೂ ಬಂದ್ಯಾ? ತಡಿ ತಿಂಡಿ ಕಾಫೀನ ಕೊಡ್ತೀನಿ"

"ಪಾಪ.... ಅಮ್ಮ ಎಷ್ಟು ಕಷ್ಟ ಪಡ್ತಾಳೆ. ಸೊಸೆ ಬಂದರೆ ಅಮ್ಮನಿಗೆ ಎಷ್ಟೋ ನೆರವಾಗುತ್ತೆ......" ಸುಮಂತ ಕೇಳಿಸದವನಂತೆ, ಕೈಕಾಲು ತೊಳೆಯಲು ಹೊರಟು ಹೋದ.

"ನೀನು ನಿನ್ನ ಅತ್ತೆ ಹೇಗಿದೀರಿ...."

"ಈ ಮಕ್ಕಳು ಹುಟ್ಟೋವರೆಗೂ ಅವರು ಒಳ್ಳೆಯವರೇ ಆಗಿದ್ದರು. ಈ ಮಕ್ಕಳು ಚೇಷ್ಟೆ ಮಾಡಿದರೆ ಮಾತ್ರ ನನ್ನನ್ನೇ ಬೈತಾರೆ....."

"ಅವರ ಮೊಮ್ಮಕ್ಕಳೇ ತಾನೇ ಚೇಷ್ಟೆ ಮಾಡೋದು...."

"ನಾನು ಮುದ್ದು ಮಾಡಿ ಕೆಡಿಸಿದೀನೀಂತ ಅವರ ಆಕ್ಷೇಪಣೆ"

"ನಿಮ್ಮ ಮನೇಲಿ ಹೀಗೆ.... ನಮ್ಮ ಮನೇಲಿ..... ಮುದ್ದು ಮಾಡೋಕೆ ಚೇಷ್ಟೆ ಮಾಡೋಕೆ ಮನೆಯಲ್ಲಿ ಮಕ್ಕಳಿಲ್ಲ ಅಂತ.... ನಿಮ್ಮ ಅಜ್ಜಿ ನನ್ನನ್ನೇ ಬೈತಾರೆ...."

"ನೀವ್ಯಾಕೆ ಡಾಕ್ಟರಿಗೆ ತೋರಿಸಲಿಲ್ಲ......?"

"ಎಲ್ಲಾ ಆಯ್ತು....." ಅಂತ ಸುಳ್ಳು ಹೇಳಿ, ಮಾತನ್ನು ಬದಲಾಯಿಸಿದಳು.

"ನೀವು ಒಂದು ಮಗುವನ್ನು ದತ್ತು ತೆಗೆದುಕೊಳ್ಳಬೇಕಾಗಿತ್ತು...." ಶಾಂತ ಮತ್ತೆ ಕೆದಕಿದಳು.

"ಅದರ ಅಗತ್ಯ ನನಗೆ ಕಂಡು ಬರಲಿಲ್ಲ...."

"ಅಮ್ಮಂಗೆ ಅದೇ ಕೊರಗು......"

"ಆ ಕೊರಗು ನನಗಿಲ್ವಾ ಶಾಂತಾ...." ಈ ಮಾತಿಗೆ ಶಾಂತ ಸುಮ್ಮನಾದಳು.

"ಏ ಸೋಮಾ...... ನಿನಗೆ ಬೇಸರವಿಲ್ಲದಿದ್ದರೆ, ಈ ಮಕ್ಕಳನ್ನು ಪಾರ್ಕಿಗೆ ಕರೆದುಕೊಂಡು ಹೋಗ್ತೀಯಾ? ನಾವು ಮುಖ್ಯವಾದ ವಿಷಯವನ್ನು ಮಾತ್ನಾಡಬೇಕು...."

"ನನ್ಕೈಲಾಗುಲ್ಲ.... ನಾನು ಇವರ ಜೊತೆ ಆಡೋ ಹುಡುಗನಲ್ಲ...."

"ಹೋಗ್ರೋ... ನಿಮ್ಮ ಮಾಮನ್ನ ಒಂದಿಷ್ಟು ಗೋಳು ಹುಯ್ದುಕೊಳ್ರೋ" ಮಕ್ಕಳನ್ನು ಅಟ್ಟಲು ನೋಡಿದಳು. ಅವು ಒಂದು ಇಂಚೂ ಚಲಿಸಲಿಲ್ಲ. ಆಚಿ ತಳ್ಳಿದಳು. ಅವು ಮತ್ತು ಅಂಟಿಕೊಂಡವು.

"ಒಂದು ಫೆವಿಕಾಲ್ ; ಇನ್ನೊಂದು ಅರಾಲ್ಡೈಟ್....." ಸುಮಂತ ನಕ್ಕ. ಆಚಿ ರೇಗಿದಳು.

"ನಿನಗೆ ಗೋಂದು, ಪೇಸ್ಟ್ ಎಲ್ಲಾ ಹುಟ್ಟುತ್ತವೆ. ನೋಡ್ತಿರು...."

"ಇನ್ನು ಕಿತ್ತಾಡ್ತಿರಲ್ಲೇ..... ಅವನೂ ಮದುವೆಗೆ ಬಂದಿರುವ ಹುಡುಗ ಹಾಗೆಲ್ಲಾ ರೇಗಿಸಬೇಡ....."

"ನೀವು ಸುಮ್ಮನಿರಿ ಅತ್ತೆ. ನಾನು ಅಪರೂಪಕ್ಕೆ ಅದೂ ಇವನಿಗೋಸ್ಕರಾನೇ ಬಂದಿದೀನಿ. ಇವನು ಸುಮ್ಮನಿರಬಾರದಾ? ನಾನು ನಾಳೇನೇ ವಾಪಸ್ಸು ಹೊರಟು ಹೋಗ್ತೀನಿ... ನೀವೇ ನಮ್ಮ ಊರಿಗೆ ಬನ್ನಿ ಅತ್ತೆ."

"ಯಾವ ಬಸ್ಸಿಗೆ ಹತ್ತಿಸಲಿ? ಈ ಸಾರಿ ಸರಿಯಾದ ಶಕುನ ನೋಡಿಕೊಂಡೇ ಮನೆಯಿಂದ ಹೊರಡಿ... ಅತ್ತೆ....."

"ಶಾಂತಾ.... ಪರವಾಗಿಲ್ಲ ನಿನ್ನ ಮಗನೂ, ಚೆನ್ನಾಗಿ ಚುಡಾಯಿಸ್ತಾನೆ."

"ಅದೇನು ಶಕುನದ ಮಾತು..... ನೀವು ಶಕುನಾನ ನಂಬ್ತೀರಾ ಅತ್ತೆ?"

"ಒಮ್ಮೊಮ್ಮೆ ನಂಬಬೇಕಾಗುತ್ತದೆ..... ಒಮ್ಮೊಮ್ಮೆ ಶಕುನ ನಮ್ಮನ್ನು ನಂಬಿಸುತ್ತದೆ....."

"ಅತ್ತೆ ನೀವು ತುಂಬಾ ಚೆನ್ನಾಗಿ ಮಾತನಾಡ್ತೀರಿ. ಇಲ್ಲೇ ನಮ್ಮ ಮನೆಯಲ್ಲೇ ಇದ್ದು ಬಿಡಿ..."

"ನಿನ್ನ ಮದುವೆಯಾಗಲಿ. ಇಲ್ಲೇ ಇದ್ದು ಬಿಡ್ತೀನಿ. ನಮ್ಮ ಶಾಂತನ ರಕ್ಷಣೆಗೆ ಒಬ್ಬರು ಬೇಕಲ್ಲ" ಎಲ್ಲರಿಗೂ ನಗು ಬಂತು.

"ನೀವು ಹೀಗೆಲ್ಲಾ ಮಾತಾಡಿದ್ರೆ ನಾನು ಮದುವೇನೇ ಆಗುಲ್ಲ...." ಸುಮಂತ ಕೋಪವನ್ನು ನಟಿಸಿದ.

"ನೀವು ಮದುವೆಗೆ ಮೊದಲೇ ಕಿತಾಪತಿ ಮಾಡ್ತಿರುವ ಹಾಗೆ ಕಾಣ್ತಿದೆ" ಶಾಂತ ನುಡಿದಳು.

"ಹಾಗಲ್ಲ ಶಾಂತಾ. ಅತ್ತೆ ಸೊಸೆ ಅಂದರೆ...... ಮನಸ್ತಾಪ ಬಂದೇ ಬರುತ್ತೆ.... ಅತ್ತೆಯ ಸಪೋರ್ಟ್‌ಗೆ ಯಾರಾದ್ರೂ ಬೇಕಲ್ಲ.... ಅದಕ್ಕೇ ಹೇಳಿದೆ"

ಹೀಗೆ ಅಗತ್ಯವಿಲ್ಲದ, ಅನಗತ್ಯವಲ್ಲದ ಮಾತುಕತೆಗಳಲ್ಲಿ ಸಮಯ ಹೋದುದೇ ತಿಳಿಯಲಿಲ್ಲ. ಯಾರೂ ಹೊರಗೆ ಹೋಗಲೂ ಇಲ್ಲ. ಅಂಗಡಿಯ ಕೆಲಸ ಮುಗಿಸಿ ರಾಮಸ್ವಾಮಿಯೂ ಬಂದ. ಎಲ್ಲರೂ ಬಿಸಿ ಬಿಸಿಯಾಗಿ ಊಟ ಮಾಡುತ್ತಾ ಮತ್ತಷ್ಟು ಹರಟೆ ಹೊಡೆದರು. ಮಕ್ಕಳು ಮಲಗಿದ ಮೇಲೆ, ಆಚಿ, ತನ್ನ ಅತ್ತೆ ಹಾಗೂ ತಾಯಿಯೊಡನೆ ಮತ್ತೆ ಮಾತು ಪ್ರಾರಂಭಿಸಿದಳು. ಅವರಿಬ್ಬರೂ ಅವರವರ ಅತ್ತೆಯ ಮೇಲಿನ ಚಾಡಿ ಮಾತುಗಳನ್ನಾಡುತ್ತಿದ್ದರೆ, ಶಾಂತ ತನ್ನದೇ ಆದ ಆಲೋಚನೆಗಳಲ್ಲಿ ಮುಳುಗಿ ಹೋದಳು.

"ಆಚಿ, ನಿಮ್ಮ ಪಕ್ಕದ್ಮನೆ ರಾಧಮ್ಮನ ಮನೇಲಿ ಒಂದು ಹುಡುಗಿ ಇದೆಯಲ್ಲಾ ನೋಡಿದೀಯ" ವನಜಾ ಪ್ರಶ್ನಿಸಿದಳು.

"ಇಲ್ಲ ಅತ್ತೆ.... ಯಾಕೆ? ನೀವು ನೋಡಿದೀರಾ? "

" ಹೂಂ. ಒಂಥರಾ ಚೆನ್ನಾಗಿದಾಳೆ. ಅದಕ್ಕೇ ಕೇಳಿದೆ... ನೀನು ನೋಡಿದೀಯ ಶಾಂತ....?"

"ಸರಿಯಾಗಿ ನೋಡಿಲ್ಲ.... ಎಲ್ಲೋ ಕೆಲಸಕ್ಕೆ ಹೋಗುತ್ತಂತೆ. ಪಾಪ ಯಾರೋ ಅನುಕೂಲವಿಲ್ಲದವರ ಮನೆ ಹುಡುಗಿಯಂತೆ. ಊಟ ಹಾಕಿ, ತಮ್ಮಲ್ಲೇ ಇಟ್ಟುಕೊಂಡಿದಾರೆ....."

"ಚೆನ್ನಾಗಿ ಮನೆ ಕೆಲಸವನ್ನು ಮಾಡಿಸಿ ಕೊಳ್ತಾರೇನೋ.....?"

"ಹುಂ ಮತ್ತೆ. ಬಿಟ್ಟಿ ಅನ್ನ ಹಾಕಿದ ಮೇಲೆ ಬಿಡ್ತಾರಾ? ಹಿಂದೆಲ್ಲಾ ವಾರಾನ್ನದ ಹುಡುಗರು ಬರೋದನ್ನೇ ಕಾದಿದ್ದು. ಬಾವಿಯಿಂದ ನೀರನ್ನು ಸೇರಿಸಿ ಕೊಳ್ಳೋದು,

ಅಂಗಡಿಗೆ ಕಳಿಸೋದು ಅದೂ ಇದು ಬಿಟ್ಟಿ ಕೆಲಸ ಮಾಡಿಸಿ ಕೊಳ್ಳುತ್ತಿದ್ದರಂತಲ್ಲ ಹಾಗೆ...."

"ಬಡ ಹುಡುಗರು, ಓದೋಕ್ಕೋಸ್ಕರ ಎಷ್ಟು ಕಷ್ಟ ಪಡುತ್ತಿದ್ದರಂತೆ ಗೊತ್ತಾ ಆಚೀ...."

"ಯಾರೂ ಅಷ್ಟು ಬಡವರು ಇರುಲ್ಲ ಬಿಡು ಶಾಂತ.... ಅವರವರ ಹಳ್ಳೀಲಿ ಸ್ಕೂಲು ಇರುತ್ತಿರಲಿಲ್ಲ. ಬೇರೆ ಊರಿಗೆ ಓದೋಕ್ಕೇಂತ ಕಳಿಸುತ್ತಿದ್ದರು. ಮಕ್ಕಳ ಹತ್ತಿರ ಕೆಲಸ ಮಾಡಿಸ್ಕೋತಾರೆ ಅಂತ ಅವರಿಗೆ ಬೇಜಾರೇ ಆಗ್ತಿರಲಿಲ್ಲವಂತೆ"

"ಆ ಕಾಲವೇ ಇಲ್ಲ ಈಗ. ಹೆಣ್ಣು ಮಕ್ಕಳು ಸಹ ಓದೋದು, ಕೆಲಸಕ್ಕೆ ಸೇರೋದು ಸರ್ವೇ ಸಾಮಾನ್ಯವಾಗಿ ಹೋಗಿದೆ" ಆಚಿ ಹೇಳಿದಳು.

"ಹೆಣ್ಣು ಮಕ್ಕಳು ಕೆಲಸಕ್ಕೆ ಯಾಕೆ ಹೋಗಬೇಕು.... ವಿಪರೀತ ಓದಿದಷ್ಟೂ, ಮನೇಲಿ ಕಾಲು ನಿಲ್ಲುಲ್ಲ. ಕೆಲಸಕ್ಕೆ ಹೋಗುತ್ತವೆ."

"ಅದಕ್ಕೇ ನನ್ನ ಓದು ಬಿಡಿಸಿ, ಮದುವೆ ಮಾಡಿ, ಮನೆಯಿಂದ ಅಟ್ಟಿದೆಯಲ್ಲ. ಅತ್ತೆ ಮನೆ ಚಾಕರಿ ಮಾಡು ಅಂತ" ಆಚಿ ಮತ್ತೆ ಹೇಳಿದಳು.

"ನೋಡು ವನಜಾ ಹೇಗಾಡ್ತಾಳೆ. ನಾನು ಏನೋ ಇವಳ ಶತ್ರು ತರಹ ಅನ್ನೋ ಹಾಗೆ ಮಾತಾಡ್ತಾಳೆ"

"ನನಗೂ ತುಂಬಾ ಓದಬೇಕೂಂತ ಆಸೆ ಇತ್ತು. ಕೆಲಸಕ್ಕೆ ಸೇರಿದ್ದರೆ ನಾನು ಸುಮಂತನ ಹಾಗೆ ಸಂಪಾದಿಸ್ತಿದ್ದೆ."

"ಹೆಣ್ಣು ಮಕ್ಕಳನ್ನ ಹೊರಗೆ ಕೆಲಸಕ್ಕೆ ಕಳಿಸಿ, ಸಂಪಾದಿಸಿ ತಂದು ಹಾಕಲಿ ಅನ್ನೋ ಆಸೆ ನಮಗಿರಲಿಲ್ಲ"

"ನಿನ್ನ ಸೊಸೆ ಕೆಲಸಕ್ಕೆ ಹೋಗ್ತೀನಿ ಅಂತ ಹಠ ಮಾಡಿದರೆ ಏನ್ಮಾಡ್ತೀಯ.....?" ವ್ಯಂಗ್ಯವಾಗಿ ಕೇಳಿದಳು.

"ಕಾಲು ಮುರಿದು ಕೈಗೆ ಕೊಡ್ತೀನಿ. ಓದಿರೋ ಹೆಣ್ಣೇ ಬೇಡ ನಮಗೆ. ಮನೆ ಕೆಲಸ ಕಾರ್ಯ ಬಲ್ಲ, ಹಳ್ಳಿ ಹುಡುಗಿಯೇ ಸಾಕು" ವನಜ ನಕ್ಕಳು.

"ಹಳ್ಳಿ ಹಳ್ಳಿಗೆ ಹೋಗಿ ಜಾಲಾಡಿದರೂ, ನಿನಗೆ ಓದದೇ ಇರೋ ಹುಡುಗಿ ಯಾರೂ ಸಿಗುಲ್ಲ. ಈಗಿನ ಕಾಲದ ಹುಡುಗಿಯರಿಗೆ, ತಾವೂ ಓದಿ, ಕೆಲಸಕ್ಕೆ ಸೇರಿ ತಾವು ಸಂಪಾದಿಸಬೇಕೆಂಬ ಛಲ ಇರುತ್ತೆ... ನನ್ನ ಹಾಗೆ, ಓದು ಬಿಟ್ಟು ಮದುವೆಯಾಗಿ ಗೂಬೆ ತರಹ ಯಾರಿರುತ್ತಾರೆ?"

"ಚೆನ್ನಾಗಿದೆ. ಒಳ್ಳೆ ಕಡೆ ಕೊಟ್ಟು, ಮಗಳು ಸುಖವಾಗಿರಲಿ ಅಂತ ನಾವು ಮಾಡಿದ್ದನ್ನು ತಪ್ಪು ಅಂತ ಜರಿಯುತ್ತಿದೀಯಲ್ಲ. ನಿಮ್ಮಪ್ಪ ಮನೆಗೆ ಬರಲಿ....."

"ತಾಯಿ ಮಗಳು ಏನೋ ಆಗಬಾರದ್ದು ಆಗಿ ಹೋಯ್ತು ಅನ್ನೋ ಹಾಗೆ ಮಾತಾಡ್ತಿದೀರಲ್ಲ. ಹೋಗಲಿ ಬಿಡು ಆಚಿ. ನೀನು ಇಷ್ಟಪಟ್ಟರೆ ಈಗಲೂ ಓದಬಹುದು. ಆದರೆ ನಾನು ಹೇಳ್ತೀನಿ. ಸುಮಂತನಿಗೆ ಓದಿರದ ಹೆಣ್ಣು ಖಂಡಿತಾ ಸಿಗುಲ್ಲ"

"ಹಾಗಂತೀರಾ....?" ಶಾಂತ ಪೆಚ್ಚಾಗಿದ್ದಳು. ವನಜ ಮತ್ತೆ ನುಡಿದಳು. ಹುಡುಗಿಯರು ಓದಿದ್ದರೆ ಇನ್ನು ತಿಳುವಳಿಕಸ್ಥರಾಗಿರುತ್ತಾರೆ. ನಿನ್ನ ಸೊಸೆ ವಿದ್ಯಾವಂತೆ ಯಾಗಿರಲಿ ಅಂತ ನಿನಗೆ ಆಸೆ ಇಲ್ವಾ?"

"ಈಗಿನ ಕಾಲದ ಹುಡುಗಿಯರಿಗೆ ಜಂಭ ಬಂದು ಬಿಟ್ಟಿರುತ್ತೆ. ಹಿರಿಯೋರು ಅಂದರೆ ಅಸಡ್ಡೆ....."

"ಅದೆಲ್ಲಾ ಸುಳ್ಳು.... ನಾನು ಸ್ವಲ್ಪ ಓದಿದೀನಿ. ಎಲ್.ಎಸ್.ಮಾಡಿದೀನಿ. ನಾನು ನಿಮ್ಮ ಅಪ್ಪ ಅಮ್ಮನಿಗೆ ಗೌರವ ಕೊಡುಲ್ವಾ? ಅಸಡ್ಡೆ ಮಾಡ್ತೀನಾ? ನನ್ನ ಕಾಲಕ್ಕೆ ನಮ್ಮೂರಿಗೆ ನಾನೇ ಗ್ರಾಜುಯೇಟ್. ನನಗೂ ಜಂಭ ಇತ್ತು.... ನಾನೇ ವಿದ್ಯಾವಂತೆ ಅಂತ......"

"ಅಮ್ಮ ನೀನು ಹೆಚ್ಚಿಗೆ ಓದಿಲ್ಲ. ಆದರೆ ನಿನಗೆ ಕಮ್ಮಿ ಜಂಭವಿಲ್ಲ. ಅತ್ತೆ ಮಾವ ನಿನಗಿರಲಿಲ್ಲ. ಆದರೆ ನೀನು ಅಪ್ಪನ್ನ ಬಹಳ ಅಸಡ್ಡೆಯಾಗಿ ಎಷ್ಟೋ ಸಲ ಬೈದಿದೀಯ. ನಮಗೂ ಗೊತ್ತು" ಆಚಿ ನುಡಿದಳು.

"ಸಾಕು ಸುಮ್ಮನಿರೇ.... ನಿಮ್ಮಪ್ಪನ ನಾನು ಎಂದಾದ್ರೂ ಆಡಿ ಅಂದು ಮಾಡಿದ್ದರೆ ಅದು ಬೇರೆ ಕಾರಣಕ್ಕೆ. ಅದೆಲ್ಲಾ ನಿಮಗೆ ತಿಳೀದು ಬಿಡು."

"ಅದು ಬಿಡು. ನಿಮ್ಮಣ್ಣ..... ನಿಮ್ಮಣ್ಣನಿಂದ ನನಗೆಷ್ಟು ದ್ರೋಹವಾಗಿದೆ ಅಂತ ನಿಮಗ್ಯಾರಿಗೂ ತಿಳಿಯದು. ನಾನು ಅವರ ತಂಟೆಗೆ ಹೋಗುಲ್ಲ ಅಷ್ಟೇ..... ನಿಮ್ಮ ಅಪ್ಪನಿಗೆ ನೋವಾಗಬಾರದು ಅಂತ ನಾನು ಎಲ್ಲವನ್ನು ಸಹಿಸಿಕೊಂಡಿದೀನಿ. ಇದು, ನನ್ನ ವಿದ್ಯೆ ನನಗೆ ಕೊಟ್ಟ ತಿಳುವಳಿಕೆ. ಅನಾಗರಿಕ ಹೆಂಗಸಿನಂತೆ ನಾನೂ ನಾಲ್ಕು ಜನರೆದುರಿಗೆ ಕೂಗಾಡಿದ್ದರೆ. ನಿಮ್ಮ ಮನೆತನದ ಗೌರವ ಏನಾಗುತ್ತಿತ್ತು... ವಿದ್ಯೆ ಜನ ಜೀವನಕ್ಕೆ ಸಹಾಯಕವಾಗುತ್ತದೆ. ನಿರುಪಯೋಗ ಮಾತ್ರ ಖಂಡಿತಾ ಅಲ್ಲ" ಅಷ್ಟು ಹೇಳಿ ಸುಮ್ಮನಾದಳು.

* * *

## - - 21 - -

ಒಂದೆರಡು ದಿನಗಳ ತರುವಾಯ, ಅವರವರ ಊರುಗಳಿಗೆ ವಾಪಸ್ಸು ಹೊರಟು ಹೋಗಿದ್ದರು. ಹೊರಡುವ ಮೊದಲು, ಸುಮಂತನಿಗೆ ಹೇಳಿದ್ದಳು.

"ನಿಮ್ಮಮ್ಮ ಹಳೇ ಕಾಲದವಳು. ಸ್ವಲ್ಪ ಸಂಪ್ರದಾಯಸ್ಥಳು. ಅಲ್ಲದೇ ಸ್ವಲ್ಪ ಅವಳದ್ದೇ ಅವಳಿಗೆ. ಮನೆಯಲ್ಲಿ ಅವಳದ್ದೇ ಸಾಮ್ರಾಜ್ಯ. ತನ್ನ ಮಾತಿನಂತೆ ನಡೆಯ ಬೇಕು ಅನ್ನೋ ಹಠ.... ನಿಮ್ಮಪ್ಪನೂ ಯಾವ ತಂಟೆಗೆ ಬರೋರಲ್ಲ. ಆದರೆ ಹಾಗಂತ ನೀನು ನಿರಾಶನಾಗಬೇಡ. ನಿನಗಿಷ್ಟವಾದ ಹುಡುಗಿಯನ್ನು ಮದುವೆಯಾಗುವ ಹಕ್ಕು ನಿನಗಿದೆ. ನಿಮ್ಮಮ್ಮ ಎಷ್ಟೇ ಬಲವಂತ ಮಾಡಿದರೂ, ಅವಳಿಷ್ಟದ ಹುಡುಗಿಯನ್ನು ಮದುವೆಯಾಗೇಡ. ನಾನು ನಿನ್ನ ಪಕ್ಷದಲ್ಲಿದೀನಿ. ಸಮಯ ಬಂದಾಗ ನಿನ್ನ ಪರ ವಹಿಸಿ ಮಾತನಾಡ್ತೀನಿ. ಧೈರ್ಯವಾಗಿರು."

ಆಚಿ, ತಮ್ಮನೊಡನೆ ಮಾತನಾಡಿದಳು.

"ನಿನ್ನ ಓದಿಗೆ, ನಿನ್ನ ಅಭಿರುಚಿಗೆ ತಕ್ಕಂತಹವಳನ್ನೇ ಮದುವೆಯಾಗು. ಅಮ್ಮನ ಬಲವಂತಕ್ಕೆ ಯಾವುದೋ ಗೊಡ್ಡು ಸಂಪ್ರದಾಯದ ಹುಡುಗೀನ ಮಾತ್ರ ಮದುವೆಯಾಗಬೇಡ. ನಿನಗೆ ತಕ್ಕ ಹುಡುಗಿಯನ್ನು ನಾನು ಹುಡುಕ್ತೀನಿ......"

"ಆಚಿ, ಒಂದು ವಿಷಯ...... ನಾನು ಒಬ್ಬಳು ಹುಡುಗೀನ.... ಇಷ್ಟ ಪಟ್ಟಿದೀನಿ......"

"ಆಂ ಏನಂದೆ? ಅಮ್ಮನಿಗೆ ಗೊತ್ತಾ? ಈ ಮೊದಲೇ ನನಗೇಕೆ ಹೇಳಲಿಲ್ಲ.... ಯಾರವಳು?"

"ರಾಧಮ್ಮನ ಮನೇಲಿರೋ ಪೇಯಿಂಗ್ ಗೆಸ್ಟ್. ಅತ್ತೆಗೆ ಈ ವಿಷಯ

ಗೊತ್ತು.ಅವರಿಗೆ ಅವಳ ಫೋಟೋ ತೋರಿಸಿದ್ದೆ."

"ಅತ್ತೆ ಯಾಕೆ ಹೇಳಲಿಲ್ಲ?.....ನನಗಾದ್ರೂ ಹೇಳಬಹುದಿತ್ತು. ಹೋಗಲಿ ಬಿಡು ಅಮ್ಮನ ಮನಸ್ನಲ್ಲಿ ಏನಿದೆ ಅಂತ ತಿಳೀತಲ್ಲ. ರಾಧಮ್ಮನ ಸಂಬಂಧಿಯನ್ನು ಅಮ್ಮ ಮಾತ್ರ ಖಂಡಿತಾ ಒಪ್ಪಲ್ಲ.... ಹೋಗೀ ಹೋಗಿ ನೀನೇಕೆ ಅವಳನ್ನು ಪ್ರೀತಿಸಿದೆ? ನಿನಗೆ ಹೇಗೆ ಸಿಕ್ಕಳು....?"

"ಅವಳು ನನ್ನ ಆಫೀಸ್ನಲ್ಲೇ ನನ್ನ ಜೊತೆ ಕೆಲಸ ಮಾಡ್ತಾಳೆ....."

"ಈಗ ಹೇಳ್ತಿದೀಯಲ್ಲ. ಮುಂಚೇನೇ ಹೇಳಿದ್ರೆ ನಾನು ಹೋಗಿ ನೋಡಿಕೊಂಡು ಬಂದಿರುತ್ತಿದ್ದೆ..... ಹಾಗೇ ಮಾತನಾಡಿಸುತ್ತಿದ್ದೆ"

"ಅತ್ತೆ ನಿನಗೆ ಎಲ್ಲಾ ಹೇಳಿರ್ತಾರೆ ಅಂತ ಅಂದುಕೊಂಡಿದ್ದೆ. ಈ ಎರಡು ಮೂರು ದಿನಗಳು ಏನು ಮಾತನಾಡಿದ್ರಿ?" ಏನಿಲ್ಲವೆನ್ನುವಂತೆ ತಲೆಯಾಡಿಸಿದಳು.

"ನಿನಗೆ ಮದುವೆಗೆ ಏನು ಅವಸರವಿಲ್ಲ ತಾನೇ..... ನಿಮ್ಮ ಪ್ರೀತಿ ಹೇಗಿದೆ?"

"ಹೇಗಿದೆ ಅಂದ್ರೆ....? ಚೆನ್ನಾಗಿದೆ. ಆಫೀಸ್ನಲ್ಲಿ ಸಮಯ ಸಿಕ್ಕಾಗ ಸುಮ್ಮನೇ ಮಾತಾಡ್ತೀನಿ. ಅಷ್ಟೇ....."

"ಅಷ್ಟೇನಾ? ಹೋಟೆಲ್ಲು, ಸಿನಿಮಾ.... ಪಾರ್ಕು ಪಿಕ್‌ನಿಕ್ ಏನಿಲ್ವಾ....."

"ಏ..... ಹೋಗೇ..... ನಾವು ಸಿನಿಮಾದ ನಾಯಕ ನಾಯಕಿಯರೇನಲ್ಲ. ನಿಜ ಜೀವನದ ಪ್ರೇಮಿಗಳು......."

"ನಿಜ ಜೀವನದ ಪ್ರೇಮಿಗಳೇ. ಯಾವುದಕ್ಕೂ ಅವಸರಿಸದಿರಿ.... ತಾಳ್ಮೆಯಿಂದಿರಿ. ಒಂದಲ್ಲ ಒಂದು ಪರಿಹಾರ ದೊರತೇ ದೊರೆಯುತ್ತೆ. ನಂತರ ಸತಿಪತಿಗಳಾಗಿ ಸಂತಸದಿಂದಿರಿ...." ನಾಟಕೀಯವಾಗಿ ಹಾರೈಸಿದಳು.

"ತಾಳ್ಮೆ, ಸಹನೆಗೆ ಸಮಯವೆಲ್ಲಿದೆ? ಇದು ಆಧುನಿಕ ಯುಗ. ಕಂಪ್ಯೂಟರ್ ಕಾಲಿಟ್ಟಿದೆ. ನಮಗಾಗಿ ಸಮಯ ಕಾಯುಲ್ಲ. ಸಮಯ ಸಿಕ್ಕಾಗ ನಾವು ಸಾಧಿಸಿಕೊಳ್ಳಬೇಕು"

"ನಿನಗೇ ಇಷ್ಟೆಲ್ಲಾ ತಿಳುವಳಿಕೆ ಇದೆ. ನೀನೇ ಒಂದು ತೀರ್ಮಾನ ತೆಗೆದುಕೊಂಡು ಬಿಡು....."

"ನಾನು ಅವಳನ್ನೇ ಮದುವೆಯಾಗೋದು ಅಂತ ತೀರ್ಮಾನಿಸಿ ಬಿಟ್ಟಿದೀನಿ. ಆದರೆ ಅಮ್ಮ ಒಪ್ತಾಳೆ ಅನ್ನೋ ನಂಬಿಕೆ ನನಗಿಲ್ಲ. ಅತ್ತೆಗೂ ಹೇಳಿದೀನಿ. ನಿನಗೂ ಹೇಳಿದೀನಿ. ಅಮ್ಮನ್ನ ಒಪ್ಪಿಸೋ ಜವಾಬ್ದಾರಿ ನಿಮ್ಮದು..."

"ಯಾಕೇ..... ಆಮೇಲೆ ಅಮ್ಮನ್ನ ಕೈಲಿ ನಾನು ಬೈಯಿಸಿಕೊಳ್ಳಲಾ?...."

"ಬೈದರೇನಂತೆ.... ನೀನು ನಿನ್ನ ಪಾಡಿಗೆ ನಿನ್ನ ಮನೆಗೆ ಹೋಗ್ತೀಯ. ಅತ್ತೆ ಅವರ ಮನೆಗೆ ಹೋಗ್ತಾರೆ"

"ನಿಮ್ಮಿಬ್ಬರನ್ನು ಅಮ್ಮ ಬೈತಾನೇ ಇರ್ತಾಳಲ್ಲೋ..... ನೀನೂ ಅತ್ಲಾಗೆ ಬೇರೆ ಮನೆ ಮಾಡಿಕೊಂಡು ಹೊರಟು ಹೋಗು...."

"ಈ ಮಾತನ್ನು ನೀನು ಹೇಳ್ತೀಯ ಅಂತ ನಾನು ಅಂದುಕೊಂಡಿರಲಿಲ್ಲ ನಾನು. ನಾನು ಅಷ್ಟು ಸ್ವಾರ್ಥಿಯಾಗಬೇಕಾ?"

"ನಾನು ಹೇಳೋ ಪರಿಹಾರ ನಿನಗೆ ಬೇಕಾಗಿಲ್ಲ. ಒಂದು ಕೆಲಸ ಮಾಡು ಅಪ್ಪನಿಗೆ ಎಲ್ಲಾ ಹೇಳು. ಅವರೇ ನಿನಗೆ ಮಾರ್ಗ ತೋರಿಸ್ತಾರೆ"

"ಅಪ್ಪನಿಗೆ ಗೊತ್ತು... ಅಂತ ಕಾಣುತ್ತೆ. ಆದರೆ ಏನೂ ಹೇಳಲಿಲ್ಲ"

"ಅವರೂ ಅಮ್ಮನಿಗೆ ಹೆದರ್‍ತಾರೆ. ಎಲ್ಲರ ಮನೇಲೂ ಈ ಅಮ್ಮಂದಿರದೇ ರಾಜ್ಯಭಾರವಾಗಿ ಹೋಗಿದೆ. ಗಂಡ ಮಗ ಮಕ್ಕಳು ಎಲ್ಲಾ ತನ್ನ ಮಾತನ್ನೇ ಕೇಳಲಿ ಅನ್ನೋ ಆಸೆ...."

"ಮುಂದೆ ನೀನೂ ಅದೇ ಸಾಲಲ್ಲಿ ಹೋಗುವವಳೇ....."

"ಇಲ್ಲಪ್ಪಾ.... ಇದನ್ನೆಲ್ಲಾ ನೋಡಿ ನಾನು ಬದಲಾಗಿದೀನಿ..... ಮೊದಲು ರಾಧಮ್ಮನ ಮನೇಲಿರುವ ಹುಡುಗಿ... ಅವಳ ಹೆಸರು ಏನಂದೆ.....?"

"ತಾರಾ....."

"ಹುಂ ತಾರಾ..... ಅವಳ ಜಾತಕ, ಫೋಟೋ..... ವಿವರಗಳನ್ನೆಲ್ಲ ನನಗೆ ಕಳಿಸಿಕೊಡು.... ಆಮೇಲೆ ಏನು ಮಾಡಬೇಕೂಂತ ಹೇಳ್ತೀನಿ. ಹಾಗೇ ನಾನು ಅಪ್ಪನ ಹತ್ತಿರ ಮಾತಾಡ್ತೀನಿ. ಅವರು ಈಗಲಾದ್ರೂ ಅಮ್ಮನ ವಿರುದ್ಧ ಹೋರಾಡಲೇ ಬೇಕು....."

"ಆಮೇಲೆ ಒಂದು ಯುದ್ಧಾನೇ ನಡೆದು ಬಿಡುತ್ತೆ ಅಷ್ಟೇ......"

"ನಮ್ಮ ಕೆಲಸವಾಗಬೇಕಾದರೆ, ಯುಕ್ತಿ ಇರಬೇಕು. ಯುದ್ಧ ಮಾಡಬೇಕು. ಆಗಲೇ ನಮಗೆ ಜಯ....."

"ಇಷ್ಟೆಲ್ಲಾ ಎಲ್ಲಿ ಕಲಿತೆಯೇ ಆಚಿ..... ಇಲ್ಲಿದ್ದಾಗ ಪೆದ್ದು ಪೆದ್ದಾಗಿದ್ದೆ....."

"ಹುಂ. ನಾನೇನು ಪೆದ್ದಲ್ಲ, ಪೆದ್ದ ಸೋಮಾರಿ ಎಲ್ಲಾ ನೀನೇ...... ನಾನು ಪೆದ್ದಿಯಾಗಿದ್ರೆ ನನಗೇಕೆ ಇದನ್ನೆಲ್ಲ ನೀನು ಹೇಳ್ತಿದ್ದೆ....."

"ನಾನೂ ಪೆದ್ದಲ್ಲ. ಅಮ್ಮನ ಮುದ್ದಿನ ಮಗನಾಗಿ ಬೆಳೆದು ಬಿಟ್ಟೆ. ಈಗ ಅದೇ ಕಷ್ಟಕ್ಕೆ ಬಂದಿರೋದು."

"ನಿನ್ನಂಥೋನಿಗಲ್ಲ ಕಣೋ ಈ ಪ್ರೀತಿ ಗೀತಿ ಎಲ್ಲಾ....."

"ನನಗೂ ಆ ಆಸೆ ಏನೂ ಇರಲಿಲ್ಲ. ಅದ್ಹೇಗೋ ಗೊತ್ತಿಲ್ಲ. ತಾನಾಗಿಯೇ ಈ ಪ್ರೀತಿ ಹುಟ್ಟಿ ಬಿಡ್ತು..."

"ಅವಳಲ್ಲಿ ಯಾವ ಗುಣ ನಿನಗೆ ಇಷ್ಟವಾಯ್ತು?"

"ಅದೇನು ಅಂತ ನನಗೂ ಗೊತ್ತಿಲ್ಲ. ಇನ್ನೊಂದು ದಿನ ಯೋಚಿಸಿ ಹೇಳ್ತೀನಿ. ಈಗ ಹೊರಡು. ಲೇಟಾಗುತ್ತೆ. ಮರೀ ಬೇಡ. ಅಪ್ಪನ ಹತ್ತಿರ ಮಾತಾಡು."

"ನೀನೂ ಅಷ್ಟೇ.... ನನಗೆ ಅದನ್ನೆಲ್ಲ ಕಳಿಸಿಕೊಡು"

ಬಾಗಿಲ ಬಳಿ ನಿಂತಿದ್ದ ಶಾಂತ ಅನುಮಾನದಿಂದ ಮಗನ ಕಡೆ ನೋಡಿದಳು. "ಏನು ಹೇಳಿಕೊಟ್ಟೆ ನನ್ನ ಮಗನಿಗೆ.....?"ತಡೆಯಲಾರದೇ ಕೇಳಿದಳು.

"ನಾನೂ ಏನೂ ಹೇಳಕೊಡಬೇಕಾಗಿಲ್ಲ. ಅವನು ನನಗಿಂತ ಜಾಣ.... ನನಗೇ ಹೇಳಿಕೊಡುತ್ತಿದ್ದ......."

"ಅದೇನು ಮಾತೋ ಅದೆಲ್ಲ ನಿನಗೇ ಅರ್ಥವಾಗಬೇಕು."

"ಏನಮ್ಮಾ ಹೀಗಂತೀ... ಅಕ್ಕ ತಮ್ಮ ಅಂದರೆ, ಸಾವಿರ ಮಾತಿರುತ್ತೆ. ಅದನ್ನೆಲ್ಲ ನಿನಗೆ ಹೇಳೋಕಾಗುತ್ತಾ?"

"ಹೇಳಬೇಡಮ್ಮಾ.... ಹೇಳಬೇಡ..... ಒಂದು ಗಳಿಗೆ ಕಿತ್ತಾಡ್ತೀರಿ...... ಇನ್ನೊಂದು ಗಳಿಗೆ ಗುಸುಪಿಸು ಅಂತ ಮಾತಾಡ್ತೀರಿ. ನನಗ್ಯಾಕೆ ಅದೆಲ್ಲಾ"

"ಮತ್ತೇಕೆ ಕೇಳಿದೆ?....."

"ಹೊತ್ತಾದ್ರೂ ಹರಟ್ತಾ ನಿಂತಿದೀಯಲ್ಲ ಅಂತ ಕರೆದೆ.... ನಿಮ್ಮಪ್ಪ ಆಟೋ

ರಿಕ್ಷಾ ತರೋಕೆ ಹೋಗಿದಾರೆ......" ಆಟೋ ರಿಕ್ಷಾ ಗೇಟಿನ ಬಳಿ ನಿಂತಿತು. ಆಚಿ ಮಕ್ಕಳೊಡನೆ ಹತ್ತಿದಳು. ಮಕ್ಕಳು, ಅಜ್ಜಿಗೆ, ಮಾವನಿಗೆ ಟಾ ಟಾ ಮಾಡಿದವು. ಕಡೆಯಲ್ಲಿ ರಾಮಸ್ವಾಮಿ ತಾನೂ ಹತ್ತಿ ಕುಳಿತ. ಆಟೋ ಹೊರಟಿತು.

ಪ್ರೀತಿಸುವುದು ತಪ್ಪಲ್ಲ ; ಪ್ರೀತಿಸಿದವಳನ್ನೇ ಮದುವೆಯಾಗಬೇಕು. ಅವಳ ಕೈ ಬಿಡಬಾರದು.... ಅಮ್ಮನ್ನ ಕೇಳಿ ಪ್ರೀತಿಸಲಿಲ್ಲ ನಿಜ..... ಆದರೆ ಅಮ್ಮನಿಗೆ ತಿಳಿಯದಂತೆ ಮದುವೆಯಾಗುವುದು ಮಾತ್ರ ತನ್ನಿಂದ ಸಾಧ್ಯವಿಲ್ಲ. ತಾರಾಳಿಗೂ ಇದೇ ಅಭಿಪ್ರಾಯವಿರಲೇ ಬೇಕು. ಇದೆಲ್ಲಾ ಒಂದು ನಿರ್ಧಾರಿತ ರೂಪ ಪಡೆಯುವವರೆಗೂ ತಮ್ಮ ಪ್ರೀತಿ ಬಗ್ಗೆ ಯಾರಿಗೂ ತಿಳಿಯಬಾರದು ಎಂದುಕೊಂಡ. ಅದೇ ವಿಷಯವಾಗಿ ತಾರಾಳೊಡನೆ ಮಾತನಾಡಿದ.

"ನಮ್ಮ ಪ್ರೀತಿಯ ಬಗ್ಗೆ ಈಗಲೇ ಯಾರಿಗೂ ತಿಳಿಯಕೂಡದು. ಸತೀಶನಿಗೆ ಕೂಡಾ..... ಆದ್ದು ಸಹಜವಾಗಿ ನಮ್ಮ ಪಾಡಿಗೆ ನಾವು ಇದ್ದು ಬಿಟ್ಟರೆ ಆಯ್ತು." ಅವಳು ಸುಮ್ಮನೇ ಇದ್ದಳು.

"ಯಾಕೆ ತಾರಾ ನನ್ನ ಮೇಲೆ ಕೋಪಾನ?"

"ನಾನೇನು ನಿಮ್ಮನ್ನು ಪ್ರೀತಿಸಿ ಅಂತ ಕೇಳಿಕೊಂಡಿರಲಿಲ್ಲ. ಇದುವರೆಗೂ, ನಿನ್ನ ಮನಸ್ಸಿನಲ್ಲಿ ಏನಿದೆ ಅಂತ ನನ್ನನ್ನ ಸರಿಯಾಗಿ ಕೇಳಿಲ್ಲ. ಇದೆಂತಹ ಪ್ರೀತಿ?"

"ಅಂದರೇ.. ನಿಮಗೆ ನನ್ನ ಮೇಲೆ ಪ್ರೀತಿ ಇಲ್ವಾ?"

"ನನಗೆ ಯೋಚಿಸುಕ್ಕೆ, ಹೇಳುಕ್ಕೆ ಯಾವ ಮಾತನ್ನು ಉಳಿಸಲಿಲ್ಲ. ಈಗ ನಾನು ಏನು ಹೇಳಲಿ?"

"ಸರಿ. ಆಗಾದ್ರೆ ನಾನೊಬ್ಬ ಮೂರ್ಖ. ನಾನೇ ಏನೇನೋ ಅಂದು ಕೊಂಡು ಬಿಟ್ಟೆ.... ನಿಮ್ಮ ಮನಸ್ನಲ್ಲಿ ಏನಿದೆ ಅಂತ ನಿಧಾನವಾಗಿ ಹೇಳಿ ಪರವಾಗಿಲ್ಲ. ಆದರೆ ನನ್ನ ನಿರ್ಧಾರ ಮಾತ್ರ ಬದಲಾಗುಲ್ಲ"

"ನಿಮ್ಮ ತಾಯಿ ತಂದೆ ಎಲ್ಲಾ ಒಪ್ಪಿದಾರಾ?"

"ಒಪ್ತಾರೆ. ಆದರೆ ಅದಕ್ಕೆ ಸ್ವಲ್ಪ ಸಮಯ ಬೇಕು. ಅಲ್ಲೀವರೆಗೂ...."

"ಹುಂ ಗೊತ್ತಾಯ್ತು ಬಿಡಿ.... ನನಗೂ ತಂದೆ ತಾಯಿ ಇದಾರೆ. ಅವರುಗಳು ಒಪ್ಪಬೇಕು...."

"ನಿಮ್ಮ ಫೋಟೋ, ಜಾತಕ, ವಿಳಾಸಗಳನ್ನು ನನಗೆ ಕೊಡಿ. ನಮ್ಮ ತಂದೆ ಹತ್ತಿರ ಮಾತನಾಡ್ತೀನಿ."

"ಅದೆಲ್ಲಾ ಊರಿನಲ್ಲಿದೆ. ಆದರೆ ಅದೆಲ್ಲಾ ಬೇಕೇ ಬೇಕಾ? .....ನಾನು ಇಲ್ಲೇ ಪಕ್ಕದ ಮನೇಲಿದೀನಲ್ಲ. ರಾಧಮ್ಮನೇ ನನ್ನ ಪರವಾಗಿ ಮಾತನಾಡ್ತಾರೆ"

"ಬೇಡ...... ನನಗೆ ಇದನ್ನೆಲ್ಲಕೊಡಿ.... ನಾನೇ ನೇರವಾಗಿ ಅಮ್ಮನ ಹತ್ತಿರ ಮಾತ್ನಾಡ್ತೀನಿ"

"ನಿಮ್ಮಿಷ್ಟ. ಊರ್ನಿಂದ ತರಿಸಿ ಕೊಡ್ತೀನಿ. ಆದರೆ ನಮ್ಮಮ್ಮ ಕೇಳಿದರೆ ಏನು ಹೇಳಲಿ?"

"ಅದೇನು ಹೇಳ್ತೀರೋ ಅದು ನಿಮಗೆ ಸೇರಿದ್ದು...." ಅವನ ಮಾತಿನಿಂದ ಇವಳಿಗೆ ಬೇಸರವಾಯಿತು. ಇವನ ತಂದೆ ತಾಯಿ ಒಪ್ಪದಿದ್ದರೆ, ಇವನು ಏನು ಮಾಡಬಹುದು ಎಂದು ಚಿಂತಿಸಲೂ, ಬೇಸರವಾಯಿತು. ನಾನೇನು ಇವನಿಗಾಗಿಯೇ ಕಾದು ಕೂತಿರಲಿಲ್ಲ. ನಮ್ಮ ಮನೆಯ ವಿಷಯ ತಿಳಿದರೆ..... ಒಪ್ಪುತ್ತಾನೋ ಇಲ್ಲವೋ ಅಂತಂದುಕೊಂಡಾಗ

ಮತ್ತೂ ಬೇಸರವಾಗಿತ್ತು.... ಆದರೆ ಮುಖದಲ್ಲಿ ಬೇಸರವನ್ನು ಪ್ರಕಟಿಸಲು ಇಚ್ಛಿಸಲಿಲ್ಲ. ಬಲವಂತದ ನಗೆ ನಕ್ಕಳು.

* * *

ಗೇಟಿನ ಬಳಿ ನಿಂತಿದ್ದ ರಾಮಸ್ವಾಮಿ ತನ್ನನ್ನು ಸಮೀಪಿಸಿದವಳನ್ನೇ ತದೇಕವಾಗಿ ನೋಡಿದ ಗುರುತು, ಸಿಕ್ಕಿತು.... ಸುಜಾತಾ.... ನೀನು! ಬಾ...." ಸಂತಸದಿಂದ ಕರೆದ.

"ನಾನು, ನಿಮ್ಮ ಹತ್ತಿರ ಸ್ವಲ್ಪ ಮಾತನಾಡಬೇಕಾಗಿತ್ತು.... ಅತ್ತೆ ಮನೇಲಿದಾರಾ?"

"ಹುಂ ಇದಾಳೆ. ಒಳಗೆ ಏನೋ ಮಾಡ್ತಿದಾಳೆ..... ಒಳಗೆ ಬಾ...."

"ಇಲ್ಲ ಮಾವ... ನಾನು ಒಳಗೆ ಬರುಲ್ಲ..... ನೀವು ಸ್ವಲ್ಪ ಹೊತ್ತು ರಾಧಮ್ಮನ ಮನೆಗೆ ಬರ್ತೀರಾ.....?"

"ರಾಧಮ್ಮನ ಮನೇಗಾ ಯಾಕೆ?...."

"ನಾನು ರಾಧಮ್ಮನ ಮನೆಗೆ ಬಂದಿದ್ದೆ. ಅಲ್ಲಿ ನನ್ನ ಮಗಳು ಇದಾಳೆ. ಅವಳಿಂದ ನನಗೆ ಕಾಗದ ಬಂದಿತ್ತು....."

"ರಾಧಮ್ಮ ನಿನಗೆ ಸಂಬಂಧಾನಾ?"

"ಹುಂ. ಏನೋ ದೂರದ ಸಂಬಂಧ.... ಆಗಾಗ್ಗೆ ಬರ್ತಿರ್ತೀನಿ."

"ಅವರ ಮನೆಗೆ ಬರುತ್ತಿದ್ದು.... ನಮ್ಮ ಮನೆ ಕಡೆ ನಾಲ್ಕು ಹೆಜ್ಜೆ ಬರುಕ್ಕಾಗುತ್ತಿರಲಿಲ್ಲವೇನಮ್ಮಾ.......?"

"ನಾನು ಬೇಕೂಂತಾನೇ ಬರುತ್ತಿರಲಿಲ್ಲ ಮಾವಾ...... ಅತ್ತೆಗೆ ನನ್ನ ಬರವು ಖಂಡಿತಾ ಇಷ್ಟವಿಲ್ಲ ಅಂತ ನನಗೆ ಗೊತ್ತು. ಈಗಲೂ ಅಷ್ಟೇ ನಿಮ್ಮನ್ನು ಗೇಟಿನ ಬಳಿ ಕಂಡು ಬಂದು ಮಾತನಾಡಿದೆ.... ಬರ್ತೀರಾ ತಾನೇ....?"

"ಏನು ವಿಷಯ ಅಂತ ಕೇಳಬಹುದಾ? ನಮ್ಮ ನಮ್ಮ ವಿಷಯ ರಾಧಮ್ಮನ ಮನೆಯವರಿಗೆಲ್ಲ ಯಾಕೆ ತಿಳಿಯಬೇಕು?"

"ರಾಧಮ್ಮ ಒಳ್ಳೆಯ ಹೆಂಗಸು. ಅವರು ನಮಗೆ ಯಾವಾಗಲೂ ಸಹಾಯಕರಾಗಿದ್ದವರು. ನಮ್ಮ ವಿಷಯವೆಲ್ಲಾ ಅವರಿಗೆ ಗೊತ್ತು...... ನಮ್ಮ ರೂಪ ಈಗ ಅವರ ಮನೇಲೇ ಇರೋದು"

"ಓ...... ನಂಗೆ ಗೊತ್ತಿರಲೇ ಇಲ್ಲ. ಓದ್ತಾ ಇದಾಳಾ?"

"ಇಲ್ಲ ಕೆಲಸದಲ್ಲಿದಾಳೆ ಅವಳ ವಿಷಯವನ್ನೇ ಈಗ ಮಾತನಾಡಬೇಕಾಗಿದೆ. ಬರ್ತೀರಾ ಮಾವ......."

"ಅವಳಿಗೆ ಹೇಳಿ ಬಿಟ್ಟು ಬರ್ತೀನಿ...."

"ಬೇಡ ಮಾವ. ಅತ್ತೆಗೆ ಈಗಲೇ ಏನನ್ನು ಹೇಳಬೇಡಿ....."

"ಸ್ವಲ್ಪ ಒಳಗೆ ಬರ್ತೀರಾ?" ಒಳಗಿನಿಂದ ಶಾಂತಳ ಧ್ವನಿ ಕೇಳಿಸಿತ್ತು. ರಾಮಸ್ವಾಮಿ ತಿರುಗಿ ನೋಡಿದ. ಸುಜಾತಾ ಸರ್ರನೇ ಅಲ್ಲಿಂದ ಸರಿದಿದ್ದಳು. ಅವನು ಮನೆಯ ಬಳಿಗೆ ಬಂದ. ಮುಂಬಾಗಿಲಲ್ಲಿ ಶಾಂತ ನಿಂತಿದ್ದಳು. "ಯಾರ ಹತ್ತಿರ ಮಾತನಾಡುತ್ತಿದ್ರೀ......?" ಅಧಿಕಾರವಾಣಿ ಕೇಳಿತು.

"ಯಾರಿಲ್ಲ. ಯಾರೋ ಯಾವುದೋ ಅಡ್ರೆಸ್‌ನ ಹುಡುಕಿಕೊಂಡು ಬಂದಿದ್ದರು."

"ಯಾರ ಮನೆ ಬೇಕಿತ್ತಂತೆ....."

"ಯಾವುದೋ? ವಿಳಾಸ ಸರಿಯಾಗಿರಲಿಲ್ಲ. ಹಾಗೇ ಹೊರಟು ಹೋದಳು.

"ನನ್ನನ್ನ ಕರೆದಿದ್ದರೆ ಹೇಳ್ತಿದ್ದೆ..... ಹೊರಟು ಹೋದ್ಲಾ.....?" ಅವಳು ರಸ್ತೆಯ

ದಿಕ್ಕಿನಲ್ಲಿ ಬಾಗಿ ನೋಡಿದಳು. ಅಲ್ಲಿ ಯಾರೂ ಕಾಣಲಿಲ್ಲ.

"ಈ ಮನೆಗೆ ಬಂದು ಐದಾರು ವರ್ಷಗಳ ಮೇಲಾಯ್ತು. ನಿಮಗಂತೂ ಯಾವ ರಸ್ತೆ ಯಾವ ದಿಕ್ಕು ಒಂದೂ ತಿಳಿಯದು."

"ಹೌದು ಕಣೇ ನನಗೇನೂ ತಿಳಿಯದು.... ಪ್ರಪಂಚದ ತಿಳುವಳಿಕೆಯೆಲ್ಲಾ ನಿನಗೊಬ್ಬಳಿಗೇ ಇರೋದು....." ಕಿರುಚಿದ.

"ಅದೇನಾಯ್ತು ಅಂತ ಹೀಗೆ ಕಿರುಚಾಡ್ತೀರಿ.... ಅದ್ಯಾವಳೋ ವೈಯ್ಯಾರವಾಗಿ ಬಂದು ಏನೋ ಕೇಳಿದಳು.... ನಿಮ್ಮ ತಲೆಯೇ ತಿರುಗಿ ಹೋಯಿತು." ಹಂಗಿಸಿದಳು.

"ನೀನು ಹೀಗೇ ಆಡ್ತಿರು. ನಾನು ವೃದ್ಧಾಶ್ರಮಕ್ಕೆ ಹೋಗಿ ಸೇರಿಕೊಳ್ತೀನಿ...... ಅಷ್ಟೇ....."

"ಎಲ್ಲಿದೆ ವೃದ್ಧಾಶ್ರಮ.....? ನಂಗೆಲ್ಲಾ ಗೊತ್ತು......"

"ನಾನೇ ಒಂದು ಕಟ್ಟಿಸಿಕೊಂಡು ಹೋಗ್ತೀನಿ. ಬೇಕಾದರೆ ನೀನೂ ಆಗ ಬಂದಿರಬಹುದು?"

"ನನಗೇನು ಹುಚ್ಚೇ. ಮನೆ ಮಠ, ಮಗ ಸಂಸಾರ ಎಲ್ಲಾ ಬಿಟ್ಟು ಎಲ್ಲೋ ಆಶ್ರಮದಲ್ಲಿರೋಕೇ......?"

"ನಿನಗೆ ಇನ್ನು, ಮಾಯಾ-ಮೋಹ ಕಡಿಮೆ ಆಗಿಲ್ಲ..... ಒಂದೊಂದಾಗಿ ಕಡಿಮೆ ಮಾಡಿಕೊಳ್ಳಬೇಕು."

"ಸಾಕು ನಿಮ್ಮ ಉಪದೇಶ. ನಾನೇನು ಮುದುಕಿಯಾಗಿ ಬಿಟ್ಟೆನೇ?"

"ನನಗೆ ರಿಟೈರ್ ಆದ ಮೇಲೆ, ನಿನಗೂ ಈ ಸಂಸಾರದಿಂದ ರಿಟೈರ್‌ಮೆಂಟ್ ಬೇಡವೇನೆ?"

"ಹಾಗಂತ ಈ ಜೀವನಾನ ಬಿಟ್ಟು ಎಲ್ಲಿಗೆ ಹೋಗುಕ್ಕಾಗುತ್ತೆ....? ಸೊಸೆ ಬರಲಿ. ಸೊಸೆ ಬಂದ ಮೇಲೆ ಮನೆ ಕೆಲಸ ಕಾರ್ಯಗಳನ್ನೆಲ್ಲ ಅವಳಿಗೆ ವಹಿಸಿಕೊಟ್ಟು ನಾನೂ ಹಾಯಾಗಿರ್ತೀನಿ"

"ನನಗೇನೋ ಅನುಮಾನ" ಗೊಣಗಿದ.

"ಏನಂದ್ರೀ..... ಜೋರಾಗಿ ಹೇಳಿ....."

"ಏನಿಲ್ಲ ಅಂದೆ....." ಎತ್ತರದ ಧ್ವನಿಯಲ್ಲಿ ಹೇಳಿದ. ಅವಳು ಎರಡೂ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡಳು. "ಇದ್ದಕ್ಕಿದ್ದಂತೆ ಏನಾಗುತ್ತೆ ನಿಮಗೆ?" ಅವಳೂ ಕಿರುಚಿಕೊಂಡಳು.

"ನಾನು ಸ್ವಲ್ಪ ಮಾರ್ಕೆಟ್ಟಿಗೆ ಹೋಗಿ ಬರ್ತೀನಿ" ಎನ್ನುತ್ತಾ ಬೇರೆ ಷರಟನ್ನು ಪ್ಯಾಂಟನ್ನು ಧರಿಸಿ ಹೊರಟ.

"ಬೇಗ ಬಂದು ಬಿಡಿ. ಊಟಕ್ಕೆ ಹೊತ್ತಾಗುತ್ತೆ"

"ನನಗೇನು ಅಷ್ಟು ಗೊತ್ತಾಗುಲ್ವಾ ಬರ್ತೀನಿ.... ಸುಮ್ಮನೇ ಬಾಗಿಲಲ್ಲೇ ಕಾಯ್ತಾ ನಿಂತಿರಬೇಡ....."

"ನನಗೇನು ಅಷ್ಟೂ ಗೊತ್ತಾಗುಲ್ವಾ?......ನನ್ನ ಪಾಡಿಗೆ ನಾನು ಊಟ ಮಾಡಿ ಮಲಗ್ತೀನಿ ಅಷ್ಟೇ......." ಶಾಂತ ಹಂಗಿಸಿ ನುಡಿದು, ಒಳಗೆ ಹೊರಟು ಹೋದಳು ಅಬ್ಬಾ..... ಎಂದುಕೊಂಡು ರಾಮಸ್ವಾಮಿ ರಾಧಮ್ಮನ ಮನೆಯ ಕಡೆ ನಡೆದ. ಗೇಟು ಸದ್ದಾಗುತ್ತಲೇ, ಸುಜಾತಾ ಮುಂಬಾಗಿಲನ್ನು ತೆಗೆದಳು. ವೆರಾಂಡದ ಪಕ್ಕದಲ್ಲಿನ ರೂಮಿಗೆ ಕರೆದೊಯ್ದಳು. ಅಲ್ಲಿದ್ದ ಕುರ್ಚಿಯ ಮೇಲೆ ಕೂತ..... ತನ್ನ ಕೈಯಲ್ಲಿದ್ದ ಫೋಟೋ

ಜಾತಕಗಳನ್ನು ಅವನ ಕೈಗಿತ್ತಳು.

"ಇದು ನನ್ನ ಮಗಳ ಫೋಟೋ.... ಜಾತಕ....."

"ಇದನ್ನು ನನಗೇಕೆ ಕೊಡ್ತಿದೀಯ ಸುಜಾತಾ...."

"ಹಾಗಾದರೆ ನಿಮ್ಮ ಮಗ ನಿಮಗೆ ಏನೂ ಹೇಳಿಲ್ವಾ....."

"ಇಲ್ಲ. ಏನೂ ಹೇಳಿಲ್ಲ"

"ಇವಳು ನನ್ನ ಮಗಳು ರೂಪಾ..... ಸುಮಂತನ ಜೊತೆ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದಾಳೆ.... ನೀವೂ ನೋಡಿದೀರಿ......" ರಾಮಸ್ವಾಮಿ ಫೋಟೋ ನೋಡಿ.... ಅನುಮಾನದಿಂದ ತಲೆಕೆರೆದ.

"ಇವಳು ತಾರಾ...... ಸುಮಂತನ ಆಫೀಸಿನಲ್ಲಿದ್ದಾಳೆ."

"ನಾವು ರೂಪಾ ಅಂತ ಕರೀತೀವಿ. ಅವಳ ಪೂರ್ಣ ಹೆಸರು ರೂಪತಾರಾ ಅಂತ. ಅವಳು ತಾರಾ ಅಂತ ಹೆಸರು ಬದಲಾಯಿಸಿ ಕೊಂಡಿದಾಳೆ..... ಅವಳನ್ನು ಸುಮಂತ ಇಷ್ಟ ಪಟ್ಟಿದಾನಂತೆ. ಮದುವೆ ಆಗ್ತೀನಿ ಅಂತ ಸಹ ಹೇಳಿದಾನಂತೆ. ನಿಮಗೆ ನಿಜವಾಗಿಯೂ ಏನೂ ಗೊತ್ತಿಲ್ವಾ?"

"ಇಲ್ಲ. ನನಗೇನೂ ತಿಳಿಯದು.... ನಿನಗ್ಯಾರು ಹೇಳಿದ್ದು.....?"

"ನನಗೆ ನಮ್ಮ ರೂಪಾನೇ ಹೇಳಿದ್ದು. ನಿಮ್ಮ ಮನೆಗೆ ಕೊಡೋಕೆ ಅಂತ ಈ ಫೋಟೋ, ಜಾತಕ, ತರಿಸಿಕೊಂಡಿದಾಳೆ..... ನಿಮ್ಮ ಸುಮಂತನೇ ತರಿಸಿಕೊಡುವಂತೆ ಹೇಳಿದ್ದಂತೆ."

"ಹೌದಾ? ಇದನ್ನೆಲ್ಲ ನನಗೆ ಸುಮಂತ ಹೇಳಿಯೇ ಇಲ್ಲ."

"ಅದಕ್ಕೇ ನಿಮಗೆ ಗೊತ್ತಿರಲಿ ಅಂತ, ನಿಮ್ಮ ಹತ್ತಿರ ಮಾತನಾಡಿದ್ದು ಸುಮಂತನಿಗೆ, ರೂಪಾ ಯಾರು ಅಂತ ಗೊತ್ತಿಲ್ಲ ಅಂತ ಕಾಣುತ್ತೆ. ಅವಳು ನನ್ನ ಮಗಳು ಅಂತ ತಿಳಿದ ಕೂಡಲೇ, ಅವನ ಮನಸ್ಸು ಬದಲಾಯಿಸಬಹುದು. ಯಾಕೇಂದ್ರೆ.... ಅತ್ತೆಗೆ ನನ್ನ ಸಂಬಂಧವೇ ಬೇಡವಲ್ಲ......"

"ನೀನು ಏನು ಹೇಳ್ತಿದೀಯಾಂತ ನನಗೆ ಸರಿಯಾಗಿ ಅರ್ಥಾನೇ ಆಗ್ತಿಲ್ಲ ಸುಜಾತಾ.... ಸುಮಂತ ನಿನ್ನ ಮಗಳನ್ನು ಪ್ರೀತಿಸ್ತಿದಾನೆ ಅಂತಂದ್ರೆ, ಅದು ನನಗೂ ಸಂತೋಷವೇ.. ಅವರಿಬ್ಬರಿಗೂ ಮದುವೆಯಾದರೆ ನಮ್ಮಿಬ್ಬರ ಮಕ್ಕಳಿಂದ ನಮ್ಮ ಸಂಬಂಧವೂ ಮತ್ತೆ ಒಂದಾಗುತ್ತೆ."

"ಅತ್ತೆ ಒಪ್ತಾರೆ ಅಂತೀರಾ?"

"ಮಗ ಒಪ್ಪಿದ ಮೇಲೆ ಅವಳು ಒಪ್ಪಲೇ ಬೇಕಾಗುತ್ತದೆ......"

"ಹಾಗಾದ್ರೆ ಈ ಜಾತಕವನ್ನು ಫೋಟೋವನ್ನು ಅತ್ತೆಗೆ ಕೊಡಿ. ಅವರು ಒಪ್ಪಿದರೆ, ಆಮೇಲೆ ನಾನು ಬಂದು ಮಾತನಾಡ್ತೀನಿ." ರಾಮಸ್ವಾಮಿ ಅವುಗಳನ್ನು ತೆಗೆದಿಟ್ಟುಕೊಂಡ. ರಾಧಮ್ಮ ಅಲ್ಲಿಗೆ ಬಂದು ಮಾತನಾಡಿಸಿದ್ದರು. ಅವರ ಹಿಂದೆ ತಾರಾಳು ನಿಂತಿದ್ದಳು.

"ಏನಮ್ಮಾ ಹೇಗಿದೀಯ?" ಪ್ರಶ್ನಿಸಿದ.

"ಚೆನ್ನಾಗಿದೀನಿ" ಅವಳನ್ನೇ ನೋಡಿದ. ಮಗನ ಆಯ್ಕೆ ಸರಿಯಾಗಿದೆ ಅಂತೆನ್ನಿಸಿತ್ತು. ಹೆಸರಿಗೆ ತಕ್ಕಂತೆ ರೂಪವಂತೆ, ಗುಣವಂತೆಯೂ ಇರಬಹುದು. ಎಲ್ಲಕ್ಕಿಂತ ಅದೃಷ್ಟವಂತೆ. ಸುಮಂತನಂತಹ ಪತಿ ಇವಳಿಗೆ ದೊರೆಯುತ್ತಿದಾನೆ."

"ರೂಪಾ.... ತಾತಂಗೆ ನಮಸ್ಕಾರ ಮಾಡಮ್ಮ....."

"ಓ.... ಹೋ...." ಎನ್ನುತ್ತಾ "ಬೇಗ ನಮ್ಮ ಮನೆಯ ಸೊಸೆಯಾಗಿ ಬಾಮ್ಮಾ" ಅಂತ ಆಶೀರ್ವಾದ ಮಾಡಿದ. ಅವಳು ನಾಚಿ ಹಿಂದೆ ಸರಿದಳು. "ಆಗಾಗ ಬರ್ತಿರಮ್ಮಾ ......" ಆತ್ಮೀಯವಾಗಿ ಕರೆದ.

"ಬೇಡ ಮಾವ..... ಅತ್ತೆ ತಪ್ಪು ತಿಳಿದುಕೊಳ್ಳಬಹುದು....."

ರಾಮಸ್ವಾಮಿ ಮತ್ತೊಮ್ಮೆ ಎಲ್ಲರಿಗೂ ಹೇಳಿ ಅಲ್ಲಿಂದ ಹೊರಟ. ಗಂಡ ಮನೆಗೆ ಬರುತ್ತಿದ್ದುದನ್ನೇ ಕಾದಿದ್ದ ಶಾಂತ ತಂದೆ ಮಗನಿಗೆ ಬಡಿಸಿ, ತಾನೂ ಊಟ ಮಾಡಿ ಮಲಗುವ ಸಿದ್ಧತೆಯಲ್ಲಿದ್ದಳು. ರಾಮಸ್ವಾಮಿ ಅವಳು ನಿದ್ರಿಸುವುದನ್ನೇ ಗಮನಿಸುತ್ತಿದ್ದವನು ಮಗನ ರೂಮಿಗೆ ಬಂದ.

"ಏನಪ್ಪಾ ಏನಾದ್ರೂ ಬೇಕಿತ್ತಾ?" ಕೇಳಿದ.

ರೂಪಳ ಫೋಟೋ ಜಾತಕಗಳನ್ನು ಅವನ ಕೈಗಿತ್ತ "ಇದೆಲ್ಲಾ ಏನು ನಮಗೆಲ್ಲಾ ಒಂದು ಮಾತು ತಿಳಿಸದೇ, ನೀನೇ ಎಲ್ಲಾ ಸಿದ್ಧತೆಗಳನ್ನು ನಡೆಸಿದ್ದೀಯ...?"

"ಇದು ನಿಮಗೆ ಎಲ್ಲಿ ಸಿಗ್ತು? ಅಮ್ಮಂಗೆ ತೋರಿಸಿ ಬಿಟ್ರಾ?"

"ಇಲ್ಲ ನಿಮ್ಮಮ್ಮನಿಗೆ ಗೋತ್ತಾದರೆ ಒಂದು ರಾದ್ಧಾಂತವೇ ಆಗುತ್ತೆ. ಈ ರೂಪನ್ನ ಪ್ರೀತಿಸ್ತಿದೀನಿ. ಅಂತ ನನಗೆ ಒಂದ್ಮಾತು ಹೇಳಬಾರದಾಗಿತ್ತಾ.....?"

"ರೂಪ ಅಲ್ಲಪ್ಪಾ..... ಅವಳ ಹೆಸರು ತಾರಾ......"

"ರೂಪಾ.... ತಾರಾ..... ಎಲ್ಲಾ ಒಬ್ಬಳೇ. ಅವಳ ತಾಯಿ ಎಲ್ಲಾ ಹೇಳಿದ್ರು"

"ನಮ್ಮ ಮನೆಗೆ ಬಂದಿದ್ರಾ?" ಅವನು ಗಾಬರಿಗೊಂಡಿದ್ದ. ಎಲ್ಲವನ್ನು ಹೇಳಿ ಬಿಡುವ ಮನಸ್ಸಾದರೂ ಈಗಲೇ ಬೇಡಾಂತಂದುಕೊಂಡು,

"ಇಲ್ಲ.... ರಾಧಮ್ಮನ ಮನೇಲಿ ಸಿಕ್ಕಿದ್ರು. ನಾನು ಅಲ್ಲಿಗೆ ಹೋಗಿದ್ದೆ. ಈಗ ಏನು ಮಾಡಬೇಕು ನೀನೇ ಹೇಳು."

"ಈ ವಿಷಯಾನ.... ನಾನು ಆಚಿಗೆ, ಅತ್ತೆಗೆ ಹೇಳಿದ್ದೆ. ಆಚಿ, ಫೋಟೋ, ಜಾತಕಗಳನ್ನು ತರಿಸಿಕೊಂಡು ಅಂತ ಹೇಳಿದ್ಲು...."

"ಓ ಇದರಲ್ಲಿ ಆಚೀನೂ ಶಾಮೀಲೋ..... ಮುಂದೆ ಏನ್ಮಾಡ್ತಾಳಂತೆ?"

"ನಂಗೊತ್ತಿಲ್ಲ...... ಅತ್ತೇನೂ ಶಾಮೀಲು......"

"ಸರಿ. ಸರಿ. ಆಚಿಗೆ, ನಿಮ್ಮ ಅತ್ತೆ ವನಜಂಗೆ, ನಿಮ್ಮ ಅಮ್ಮನ ವಿಷಯ ಗೊತ್ತಿಲ್ವಾ? ನಾಳೆ ಎಲ್ಲಾ ಸರಿ ಹೊಂದರೆ ಸರಿ. ಇಲ್ಲದಿದ್ದರೆ ಏನ್ಮಾಡ್ತೀಯ?"

"ನೀವೇ ಹೇಳಿ ಅಪ್ಪಾ....."

"ಅವಳನ್ನು ಪ್ರೀತಿಸ್ತಿರೋನು ನೀನು..... ನಾನೇನು ಹೇಳಲಯ್ಯಾ...."

"ನೀವುಗಳೆಲ್ಲಾ ಸೇರಿ ಒಂದು ಉಪಾಯ ಹುಡುಕಿ....."

"ನಾನೂ ಇದರಲ್ಲಿ ಶಾಮೀಲು ಅಂತ ನಿಮ್ಮಮ್ಮನಿಗೆ ಗೊತ್ತಾದರೆ.... ಆಕಾಶ ಭೂಮೀನ ಒಂದು ಮಾಡಿಬಿಡ್ತಾಳೆ."

"ಅಮ್ಮನಿಗೆ ನಾವೆಲ್ಲಾ ಯಾಕೆ ಇಷ್ಟು ಹೆದರುತ್ತೀವಿ?...."

"ಇದು ಹೆದರಿಕೆ ಅಲ್ಲ.... ಏನೋ ಒಂದು ತರಹ....ಹೊಂದಾಣಿಕೆ ಮೊದಲ್ನಿಂದ ಅವಳದೇ ಆದ ರೀತಿ ನೀತಿಗಳಿಗೆ ನಾವು ಹೊಂದುಕೊಂಡು ಬಿಟ್ಟಿದೀನಿ..... ಈಗ ಅದನ್ನು ಬದಲಾಯಿಸುಕ್ಕೆ ಆಗುಲ್ಲ.... ಬದಲಾಯಿಸಬೇಕಾದ ಸಮಯ ಬಂದಾಗ, ಸುಮ್ಮನೇ, ಹಗರಣಗಳಾಗುವುದು ಬೇಡ ಅಂತ ಅನ್ನಿಸುತ್ತೆ. ಅದೇ ಸಮಸ್ಯೆ..... ನೋಡೋಣ ಏನಾದ್ರೂ ಉಪಾಯ ಹುಡುಕೋಣ. ಆದರೆ, ನನಗೂ ಒಂದ್ಮಾತು

ತಿಳಿಸದೇ, ನೀನು ಯಾವ ವಿಷಯದಲ್ಲೂ ಮುಂದುವರೆಯಬಾರದು...." ಇಷ್ಟು ಹೇಳಿ, ಮಗನ ಭುಜ ತಟ್ಟಿ ಹೊರಬಂದ. ಹಾಸಿಗೆಯ ಮೇಲೆ ಉರುಳಿಕೊಂಡರೂ ನಿದ್ದೆ ಬಂದಿರಲಿಲ್ಲ. ನೂರೆಂಟು ಯೋಚನೆಗಳು ಎಲ್ಲಕ್ಕಿಂತ ಮುಖ್ಯವಾದದ್ದು, ಈ ಶಾಂತನಿಗೆ ತಿಳಿಸಿ, ಒಪ್ಪಿಸುವುದು ಹೇಗೆ ಅಂತ.

ಈಗ ಸುಮಂತನಿಗೆ ಇನ್ನೂ ಸ್ವಲ್ಪ ಧೈರ್ಯ ಬಂದಿತ್ತು. ಅಪ್ಪನಿಗೆ ಎಲ್ಲಾ ವಿಷಯವೂ ತಿಳಿದಿದೆ. ಅವರು ಏನಾದರೂ ಉಪಾಯವನ್ನು ಕಂಡು ಹಿಡಿಯಬಹುದು. ಹೇಗೂ ಸಾಕಷ್ಟು ಸಮಯವಿದೆಯಲ್ಲ ಎಂದುಕೊಂಡು ನಿಶ್ಚಿಂತೆಯಿಂದ ಮಲಗಿ ನಿದ್ರಿಸಿದ.

ಸತೀಶನಿಗೆ ಮದುವೆ ನಿಶ್ಚಯವಾಗಿತ್ತು. ಸಸ್ಪೆನ್ಸ್ ಆಗಿ ಇಟ್ಟುಕೊಂಡಿದ್ದ ವಿಷಯವನ್ನು ಹೊರಗೆಡಹಿದ್ದ. ಸುಮಂತನೊಡನೆ, ಅವರ ಮನೆಗೇ ಬಂದು, ಮನೆಯವರನ್ನೆಲ್ಲಾ ಆಹ್ವಾನಿಸಿ ಹೇಳಿದ್ದ.

"ನಮ್ಮ ಊರಿನಲ್ಲಿ ಮದುವೆ. ನೀವುಗಳು ಖಂಡಿತಾ ಬರಬೇಕು."

"ಹೂಂ. ನೋಡೋಣ" ಅಂತ ಹೇಳಿದ್ದರೂ, ಸುಮಂತನ ಸ್ನೇಹಿತ, ಬೇಕಿದ್ದರೆ ಅವನು ಹೋಗಿ ಬರಲಿ ಎಂದುಕೊಂಡಿದ್ದರು.

"ನನಗೇನೋ ಆಸೆ.... ಮದುವೆ ಮನೆಗಳಲ್ಲಿ ಪಡ್ಡೆ ಹುಡುಗಿಯರು ಓಡಾಡುತ್ತಿರುತ್ತಾರೆ. ನಮ್ಮ ಸುಮಂತನಿಗೆ ಬೇಕಾದ ಹುಡುಗಿಯನ್ನು ನೋಡಬಹುದು" ಶಾಂತ ನುಡಿದಾಗ ರಾಮಸ್ವಾಮಿ, ನಕ್ಕ.

"ಯಾಕೆ ನಮ್ಮ ಕಡೆ ಹುಡುಗಿಯರಿಲ್ಲವೇ....? ನಾವು ಯಾರಿಗೂ ತಿಳಿಸಿಲ್ಲ ಅಷ್ಟೇ. ತಿಳಿಸಿದರೆ, ಹತ್ತಾರು ಫೋಟೋ ಜಾತಕಗಳು ಒಟ್ಟೊಟ್ಟಿಗೇ ಬರುತ್ತವೆ."

"ನಾನು ನನ್ನ ಅತ್ತಿಗೆಗೆ, ಆಚಿಗೆ ಹೇಳಿದೀನಿ. ಅವರಿಗೆಲ್ಲಾ ನಮ್ಮ ಮನೆ ಚಿಂತೆ ಎಲ್ಲಿರುತ್ತೆ? ಮರತೇ ಬಿಟ್ಟರೋ ಏನೋ?"

"ಅದಕ್ಕೆಲ್ಲಾ ಕಾಲ ಒದಗಿ ಬರಬೇಕು ಶಾಂತು..... ನಿನಗೆ ತಕ್ಕ ಸೊಸೆಯನ್ನು ಹುಡುಕಬೇಡವೇ? ಸ್ವಲ್ಪ ತಡವಾಗುತ್ತೆ" ನಿಇದು ಸುಲಭದ ಕೆಲಸವಲ್ಲ.

"ಸಾಕು ವ್ಯಂಗ್ಯ.... ನನಗೆ ತಕ್ಕ ಸೊಸೆ ಅಂದರೆ ಏನರ್ಥ? ಸುಮಂತನಿಗೆ ತಕ್ಕ ಹೆಂಡತಿ ಅನ್ನಿ."

"ಯಾರ್‍ಯಾರನ್ನೋ ಸುಮಂತ ಇಷ್ಟಪಟ್ಟರೆ ನೀನು ಸುಮ್ಮನಿದ್ದು ಬಿಡ್ತೀಯಾ?"

"ನಾನ್ಯಾಕೆ ಸುಮ್ಮನಿರಲಿ? ನನ್ನ ಸೊಸೆಯನ್ನು ಆರಿಸುವ ಹಕ್ಕು ನನಗೂ ಇದೆ...."

"ನಿನ್ನ ಸೊಸೆಯಾಗಿ ಬರುವವಳಲ್ಲಿ ಏನೇನು ಗುಣಗಳಿರಬೇಕು....?"

"ಗುಣ, ನಡತೆ ಕಣ್ಣಿಗೆ ಗೋಚರಿಸುಲ್ಲ. ರೂಪ ಮಾತ್ರ ಕಾಣಿಸುತ್ತೆ..... ನನಗೆ ಅದೇ ದಿಗಿಲು..... ಹುಡುಗಿ ರೂಪವಂತೆಯಾಗಿದ್ದರೆ, ಅಹಂಕಾರ, ಜಂಭ ಇರುತ್ತೆ ಅಂತ ಎಲ್ಲರೂ ಹೇಳುತ್ತಾರೆ."

"ಅದೆಲ್ಲ ಸುಳ್ಳು..... ಹಾಗಂತ, ಸಾಧಾರಣ ರೂಪಿನ ಹುಡುಗಿಯನ್ನು ನೋಡ್ತಾ ಇದೀಯ....."

"ನಾನೆಲ್ಲಿ ನೋಡಿದೀನಿ? ನಾನು ಇದುವರೆಗೂ ಯಾವ ಹೆಣ್ಣನ್ನು ನೋಡಿಲ್ಲ. ನಮ್ಮ ಆಚಿಯ ಮದುವೆಯ ವಿಷಯದಲ್ಲೂ ನನಗೆ ಇಷ್ಟು ಗಾಬರಿ ಆಗಿರಲಿಲ್ಲ."

ರಾಮಸ್ವಾಮಿ ನಕ್ಕ "ಸುಮಂತನೂ ನಿನ್ನ ಮಗನೇ. ಗಾಬರಿ ಯಾಕೆ?"

"ಅದೇನೋ ಗೊತ್ತಿಲ್ಲ....."

"ನಂಗೊತ್ತು ನಾನು ಹೇಳ್ಲಾ.... ನಿನಗೂ ನಿನ್ನ ಸೊಸೆಗೂ ಎಲ್ಲಿ ಲಟಾಪಟಿ

ಆಗುತ್ತೋ ಅಂತ ಭಯ ಅಲ್ವಾ?"

"ಹೌದು ರೀ.... ಅತ್ತೆ ಮಾವನ ಜೊತೆ ಹೇಗಿರಬೇಕು ಅನ್ನೋ ವಿಷಯದಲ್ಲಿ ನನಗಂತೂ ಏನೂ ಗೊತ್ತಿಲ್ಲ..... ನನ್ನ ಅತ್ತಿಗೆ, ಆಚಿ, ಎಲ್ಲಾ ಅವರವರ ಅತ್ತೆಯರ ಬಗ್ಗೆ ಹೇಳೋದನ್ನ ಕೇಳಿದರೆ... ಹೇಗಪ್ಪಾ ಅಂತನ್ನಿಸುತ್ತೆ."

"ಎಲ್ಲಾ ಸೊಸೇರಿಗೂ ಅತ್ತೆ ಕೆಟ್ಟೋರು ಅಂತ ಅನ್ನಿಸಬಹುದು."

"ನನಗೆ ಹಾಗೆ, ಕೆಟ್ಟೋಳು ಅಂತ ಅನ್ನಿಸಿಕೊಳ್ಳೋಕೆ ಇಷ್ಟವಿಲ್ಲ"

"ಕೆಟ್ಟ ಅತ್ತೆ ಅಂತ ಅನ್ನಿಸಿಕೊಳ್ಳೋಕೆ ಹೆಚ್ಚಿಗೆ ಕಷ್ಟ ಪಡಬೇಕಾಗಿಲ್ಲ. ಅದೇ ಒಳ್ಳೆ ಅತ್ತೆ ಆಗಬೇಕಾದರೆ ಸ್ವಲ್ಪ ಶ್ರಮ ಪಡಬೇಕಾಗುತ್ತೆ. ನಾನೊಂದು ಉಪಾಯ ಹೇಳಲಾ?"

"ನಿಮಗೆ ಎಲ್ಲಾ ಗೊತ್ತು ನೋಡಿ..... ಹುಂ ಅದೇನು ಅಂತ ಹೇಳಿ ಅತ್ಲಾಗೆ"

"ಅವನ ಮದುವೆ ಆದ ಮೇಲೆ, ನಾವು ವೃದ್ಧಾಶ್ರಮಕ್ಕೆ ಹೋಗಿ ಬಿಡೋಣ...."

"ಒಳ್ಳೇ ವೃದ್ಧಾಶ್ರಮದ ಹುಚ್ಚು ಹಿಡಿದಿದೆ ನಿಮಗೆ. ನಾನು ಯಾವ ಆಶ್ರಮಕ್ಕೂ ಬರುಲ್ಲ. ನೀವು ಬೇಕಾದ್ರೆ ಹೋಗಿ.... ನಾನು ನನ್ನ ಮಗನ ಜೊತೆಯೇ ಇರೋಳು...."

"ಆಮೇಲೆ ಒಂಟಿ ಆಗಿ ಬಿಡ್ತೀಯ ನೋಡು..... ನನ್ನ ಹತ್ತಿರ ಮಾತನಾಡುವ ಹಾಗೆ ಸೋಮನ ಹತ್ತಿರ ಮಾತನಾಡುಕ್ಕೆ ಆಗುತ್ತಾ?"

"ನಿಮ್ಮ ಈ ಉಪಾಯ ನನಗೆ ಹಿಡಿಸಲಿಲ್ಲ. ಕೆಲಸಕ್ಕೆ ಬಾರದ ಮಾತು ವೃದ್ಧಾಶ್ರಮ ವಂತೆ, ವೃದ್ಧಾಶ್ರಮ. ಸ್ವಂತ ಮನೆ ಇದೆ. ಮಕ್ಕಳು ಮೊಮ್ಮಕ್ಕಳು ಇದಾರೆ. ಎಲ್ಲಾ ಬಿಟ್ಟು ಅದೆಲ್ಲೋ ಹೋಗಿ ಕೂತಿರೋದೇ ಆದರೆ, ಮದುವೆ ಯಾಕೆ ಆದ್ರೀ....?"

"ಈಗ ತಪ್ಪು ಮಾಡಿದೆ ಅಂತ ಅನ್ನಿಸ್ತಿದೆ. ಒಂಟಿಯಾಗಿದ್ದ ಕಾಲದಲ್ಲಿ ಹೆಂಡತಿ ಬೇಕೂಂತ ಅನ್ನಿಸಿತ್ತು. ಆದರೆ......."

"ಆದರೆ ನನ್ನಂಥ ಹೆಂಡತಿ ಸಿಗ್ತಾಳೆ ಅಂತ ಗೊತ್ತಿರಲಿಲ್ಲ ಅಲ್ವಾ? ನನಗೂ ಅಷ್ಟೇ. ನಿಮ್ಮ ಮನೆಯ ಪುರಾಣ, ಚರಿತ್ರೆಯ ಬಗ್ಗೆ ತಿಳಿದಿದ್ದರೆ, ನಾನೇ ನಿಮ್ಮನ್ನು ಮದುವೆಯಾಗ್ತಿರಲಿಲ್ಲ" ಮಾತು ಎಲ್ಲಿಂದ ಎಲ್ಲಿಗೋ ಹೋದಾಗ, ರಾಮಸ್ವಾಮಿ ಬೆಚ್ಚಿದ. ಶಾಂತ ಕೆಟ್ಟ ನಗೆ ನಕ್ಕಳು.

"ನೋಡಿ.... ಹೇಗೆ ಗಪ್‌ಚಿಪ್ ಆದ್ರಿ...... ನಿಮ್ಮ ಮನೆ ವಿಷಯ ಕೇಳಿ....."

"ನಿನ್ನ ಹತ್ತಿರ ಮಾತನಾಡೋನು ಮೂರ್ಖ. ಹಳೇ ಮಾತು ಕೆದಕಿ ಆಡಿ, ಮನಸ್ಸಿನ ಶಾಂತಿಯನ್ನೇ ಕೆಡಿಸಿಬಿಡ್ತೀಯ" ಎನ್ನುತ್ತಾ ಅಲ್ಲಿಂದ ಆಚೆ ಬಂದ.

* * *

## - - 22 - -

ಕೈಗೆ ಸಿಕ್ಕ ಒಂದೆರಡು ಬಟ್ಟೆಗಳನ್ನು ಒಂದು ಕಿಟ್ ಬ್ಯಾಗ್‌ಗೆ ತುಂಬಿಕೊಂಡು, ರಾಮಸ್ವಾಮಿ ಮನೆಯಿಂದ ಹೊರಟಿದ್ದನ್ನು ಶಾಂತ ಕಂಡರೂ ಕಾಣದಂತೆ ಸುಮ್ಮನಿದ್ದಳು.

"ನಾಟಕ ಆಡ್ತಾರೆ. ಅದೆಲ್ಲಿರ್ತಾರೋ ಇದ್ದು ಬರಲಿ. ಎರಡು ದಿನ ಹೊರಗೆ ಸುತ್ತಾಡಿದರೇ ಮನೆಯ ಬೆಲೆ ಗೊತ್ತಾಗುವುದು. ಎಷ್ಟು ದಿನ ಹೊರಗೇ ಇರೋಕ್ಕಾಗುತ್ತೆ" ಅಂತ. ಆದರೆ ಬರ್ತೀನಿ ಅಂತ ಸಹ ಒಂದು ಮಾತು ಹೇಳದೇ ಹೋದರಲ್ಲ. ಬಹಳ ಕೋಪ ಬಂದಿರಬಹುದು ಅಂತಂದುಕೊಂಡಳು.

"ನಾನೇನಂಥ ಮಾತ್ನಾಡಿದೆ. ಇರೋ ವಿಷಯಾನೇ ಹೇಳಿದ್ದು" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಎರಡು ದಿನಗಳ ನಂತರವೂ ಗಂಡ ಮನೆಗೆ ವಾಪಸ್ಸು ಬರದಿದ್ದಾಗ ಸ್ವಲ್ಪ ಆತಂಕ ಶುರುವಾಗಿತ್ತು. ಎಂದೂ ಹೀಗೆಲ್ಲಾ ಕೋಪ ಮಾಡಿಕೊಂಡು ಮನೆ ಬಿಟ್ಟು ಹೋದವರಲ್ಲ. ಯಾವುದಾದರೂ ವೃದ್ಧಾಶ್ರಮಕ್ಕೆ ಹೋಗಿ ಸೇರಿಕೊಂಡು ಬಿಟ್ಟರೋ ಏನೋ ಅಂತಂದುಕೊಂಡಾಗ, ಸೋತ ಅನುಭವವಾಗಿತ್ತು. ಮಗ ಮನೆಗೆ ಬರುವುದನ್ನೇ ಕಾದಿದ್ದು ಆತಂಕದಿಂದ ಕೇಳಿದಳು.

"ಎಲ್ಲಿಗೆ ಹೋಗ್ತೀನಿ ಅಂತ ಅಪ್ಪ ನಿನಗೇನಾದ್ರೂ ಹೇಳಿದ್ರಾ? ...... ಎರಡು ದಿನಗಳ ಮೇಲಾಯ್ತು. ನಿಮ್ಮಪ್ಪ ಮನೆಗೇ ಬಂದಿಲ್ಲ"

"ಅಪ್ಪ ಮನೇಲಿಲ್ವಾ? ಯಾವುದಾದ್ರೂ ಊರಿಗೆ ಹೋಗಿರಬಹುದು"

"ಸಾರ್ಥಕವಾಯ್ತು. ಎರಡು ದಿನಗಳಾದ್ರೂ, ಅಪ್ಪ ಮನೇಲಿಲ್ಲ ಅಂತ ನಿನಗೆ ಗೊತ್ತೇ ಆಗಲಿಲ್ವಾ?"

"ಗೊತ್ತಾಗಲಿಲ್ಲ. ನಾನು ಅಪ್ಪ ಒಟ್ಟೊಟ್ಟಿಗೇ ಮನೇಲಿರೋದೆ ಕಡಿಮೆ.... ಗಾಬರಿ ಯಾಕೆ? ಆಚಿ ಮನೆಗೆ ಹೋಗಿರಬಹುದು....."

"ಬೀಗರ ಮನೆಗೆ ಸುಮ್ಸುಮ್ನೆ ಯಾಕೆ ಹೋಗ್ತಾರೆ.... ಅದೂ ನನಗೆ ತಿಳಿಸದೇ....."

"ಅಂದ್ರೆ, ಅಪ್ಪ ಕೋಪ ಮಾಡಿಕೊಂಡು ಹೋಗಿದಾರಾ?..... ನೀವಿಬ್ರೂ ಜಗಳ ಆಡಿದ್ರಾ?......"

"ನಮ್ಮ ಜಗಳ ಹೊಸದೇನಲ್ಲ. ದಿನ ಬೆಳಗಾದರೆ ಇದ್ದೇ ಇರುತ್ತೆ. ಆದರೆ ಹೀಗೆ ಮನೆ ಬಿಟ್ಟು ಎಂದೂ ಹೋಗಿರಲಿಲ್ಲ"

"ಬರ್ತಾರೆ ಬಿಡಮ್ಮ ಅವರೇನು ಚಿಕ್ಕೋರಲ್ಲ"

"ಚಿಕ್ಕೋರಲ್ಲ ; ಮುದುಕರು. ಅದಕ್ಕೇ ಗಾಬರಿ.... ಒಂದು ವೇಳೆ ಯಾವುದಾದರೂ ಆಶ್ರಮಕ್ಕೆ ಹೋಗಿ ಸೇರಿಕೊಂಡು ಬಿಟ್ಟಿದ್ದರೇ...." ಪಕಪಕನೇ ನಕ್ಕ.

"ಅಪ್ಪನ ಜವಾಬ್ದಾರಿ ಇನ್ನು ಮುಗಿದಿಲ್ಲ. ಯಾವುದೇ ಆಶ್ರಮದಲ್ಲಿದ್ದರೂ ವಾಪಸ್ಸು ಕರೆ ತರುತ್ತೀನಿ..... ಜಗಳ ಯಾಕಾಯ್ತು ಅಂತ ತಿಳೀಲಿಲ್ಲ"

"ಯಾವುದೋ ಹಳೇ ಮಾತು. ಮಾತಿಗೆ ಮಾತು ಬೆಳೆಯಿತು... ಅಷ್ಟೇ ......"

"ಇನ್ನೆರಡು ದಿನ ನೋಡೋಣ..... ಆಮೇಲೆ ಪೋಲಿಸ್ ಕಂಪ್ಲೆಂಟ್ ಕೊಡೋಣ. ಯಾವುದೇ ಆಶ್ರಮದಲ್ಲಿದ್ದರೂ ಹುಡುಕಿ ಕರೆತರುತ್ತಾರೆ" ತಾಯಿಗೆ ಸಮಾಧಾನ ಹೇಳಿದ. ಆದರೆ, ತಂದೆ ಆಚಿಯ ಮನೆಗೆ ಹೋಗಿರಬಹುದೆಂಬ ಅನುಮಾನ ಇದ್ದೇ ಇತ್ತು. ಆ ದಿನವೇ ತಂದೆ ವಾಪಸ್ಸಾದುದನ್ನು ಕಂಡು ನೆಮ್ಮದಿ ಉಂಟಾಗಿತ್ತು.

"ಹೇಳದೇ ಕೇಳದೇ ಎಲ್ಲಿ ಹೊರಟು ಹೋಗಿದ್ರಪ್ಪಾ..... ನಮಗೆಲ್ಲಾ ಆತಂಕ ಆಗುಲ್ವಾ?"

"ಹಾಗೆ ಕೇಳು ಸೋಮ. ಯಾಕೆ ಹಾಗೆ ಮಾಡಿದ್ರು ಅಂತ......" ಶಾಂತಳೂ ಹೇಳಿದ್ದಳು.

"ಆಚಿ ಮಕ್ಕಳನ್ನು ನೋಡಬೇಕೆನ್ನಿಸಿತ್ತು. ಅಲ್ಲಿಗೆ ಹೋಗಿದ್ದೆ......"

"ನಂಗೊಂದು ಮಾತು ಹೇಳಿದ್ರೆ ನಾನೂ ಬರ್ತಿರಲಿಲ್ವಾ?"

"ಈಗೇನಂತೆ, ಒಂದೆರಡು ದಿನ ನೀನೂ ಹೋಗಿ ಬಾ..... ನಾನು ಸೋಮನ ಊಟ ತಿಂಡಿ ನೋಡಿಕೊಂಡು ಇರ್ತೀನಿ"

"ಬೀಗರು ಕೇಳಲಿಲ್ವಾ ಅದೇನು ಇದ್ದಕ್ಕಿದ್ದ ಹಾಗೇ ಬಂದ್ರಿ. ಅಂತ"

"ಕೇಳಿದ್ರು...... ಆಚಿ ಒಂದೆರಡು ಹುಡುಗಿಯರ ಫೋಟೋ ಜಾತಕ ಕಳಿಸಿದಾಳೆ

ನೋಡೋದಾದ್ರೆ ನೋಡು" ಎನ್ನುತ್ತಾ ಅಲ್ಲಿದ್ದ ಟೇಬಲ್ ಮೇಲೆ ಇಟ್ಟು, ಮಗನ ಕಡೆ ನೋಡಿದ. ಸುಮಂತ ಕಣ್ಣು ತಪ್ಪಿಸಿದ.

"ಆಮೇಲೆ ನೋಡ್ತೀನಿ. ಏಳಿ ಕೈ ಕಾಲು ತೊಳೆದುಕೊಳ್ಳಿ..... ಊಟ ಮಾಡೋರಂತೆ...."

"ಆಚಿ ಅತ್ತೆ ಎಷ್ಟು ಚೆನ್ನಾಗಿ ಅಡಿಗೆ ಮಾಡ್ತಾರೆ ಅಂತ...... ಎರಡೂ ದಿನವೂ ಸೊಗಸಾದ ಅಡಿಗೆ..."

"ಪುಣ್ಯಾತ್ಗಿತ್ತಿ..... ನಿಮ್ಮಿಂದ ಹೊಗಳಿಸಿ ಕೊಳ್ತಿದಾರೆ."

"ಅಪ್ಪಾ, ದಯವಿಟ್ಟು ಸುಮ್ಮನಿರ್ತೀರಾ..... ಅಮ್ಮನ್ನ ಯಾಕೆ ಚುಡಾಯಿಸ್ತೀರಿ?" ಸುಮಂತ ನಗುತ್ತಾ ಪ್ರಶ್ನಿಸಿದ.

"ಇರೋ ವಿಷಯ ಹೇಳಿದೆ ಕಣಯ್ಯಾ... ಅವಳು ಮಾಡೋ ಅಡಿಗೇನೂ ಹೊಗಳಿದೀನಿ. ಕೇಳು ಬೇಕಾದ್ರೆ....."

"ತೆಗಳಿಸಿಕೊಳ್ಳುವಂತಹ ಕೆಟ್ಟ ಅಡಿಗೇನ ನಾನೆಂದೂ ಮಾಡಿಲ್ಲ. ಸೋಮನ ಸ್ನೇಹಿತರೆಲ್ಲಾ ಹೊಗಳಿದಾರೆ... ಅಂದ್ಹಾಗೆ ಸತೀಶನ ಮದುವೆ ಯಾವತ್ತು?"

"ನಾಡಿದ್ದು..... ನೀವುಗಳೂ ಬರ್ತೀರಾ?"

"ಇಲ್ಲಪ್ಪಾ... ಎರಡು ದಿನ ಸುಧಾರಿಸಿಕೊಳ್ತೀನಿ. ನಿಮ್ಮಮ್ಮ ಬರೋದಾದ್ರೆ ಕರೆದುಕೊಂಡು ಹೋಗು"

"ನಾನು ನಿಮ್ಮೊಬ್ಬರನ್ನೇ ಬಿಟ್ಟು ಹೋಗುಲ್ಲ....."

"ಯಾಕೇ.... ನನಗೆ ಏನೂ ಆಗುಲ್ಲ ಹೋಗಿ ಬಾ....."

"ಹೋಗುಲ್ಲ ಅಂದರೆ ಹೋಗುಲ್ಲ... ಸಾಕು ಇನ್ನು ಮಾತು...." ಶಾಂತಾ ಇದ್ದಕ್ಕಿದ್ದಂತೆ ಸಿಡುಕಿದಾಗ, ತಂದೆ ಮಗ ಮುಖಮುಖ ನೋಡಿಕೊಂಡರು. ಅವರವರ ಆತಂಕ ಅವರಿಗೆ. ಏನಾದರೂ ಅನುಮಾನ ಬಂದಿರಬಹುದೇ....? ಅಂತೆನ್ನಿಸಿತ್ತು.

ಸತೀಶನ ಮದುವೆಗೆ, ಸುಮಂತ ತಾರಾ ಮದುವೆಯ ಹಿಂದಿನ ದಿನವೇ ಹೊರಟಿದ್ದರು. ಒಂದಿಬ್ಬರು ಸಹೋದ್ಯೋಗಿಗಳು ಮಾರನೇ ದಿನ ಬರುವವರಿದ್ದರು. ಸ್ಮಿತಾ ತನ್ನ ಊರಿಂದ ಬರುವವಳಿದ್ದಳು. ಮುಂಚೆಯೇ ಸೀಟು ಬುಕ್ ಮಾಡಿಸಿದ್ದರಿಂದ, ಪಕ್ಕ ಪಕ್ಕದ ಸೀಟುಗಳು ಸಿಕ್ಕಿದ್ದವು.

ತಾರಾ ಸಂಕೋಚದಿಂದ, ಕಿಟಕಿಯ ಬದಿಯ ಸೀಟಿನಲ್ಲಿ ಕುಳಿತಿದ್ದಳು. ಅವಳ ಪಕ್ಕದಲ್ಲಿ ಕುಳಿತ ಸುಮಂತನಿಗೆ ಏನೋ ಸಂತೋಷ. ಒಟ್ಟಿಗೇ ಕಾಲ ಕಳೆಯುವ ಅವಕಾಶ ಸಿಕ್ಕಿದೆ. ಬೇಕಾದಷ್ಟು ಮಾತುಗಳನ್ನಾಡಬಹುದು ಅಂತ. ಆದರೆ ಹೇಗೆ ಪ್ರಾರಂಭಿಸುವುದು? ಕಿಟಕಿಯಿಂದ ಆಚೆ, ಓಡುತ್ತಿರುವ ಗಿಡಮರಗಳನ್ನೇ ನೋಡುತ್ತಿದ್ದಳು. ಸುಮಂತ ಅವಳನ್ನೇ ನೋಡುತ್ತಿದ್ದ. ಮಧ್ಯೆ ಒಂದು ಕಡೆ ಬಸ್ಸು ನಿಂತಾಗ, ಸುಮಂತ ಇಬ್ಬರಿಗೂ ಎಳೆನೀರನ್ನು ತಂದಿದ್ದ.

"ತುಂಬಾ ಬಿಸಿಲು ಅಲ್ವಾ?" ಕೆಂಪಾಗಿದ್ದ ಅವಳ ಮುಖವನ್ನೇ ನೋಡಿದ.

"ಎಳೆನೀರು ತುಂಬಾ ಸಿಹಿಯಾಗಿದೆ ಸುಮಂತ್..... ಥ್ಯಾಂಕ್ಸ್...."

"ಇನ್ನೊಂದು ತಂದುಕೊಡಲಾ?......" ಏಬೇಡ ಎನ್ನುವಂತೆ ತಲೆಯಾಡಿಸಿದಳು.

"ಹೊಟ್ಟೆ ಹಸಿಯುತ್ತಿದ್ದರೆ ಹೇಳಿ.... ಏನಾದ್ರೂ ತಂದುಕೊಡ್ತೀನಿ....."

"ಏನೂ ಬೇಡ......." ಅಲ್ಲಿಗೆ ಮಾತು ಮುಗಿದಿತ್ತು. ಬಸ್ಸು ಹೊರಟಿತು. ಇಬ್ಬರೂ ಸೀದಾ ಮೊದಲಿಗೆ ಸತೀಶನ ಮನೆಗೆ ಬಂದರು. ಸತೀಶ ಇಬ್ಬರನ್ನು ಮುಗುಳ್ನಕ್ಕು

ಸ್ವಾಗತಿಸಿದ.

"ಅದೇನು ಇಬ್ಬರೇ ಬಂದ್ರಿ? ಇನ್ಯಾರೂ ಬರಲಿಲ್ವಾ?"

"ನಾಳೆ ಕೆಲವರು ಬರ್ತಾರೆ......"

"ಸ್ಮಿತಾ ಬರ್ತೀನಿ ಅಂತ ಹೇಳಿದ್ಲು ಇನ್ನು ಬಂದಿಲ್ವಾ?" ತಾರಾ ಕೇಳಿದಳು.

"ಬಂದಿದಾರೆ, ಒಳಗೆ ಇದಾರೆ.... ಬನ್ನಿ....." ಎಂದು ಒಳಗಿನ ರೂಮಿಗೆ ಕರೆದುಕೊಂಡು ಹೋದ.

ತಾರಾ ತನ್ನ ಸ್ನೇಹಿತೆಯ ಬಳಿ ಹೋಗಿ ಕುಳಿತಳು. ಸುಮಂತ ಸ್ವಲ್ಪ ದೂರದಲ್ಲಿ ಕುಳಿತ. ಸತೀಶ ಎಲ್ಲರಿಗೂ ತಿಂಡಿ ಕಾಫಿ ತರಿಸಿಕೊಟ್ಟು ತಾನೂ ಕುಳಿತ.

ಸ್ನೇಹಿತೆಯರಿಬ್ಬರೂ ಕಿಲಕಿಲನೆ ನಗುತ್ತಾ ಮಾತನಾಡುತ್ತಿದ್ದುದನ್ನು ಗಮನಿಸಿ ಸತೀಶ, ಹೇಳಿದ.

"ಈ ಹುಡುಗಿಯರಿಗೆ ಏನಿರುತ್ತೋ ಎಷ್ಟು ಮಾತು..... ನೋಡು ಹೇಗೆ ನಗುನಗುತ್ತಾ ಮಾತ್ನಾಡ್ತಿದಾರೆ......" ಅದನ್ನೇ ಸುಮಂತನೂ ಯೋಚಿಸುತ್ತಿದ್ದ.

ಬಸ್ಸಿನಲ್ಲಿ ನನ್ನ ಪಕ್ಕವೇ ಕುಳಿತಿದ್ದ ತಾರಾಳಿಗೆ, ನನ್ನೊಡನೆ ಮಾತನಾಡಲು ವಿಷಯಗಳೇ ಇರಲಿಲ್ಲ. ಈಗ ಮಾತಿನಿಂದ ಬಿಡುವೇ ಇಲ್ಲ, ಒಂದು ಗಳಿಗೆ ಸ್ಮಿತಾಳ ಬಗ್ಗೆ ಅಸೂಯೆ ಮೂಡಿತ್ತು.

"ಒಂದು ಗುಡ್‌ನ್ಯೂಸ್.... ಸ್ಮಿತಾ ಕ್ಯಾರಿಯಿಂಗ್..... ತನ್ನ ಅನುಭವಗಳನ್ನು ಸ್ನೇಹಿತೆಯೊಡನೆ ಹೇಳಿಕೊಳ್ಳುತ್ತಿರಬಹುದು ಅಲ್ವಾ?"

"ನಿನಗೆ ಹೇಗೆ ಗೊತ್ತು?"

"ನಾನು ದೊಡ್ಡ ಕುಟುಂಬದಲ್ಲಿ ಬೆಳೆದವನು, ವರ್ಷದಲ್ಲಿ ಎರಡೋ ಮೂರೋ ಮಕ್ಕಳು ಹುಟ್ಟ್ಟಾನೇ ಇರುತ್ವೆ... ನಂಗೆ ಅಷ್ಟು ಗೊತ್ತಾಗುಲ್ವಾ?" ಈ ಮಾತಿಗೆ ಏನು ಹೇಳಬೇಕೆಂದು ಸುಮಂತನಿಗೆ ತಿಳಿಯಲಿಲ್ಲ.

"ನಡೀ ಹೊರಗೆ ಹೋಗೋಣ. ನಮ್ಮ ಮನೆಯವರಿಗೆ ನಿನ್ನನ್ನು ಪರಿಚಯ ಮಾಡಿಸಿಕೊಡ್ತೀನಿ." ಇಬ್ಬರೂ ಎದ್ದರು.

"ಬರ್ತೀರೇನ್ರೀ ತಾರಾ..... ನಮ್ಮ ಮನೆ ನೋಡೋರಂತೆ....."

"ಆಮೇಲೆ ಬರ್ತಾಳೆ. ನಾನು ಏನೋ ಹೇಳ್ತಾ ಇದೀನಿ...." ಸ್ಮಿತಾ ನುಡಿದಳು.

"ನಮಗೂ ಹೇಳಿ......"

"ಇಲ್ಲ. ನಿಮಗೆಲ್ಲಾ ಹೇಳುವಂಥದ್ದಲ್ಲ" ಸ್ಮಿತಾ ನಕ್ಕಳು. ಅವಳು ಮೊದಲಿಗಿಂತ ಚೆನ್ನಾಗಿ ಆಗಿದಾಳೆ ಅಂತೆನ್ನಿಸಿತ್ತು ಸುಮಂತನಿಗೆ. ಸತೀಶ ಅವನ ಕೈ ಎಳೆದ "ನಿನ್ನ ದೃಷ್ಟಿ ತಾಕುತ್ತೆ ಅಷ್ಟೇ ...."

"ಮೊದಲಿಗಿಂತ ಚೆನ್ನಾಗಿ ಆಗಿದಾಳೆ... ಅಲ್ವಾ?"

"ಅವಳ ಎದುರಿಗೆ ತಾರಾ ಡಲ್ಲಾಗಿ ಕಾಣ್ತಾಳೆ ಅಲ್ವಾ?" ಈ ಮಾತು ಸುಮಂತನಿಗೆ ಇಷ್ಟವಾಗಲಿಲ್ಲ.

"ಪ್ರಯಾಣದ ಆಯಾಸದಿಂದ ಮಂಕಾಗಿದಾಳೆ... ಮುಖ ತೊಳೆದುಕೊಂಡು ಡ್ರೆಸ್ ಮಾಡಿಕೊಂಡರೆ ಇವರಂತೆಯೇ ಚೆನ್ನಾಗಿ ಕಾಣ್ತಾಳೆ....."

"ಏನಯ್ಯಾ ಅವಳ ಪರ ವಹಿಸಿಕೊಂಡು ಮಾತಾಡ್ತಿದೀಯ. ಏನು ವಿಷಯ?"

"ಏನು ವಿಷಯಾಂತ ನಿನಗೆ ಹೇಳದೇ ಇರ್ತೀನಾ?" ಸುಮಂತ ನಕ್ಕ.

ಮನೆಯವರಿಗೆ ತನ್ನ ಸ್ನೇಹಿತನ ಪರಿಚಯ ಮಾಡಿಕೊಟ್ಟ. ಸುಮಂತ ಎಲ್ಲರಿಗೂ

ವಿನಯದಿಂದ ಕೈ ಮುಗಿದು ನಮಸ್ಕಾರ ಅಂತಂದ. "ನಡೀ ಮಹಡಿ ಮೇಲಿನ ರೂಮಿನಲ್ಲಿ ಕೂತು ಮಾತನಾಡೋಣ.... ಇನ್ನು ನಾಳೆಯಿಂದ ನಾನು ಬಿಜಿ. ನಿನ್ನ ಕೈಗೆ ಸಿಕ್ಕಲ್ಲ" ಇಬ್ಬರೂ ಮಹಡಿ ಹತ್ತಿದರು.

"ಹೌದಲ್ವಾ? ಎಷ್ಟು ದಿನ ರಜಾ ಹಾಕಿದೀಯ?"

"ಸಧ್ಯಕ್ಕೆ ಮೂರು ವಾರ ರಜಾ ಹಾಕಿದೀನಿ. ಆಮೇಲೆ ಮುಂದುವರೆಸುತ್ತೀನೇನೋ. ಹನಿಮೂನ್‌ಗೆ ಹೋಗುವ ಕಾರ್ಯಕ್ರಮ ಬೇರೆ ಇದೆ....."

"ಯಾವೂರಿಗೆ ಹೋಗೋಣ ಅಂತ ಇದೀಯ?"

"ಯಾವುದಾದ್ರೂ ಹಳ್ಳಿಗೆ ಹೋಗೋಣ ಅಂತ...." ಗಂಭೀರವಾಗಿ ನಕ್ಕ.

"ನನ್ನ ಹೆಂಡತಿ, ಅವಳೂ ದೊಡ್ಡ ಷಹರಿನವಳು... ನನಗೂ ಪಟ್ಟಣದ ಜೀವನ ಇಷ್ಟವಾಗುಲ್ಲ.... ಅಲ್ಲದೇ, ನಾವು ಯಾವ ದೊಡ್ಡ ಊರಿಗೆ ಹೋದರೂ, ಸುತ್ತ ಮುತ್ತ ನೋಡುವ ಆಸಕ್ತಿ ಏನಿರುತ್ತೆ ನೀನೇ ಹೇಳು....."

"ನನಗೇನಯ್ಯಾ ಗೊತ್ತು... ನಾನು ಯಾವ ಹನಿಮೂನ್‌ಗೂ ಹೋಗಿಲ್ಲ ಇನ್ನು....."

"ಬಸ್ನಲ್ಲಿ ತಾರಾಳನ್ನೇ ನೋಡ್ತಿದ್ದೆ..... ಅವಳ ಹತ್ತಿರವೇ ಮಾತ್ನಾಡಿದ್ದೆ ಹೌದು ತಾನೇ...."

"ನೋಡ್ತಿದ್ದೆ.. ಆದರೆ ಅವಳು ಕಿಟಕಿಯಿಂದಾಚೇನೇ ಕಣ್ಣುಗಳನ್ನು ಇಟ್ಟುಕೊಂಡಿದ್ದಳು..... ಮಾತ್ನಾಡುಕ್ಕೆ ಯಾವ ವಿಷಯವೂ ಇರಲಿಲ್ಲ"

"ನೀನೆಂತಹ ಪ್ರೇಮಿಯೋ.... ಸಮಯ ಸಿಕ್ಕಾಗ ಮಾತನಾಡದೇ, ಪಿಳಿ ಪಿಳಿ ನೋಡ್ತಾ ಬಂದಿದೀಯಲ್ಲ..... ನಾನು ಎಂಗೇಜ್‌ಮೆಂಟ್ ಆದಾಗ್ನಿಂದ ಎಷ್ಟು ಪ್ರೇಮ ಪತ್ರ ಬರೆದಿದೀನಿ ಗೊತ್ತಾ? ಆದರೆ ಎದುರು ಬದುರು ಕೂತು ಮಾತನಾಡುಕ್ಕೆ ಸಮಯವೇ ಸಿಕ್ಕಿಲ್ಲ. ನಾಳೆ ಈ ಮದುವೆ ಶಾಸ್ತ್ರ ಮುಗಿದ ಮೇಲೆ ಈ ಪ್ರಪಂಚದಲ್ಲಿ ನಾವು ಇಬ್ಬರೇ...... ಅದಕ್ಕೆ ಯಾವ ತೊಂದರೆಯೂ ಬರದಿರಲಿ ಅಂತ, ಹಳ್ಳಿಯನ್ನು ಹನಿಮೂನ್‌ಗೆ ಅಂತ ಆರಿಸಿಕೊಂಡಿದೀನಿ."

"ಚೆನ್ನಾಗಿದೆ ನಿನ್ನ ತರ್ಕ.... ಹಳ್ಳಿಯಲ್ಲಿ ಯಾವ ಹೋಟೆಲ್ಲುಗಳಿವೆ....?"

"ಹಳ್ಳಿಯಲ್ಲಿ ನಮ್ಮ ಸೋದರ ಮಾವನ ಮನೆ ಇದೆ. ಮನೆಯಂತೂ ತುಂಬಾ ದೊಡ್ಡದು. ನಾಲ್ಕೋ ಐದೋ ರೂಮುಗಳಿವೆ. ನಮ್ಮ ಪಾಡಿಗೆ ನಾವು ಹಾಯಾಗಿರುತ್ತೇವೆ. ಅವರದ್ದೇ ತೋಟ ಇದೆ. ತೋಟದಲ್ಲಿ ತಿರುಗಾಡಿಕೊಂಡು ವನವಿಹಾರ ಮಾಡಬಹುದು..... ಒಂಥರಾ ಹೊಸಾ ರೀತಿಯ ಹನಿಮೂನ್......" ಸತೀಶ ಬಹಳ ಖುಷಿಯಲ್ಲಿದ್ದ.

"ಇವನದು ಅರೇಂಜ್ಡ್ ಮ್ಯಾರೇಜ್...... ಅಪ್ಪ ಅಮ್ಮ ನೋಡಿದ ಹುಡುಗಿಯನ್ನು ಒಪ್ಪಿ ಮದುವೆಯಾಗುತ್ತಿದಾನೆ. ಇದು ಸರಿಯೋ? ಪ್ರೀತಿಸಿ ಮದುವೆಯಾಗುವುದು ಸರಿಯೋ? .....ಅನಿಸಿದ್ದನ್ನೇ ಕೇಳಿದ.

"ನೀನು ಯಾರನ್ನಾದರೂ ಪ್ರೀತಿಸಿ ಮದುವೆಯಾಗ್ತಿದೀಯೇನೋ ಅಂತ ಅಂದುಕೊಂಡಿದ್ದೆ"

"ಪ್ರೀತಿಸಬಹುದಾಗಿತ್ತು. ಆದರೆ ನನಗೆ ಅಂತಹವಳು ಯಾರೂ ಸಿಗಲೇ ಇಲ್ಲ. ಆದ್ದರಿಂದ ಆ ಪ್ರಶ್ನೆ ಬರಲೇ ಇಲ್ಲ..."

"ನೀನು ಹುಡುಗಿಯರ ಹತ್ತಿರ ಅಷ್ಟು ಫ್ರೀಯಾಗಿ ಮಾತಾಡುವುದನ್ನು ನೋಡಿ,

ನಾನು ತಪ್ಪು ತಿಳಿದುಕೊಂಡಿದ್ದೆ"

"ಹುಡುಗಿಯರ ಹತ್ತಿರ ಮಾತಾಡಿದ್ದೆಲ್ಲಾ ಪ್ರೀತಿಯಾಗುತ್ತೇನೋ.... ನೀನು ಹೆಚ್ಚಿಗೆ ಮಾತನ್ನೇ ಆಡುತ್ತಿರಲಿಲ್ಲ. ಮತ್ತೆ ನಿನಗೆ ಹೇಗೆ ಹುಟ್ಟಿತು ಪ್ರೀತಿ?"

"ಅಂಥದ್ದೆಲ್ಲಾ ಏನಿಲ್ಲ ಬಿಡಯ್ಯಾ...."

"ನಿನಗೆ ಸುಳ್ಳು ಹೇಳಕ್ಕು ಬರುಲ್ಲ. ನೀನು ತಾರಾ ಒಬ್ಬರನ್ನೊಬ್ಬರು ಪ್ರೀತಿಸ್ತಿದೀರೋ ಇಲ್ಲವೋ....."

"ಇಷ್ಟ ಪಟ್ಟಿರೋದೇನೋ ನಿಜ... ಆದರೆ....."

"ಆದರೆ ದೊಡ್ಡವರ ಪ್ರಾಬ್ಲಂ... ಹೌದು ತಾನೇ....?"

"ಪ್ರಾಬ್ಲಂ ಅಂತ ಗೊತ್ತಿಲ್ಲ. ಮನೇಲಿ ಈ ಮಾತೇ ಬಂದಿಲ್ಲ...."

"ಯಾವಾಗ ಆಡಬೇಕೂಂತ ಇದೀಯ? ಅಥವಾ ನಾನು ಬಂದು ಆಡ್ಲಾ?"

"ಬೇಡಪ್ಪಾ ಬೇಡ....."

"ನಿಮ್ಮ ಮನೇಲಿ ವಿಲನ್ ಯಾರು? ಅಪ್ಪನೋ ಅಮ್ಮನೋ....."

"ಅಪ್ಪನಿಗೆ ಒಪ್ಪಿಗೆ ಇದೆ ಅಂತ ಕಾಣುತ್ತೆ. ಆದರೆ ಅಮ್ಮನ್ನ ವಿಲನ್ ಅಂತ ಈಗಲೇ ಹೇಗೆ ಹೇಳಲಿ?"

"ಇಷ್ಟೆಲ್ಲಾ ಹಿಂಜರಿಕೆ ಇರೋನು ಪ್ರೀತಿ ಮಾಡುಕ್ಕೆ ಲಾಯಖ್ಖಿಲ್ಲ.... ನಾನೇ ನಿನ್ನ ಜಾಗದಲ್ಲಿದ್ದಿದ್ದರೆ, ಎಂದೋ ಮದುವೆಯಾಗಿರುತ್ತಿದ್ದವು... ನಾನೀಗ ಮದುವೆಯಾಗುತ್ತಿರುವವಳು. ನಮ್ಮ ಅತ್ತಿಗೆಯ ಕಸಿನ್.... ನೋಡಿದೆ. ನನಗೂ ಇಷ್ಟವಾದಳು. ಎಂಗೇಜ್‌ಮೆಂಟ್ ಆದಮೇಲೆ ನಾನು ಅವಳನ್ನು ಪ್ರೀತಿಸಲು ಪ್ರಾರಂಭಿಸಿದ್ದು. ಹನಿಮೂನ್‌ಗೆ ಹೋಗಿ ಬಂದ ಮೇಲೆ ನಮ್ಮ ಪ್ರೀತಿ ಇನ್ನು ಹೆಚ್ಚುತ್ತೆ ಅನ್ನೋ ನಂಬಿಕೆ ನನಗಿದೆ.... ಮುಕ್ತವಾಗಿ ನಕ್ಕ. ಅವನನ್ನು ನೋಡಿ ಇವನಿಗೆ ಅಸೂಯೆಯುಂಟಾಗಿತ್ತು.

"ಹೆದರಬೇಡಯ್ಯಾ ಎಲ್ಲಾದಕ್ಕೂ ಒಂದು ಪರಿಹಾರವಿದ್ದೇ ಇರುತ್ತೆ. ಒಂದು ವೇಳೆ ನಿಮ್ಮ ಮನೆಯಲ್ಲಿ ಒಪ್ಪದಿದ್ದರೂ, ರಿಜಿಸ್ಟರ್ಡ್ ಮದುವೆಯಾಗುವುದಕ್ಕೆ ನೀನು ರೆಡಿಯಾಗಿರಬೇಕು...."

"ಆದರೆ....."

"ಈಗಲಿಂದ ಯಾಕೆ ತೊದಲ್ತೀಯ.... ಆ ಕಾಲ ಬಂದಾಗ, ಹೇಗಾದರೂ ಒಂದು ಮಾರ್ಗ ಸಿಕ್ಕೇ ಸಿಗುತ್ತದೆ. ನಾಳೆ ನಡೆಯುತ್ತಿರುವುದು ನನ್ನ ಮದುವೆ ಚೀರ್ ಅಪ್...... ಬಾ. ಆ ಹುಡುಗೀರು ಏನು ಮಾಡ್ತಿದಾರೆ ನೋಡೋಣ" ಇಬ್ಬರೂ ಕೆಳಗಿಳಿದು ಬಂದರು.

ಹುಡುಗಿಯರಿಬ್ಬರೂ, ಹೊರಗೆಲ್ಲೋ ತಿರುಗಾಡಿ ಬರಲು ಸಿದ್ಧರಾಗುತ್ತಿದ್ದರು. ಸತೀಶ ಹೆದರಿಸಿದ.

"ನಿಮಗೆ ಗೊತ್ತಿಲ್ಲದ ಊರು ಇದು. ಕಳೆದು ಹೋದೀರಾ?"

"ಇಲ್ಲೇ ಹತ್ತಿರ ಎಲ್ಲಾದರೂ ತಿರುಗಾಡಿ ಬರ್ತೀವಿ. ದೂರ ಹೋಗುಲ್ಲ" ಅಂತ ಅವರಿಬ್ಬರೂ, ಅವನ ಮಾತನ್ನು ಮೀರಿ ತಿರುಗಾಡಲು ಹೊರಟೇ ಬಿಟ್ಟರು. ಸತೀಶ ಹೇಳಿದಂತೆಯೇ ಇಬ್ಬರೂ ರಸ್ತೆ ತಪ್ಪಿದರು. ಮಾತನಾಡುವ ಭರಾಟೆಯಲ್ಲಿ ಎಷ್ಟೂ ದೂರ ಹೋಗಿರುವೆಂದು ತಿಳಿಯದು. ವಿಳಾಸ ಸಹ ಹತ್ತಿರ ಇರಲಿಲ್ಲ. ಕೆಟ್ಟ ಮುಖ ಹಾಕಿಕೊಂಡು ಇಬ್ಬರೂ ಪೋಲಿಸ್ ಸ್ಟೇಷನ್‌ಗೆ ಬಂದರು.

ತಾರಾ, ನಡೆದುದನ್ನು ಪೋಲಿಸ್ ಇನ್ಸ್‌ಪೆಕ್ಟರನಿಗೆ ತಿಳಿಸಿ, ಸತೀಶನ ಹೆಸರನ್ನು

ಹೇಳಿದಳು ಅವನ ತಂದೆಯ ಹೆಸರು ಸಹ ಮರೆತು ಹೋಗಿತ್ತು.

"ವಿಳಾಸ ಇಲ್ಲದೇ ಹೇಗೆ ಹುಡುಕೋದು.... ಯಾವ ಏರಿಯಾ ಅಂತ ಸಹ ಗೊತ್ತಿಲ್ಲ ನಿಮಗೆ.... ಪಾಪ ಈ ಹುಡುಗಿ ಗರ್ಭಿಣಿ ಇದಾಳೆ. ಅವರೆಲ್ಲಾ ಎಷ್ಟು ಗಾಬರಿಯಾಗಿರುತ್ತಾರೋ....?" ಇನ್ಸ್‌ಪೆಕ್ಟರ್ ಕೂಡಾ ಆತಂಕಗೊಂಡಿದಾನೆನಿಸಿತ್ತು.

ಹೆದರಿಕೆಯಿಂದ, ಸ್ಮಿತಾಳಿಗೆ ಮೈ ಬೆವರಲು ಪ್ರಾರಂಭಿಸಿತ್ತು. ತಾರಾಳಿಗೂ ಧೈರ್ಯ ಹೇಳಲು ತಿಳಿಯಲಿಲ್ಲ. ಪೋಲಿಸ್ ಇನ್‌ಸ್ಪೆಕ್ಟರನೇ, ಸಮೀಪದ ನರ್ಸಿಂಗ್ ಹೋಂಗೆ ಅವಳನ್ನು ಸೇರಿಸಿ, ಮುಂದಿನ ಕ್ರಮಕ್ಕೆ ಅನುವಾದ.

"ಸತೀಶ ಅನ್ನೋ ಹೆಸರನ ಹುಡುಗನಿಗೆ ನಾಳೆ ಮದುವೆ ಯಾವ ಛತ್ರದಲ್ಲಿ ನಡೆಯುತ್ತಿದೆ ಅಂತ ವಿಚಾರಿಸಿ. ಎಲ್ಲಾ ಪೋಲಿಸ್ ಸ್ಟೇಷನ್‌ಗೂ ಈಗಲೇ ಸಂದೇಶ ಕಳಿಸಿ.... "ಹಾಗೇ, ಈ ಹುಡುಗಿಯರನ್ನು ಕುರಿತು, ಯಾವುದಾದರೂ ಪೋಲಿಸ್ ಸ್ಟೇಷನ್‌ನಲ್ಲಿ ಕಂಪ್ಲೆಂಟ್ ಬಂದಿದ್ದರೆ, ನನಗೆ ತಕ್ಷಣ ತಿಳಿಸಿ"

ಸ್ಮಿತಾಳನ್ನು ಅಡ್ಮಿಟ್ ಮಾಡಿಕೊಂಡ ಲೇಡಿ ಡಾಕ್ಟರು, ಅವಳಿಗೆ ನಿದ್ದೆ ಬರುಂತಹ ಇಂಜೆಕ್ಷನ್ ಕೊಟ್ಟಳು. ತಾರಾ ಅವಳ ಬೆಡ್ ಪಕ್ಕದಲ್ಲೇ ಕುಳಿತಳು.

ಸುಮಾರು ಮಧ್ಯರಾತ್ರಿಯ ಹೊತ್ತಿಗೆ ಸುಮಂತ, ಸತೀಶ್ ಆ ನರ್ಸಿಂಗ್ ಹೋಮ್‌ಗೆ ಬಂದರು. ಸುಮಂತನನ್ನು ಕಂಡೊಡನೆ ತಾರಾ, ಓಡಿ ಬಂದು ಅವನನ್ನು ತಬ್ಬಿಕೊಂಡಳು. ಅವನು ಅವಳ ತಲೆ ಸವರಿದ.

"ಇದೆಲ್ಲಾ ಏನು? ಊರು ಗೊತ್ತಿಲ್ಲದ ಮೇಲೆ ಹೊರಗೇಕೆ ಸುತ್ತಾಡುಕ್ಕೆ ಬಂದ್ರಿ?" ಸತೀಶ ಗದರಿದ.

"ಸಾರಿ, ಹೀಗಾಗುತ್ತೆ ಅಂತ ನಮಗೆ ಗೊತ್ತಾಗ್ಲೇ ಇಲ್ಲ" ತಾರಾ ಮೆಲ್ಲನೆ ಅಳಲಾರಂಭಿಸಿದ್ದಳು. ಸುಮಂತ ಅವಳ ತಲೆಯನ್ನು ಸವರುತ್ತಾ ಕೇಳಿದ.

"ಸ್ಮಿತಾ ಹೇಗಿದಾಳೆ? ಏನೂ ಸೀರಿಯಸ್ ಇಲ್ಲ ತಾನೇ?"

"ಏನೋ ಗೊತ್ತಿಲ್ಲ. ಅವಳೂ ತುಂಬಾ ಹೆದರಿ ಬಿಟ್ಟಿದಾಳೆ"

"ಹೆದರಿಕೆ ಆಗದೇ ಇರುತ್ತಾ? ಮೊದಲೇ ಪ್ರೆಗ್ನೆಂಟ್.... ನೀವು ಅವಳನ್ನು ಎಬ್ಬಿಸಿ. ನಾನು ಹೋಗಿ ಡಾಕ್ಟರನ್ನು ಕಂಡು ಬರ್ತೀನಿ. ಕೆಲವೇ ನಿಮಿಷಗಳಲ್ಲಿ ಅವಳನ್ನು ಡಿಸ್ಚಾರ್ಜ್ ಮಾಡಿಸಿಕೊಂಡು, ಪೋಲಿಸ್ ಇನ್‌ಸ್ಪೆಕ್ಟರ್‌ಗೆ ಮತ್ತೆ ಮತ್ತೆ ಥ್ಯಾಂಕ್ಸ್ ಹೇಳಿ, ಟ್ಯಾಕ್ಸಿಯಲ್ಲಿ ಹಿಂತಿರುಗಿದರು. ಮನೆ ಮಂದಿಯೆಲ್ಲಾ ಇವರಿಗಾಗಿ ಕಾಯುತ್ತಾ ನಿಂತಿದ್ದರು. ಎಲ್ಲರೂ ಬಂದು ವಿಚಾರಿಸುವವರೇ.

ರಾತ್ರಿಯ ಊಟವನ್ನು ಸಹ ಮಾಡದೇ ಇವರುಗಳಿಗಾಗಿ ಕಾಯುತ್ತಾ ಇದ್ದವರನ್ನು ಕಂಡು, ಹುಡುಗಿಯರಿಬ್ಬರಿಗೂ ಸಂಕೋಚವಾಗಿತ್ತು.

"ಏನು ಹುಡುಗೀರಮ್ಮ ನೀವು.... ಗೊತ್ತಿಲ್ಲದ ಊರಿನಲ್ಲಿ ದಿಕ್ಕುಗೆಟ್ಟು ಓಡಾಡಿದರೆ ದಾರಿ ತಪ್ಪದೇ ಇರುತ್ತಾ?" ತಾರಾ ಸುಮಂತನ ಕೈಗಳನ್ನು ಹಿಡಿದಳು. ಅವಳ ಕೈ ಬೆವರಿನಿಂದ ತೊಯ್ದು ಹೋಗಿತ್ತು. ನಿದ್ದೆಯ ಜೊಂಪಿನಲ್ಲಿದ್ದ ಸ್ಮಿತಾಳನ್ನು ಸತೀಶನೇ ಒಳಗೆ ಕರೆತಂದು ಮಲಗಿಸಿದ.

"ಡಾಕ್ಟರು ನಿದ್ದೆಯ ಇಂಜೆಕ್ಷನ್ ಕೊಟ್ಟಿದಾರೆ. ಏನೂ ಭಯವಿಲ್ಲ ಅಂತ ಹೇಳಿದಾರೆ... ಡಾಕ್ಟರು...."

"ನಿಮಗೆಲ್ಲಿ ಪತ್ತೆಯಾದರು?" ಯಾರೋ ಕೇಳಿದರು. ಸತೀಶ ನಡೆದ ವಿಷಯವನ್ನು ವಿವರಿಸಿದ...... ಸ್ಮಿತಾ ಏನೋ ಅರೆನಿದ್ದೆಯಲ್ಲಿದ್ದಳು. ರಾತ್ರಿಯೆಲ್ಲಾ ಪೂರಾ ಎಚ್ಚರವಿದ್ದ

ತಾರಾ ಹೆದರಿ ಬಿಟ್ಟಿದ್ದಳು. ಏನೇನೋ ಕೆಟ್ಟ ಆಲೋಚನೆಗಳೇ..... ಸುಮಂತನನ್ನು ಎಬ್ಬಿಸಿ, ಅವನೊಡನೆ ತನ್ನ ದುಗುಡಗಳನ್ನು ಹೇಳಿಕೊಳ್ಳುವ ಮನಸ್ಸಾಗಿತ್ತು. ಆದರೆ ಇದು ಬೇರೆಯವರ ಮನೆ, ತಾನು ಎದ್ದು ಸುಮಂತ ಮಲಗಿರುವೆಡೆ ಹೋದರೆ, ಮತ್ತೇನು ಹಗರಣವಾಗುವುದೋ ಎಂದು ಮತ್ತೂ ಹೆದರಿದಳು.

ಸುಮಂತನಿಗೂ ನಿದ್ದೆ ಬಂದಿರಲಿಲ್ಲ. ತಾರಾಳ ಮೇಲೆ ಕೋಪ ಬಂದಿತ್ತು. ಬೇಡ ಎಂದರೂ, ಮಹಾ ತಿಳಿದವಳಂತೆ, ಊರು ಸುತ್ತೋಕೆ ಹೋಗಿದ್ದಳು. ಏನಾದರೂ ಹೆಚ್ಚು ಕಡಿಮೆ ಆಗಿದ್ದರೆ, ..... ಎಲ್ಲರಿಗೂ ತಿಳಿಯುತ್ತಿತ್ತು. ಊರಿನಿಂದ ನನ್ನ ಜೊತೆ ಬಂದವಳು. ಈ ಹುಡುಗೀರು ಎಷ್ಟು ತಲೆಹರಟೆಗಳು....? ಸ್ಮಿತಂಗೆ ಏನಾದ್ರೂ ಆಗಿದ್ದರೆ, ಅವರ ಮನೆಯವರು ಅನ್ನದೇ ಬಿಡುತ್ತಿದ್ದರೇ ....... ಆ ಪೋಲಿಸ್ ಇನ್‌ಸ್ಪೆಕ್ಟರ್ ಒಳ್ಳೆಯವನಾದ್ದರಿಂದ ಸರಿ ಹೋಯ್ತು... ಇಲ್ಲದಿದ್ದರೆ... ಮುಂದೆ ಯೋಚಿಸುವುಕ್ಕೂ ಅವನು ಹೆದರಿದ. ತಾರಾಳನ್ನು ಚೆನ್ನಾಗಿ ಬೈಯಬೇಕೆನ್ನಿಸಿತ್ತು. ಆದರೆ ತನಗೆ ತಾನೇ ಸಮಾಧಾನ ಹೇಳಿಕೊಂಡ.

"ಮೊದಲೇ ಹೆದರಿದ್ದಾಳೆ. ಬೈದರೇನು ಗತಿಯೋ? ಎಂದುಕೊಂಡ.

ಬೆಳಿಗ್ಗೆ ಹೊತ್ತಿನಂತೆಯೇ ಎಲ್ಲರೂ ಛತ್ರಕ್ಕೆ ಹೊರಡಲು ಸಿದ್ಧರಾಗಿದ್ದರು. ಸತೀಶ ಸುಮಂತನಿಗೆ ಹೇಳಿದ.

"ಹುಡುಗಿಯರಿಬ್ಬರೂ ಹೆದರಿ ಬಿಟ್ಟಿದಾರೆ. ಅವರಿಗೆ ರೆಸ್ಟ್ ಬೇಕು. ಅವರುಗಳು ನಿಧಾನವಾಗಿ ಛತ್ರಕ್ಕೆ ಬರಲಿ. ನೀನು ಇಲ್ಲೇ ಅವರುಗಳ ಜೊತೆಯಲ್ಲಿರು. ಅಡಿಗೆಯವರು ಇರ್ತಾರೆ. ಏನು ಕೇಳಿದರೂ ಕೊಡ್ತಾರೆ"

"ಇದೆಲ್ಲಿ ರಾಮಾಯಣವೋ ಸತೀಶ. ನಾನು ಬಂದದ್ದು ಮದುವೇನ ಅಟೆಂಡ್ ಮಾಡೋಕೆ. ಈ ಹುಡುಗಿಯರನ್ನ ಅಟೆಂಡ್ ಮಾಡೋ ಸ್ಥಿತಿ ಬಂತಲ್ಲೋ...."

"ಹಾಗಾಗುತ್ತಮ್ಮ ಹಾಗಾಗುತ್ತೆ.... ಒಂದೊಂದು ಸಲ ಹಾಗಾಗುತ್ತೆ.... ನೆನ್ನೆ ರಾತ್ರಿ ಇವರುಗಳ ಪತ್ತೆಯಾಗೋವರೆಗೆ, ನಾನು ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡಿದ್ದೆ.. ಎಷ್ಟು ಧೈರ್ಯ? ಬೇಡಾಂದ್ರೂ ತಿರುಗಾಡೋಕೆ ಹೋದ್ರಲ್ಲ..... ಅದಕ್ಕೇ ಹೀಗಾದದ್ದು.... ನಾನು ಹೋಗ್ತೀನಪ್ಪಾ..... ನನ್ನದೇ ಮದುವೆ ನಾನಿಲ್ಲದಿದ್ದರೆ ಹೇಗೆ? ಸಾರಿ ಫ್ರೆಂಡ್... ನಾನು ಹನ್ನೊಂದು ಗಂಟೆಯ ಹೊತ್ತಿಗೆ ಕಾರು ಕಳಿಸ್ತೀನಿ. ಎಲ್ಲಾ ಬಂದು ಬಿಡಿ......" ಸುಮಂತ ತಲೆಯಾಡಿಸಿದ.

ಅವರುಗಳು ಹೋಗುವವರೆಗೂ ಕಾದಿದ್ದು ಸುಮಂತ ಮತ್ತೆ ಮಲಗಿದ. ರೂಮಿನಲ್ಲಿ ತಾರಾ, ಸ್ಮಿತಾ ಇಬ್ಬರೂ ನಿದ್ರಿಸುತ್ತಿದ್ದರು..... ಎಷ್ಟೋ ಹೊತ್ತಿನ ನಂತರ ತಾರಾ ಎದ್ದು ಬಂದು ಸುಮಂತನ ಪಕ್ಕ ಕುಳಿತಳು. ಅವನು ಬೆಚ್ಚಿ ಎದ್ದ.

"ಯಾಕೆ ಹೀಗಾಯ್ತು ಸುಮಂತ್. ನನಗೆ ಏನೇನೋ ಆಗ್ತಿದೆ?"

"ಯಾಕೆ ನಿಂಗೂ ಹುಶಾರಿಲ್ವಾ?" ಎನ್ನುತ್ತಾ ಅವಳ ಹಣೆಯ ಮೇಲೆ ಕೈ ಇಟ್ಟ. ಹಣೆ ತಣ್ಣಗಿತ್ತು.

"ಸ್ಮಿತಾ ಇನ್ನು ಮಲಗಿದಾರಾ?..."

"ಹೂಂ. ಅವಳಿಗೆ ಏನೂ ಆಗದಿರಲಿ ದೇವರೇ....." ಪ್ರಾರ್ಥಿಸಿದಳು.

"ಏನೂ ಆಗುಲ್ಲ. ಧೈರ್ಯವಾಗಿರು. ಒಳಗೆ ಅಡಿಗೆಯವರಿದಾರೆ ಎರಡು ಲೋಟ ಕಾಫಿ ತಗೊಂಡು ಬಾ. ಕುಡಿಯೋಣ. ರಾತ್ರಿ ಯಾರಿಗೂ ಊಟವಿಲ್ಲ. ಬೇಗ ಛತ್ರಕ್ಕೆ ಹೋಗೋಣ. ಅಲ್ಲಿ ತಿಂಡಿ ತಿನ್ನಬಹುದು."

"ನಾನಂತೂ ಛತ್ರಕ್ಕೆ ಬರುಲ್ಲ.... ನನಗೆ ಮುಜುಗರವಾಗುತ್ತೆ"

"ನಾನ್ಸೆನ್ಸ್.... ನಾವು ಬಂದಿದ್ದು ಮದುವೆಗೆ.... ಇಲ್ಲಿ ಕೂತು ಏನು ಮಾಡೋದು? ಬೇಗ ಬೇಗ ಇಬ್ಬರೂ ರೆಡಿಯಾಗಿ...."

"ನಾವಿಬ್ರೂ ಬರುಲ್ಲ. ನೀವು ಬೇಕಾದರೆ ಹೋಗಿ. ಹೇಗೂ ಅಡಿಗೆಯವರು ನಮ್ಮ ಜೊತೆಗಿರ್ತಾರೆ...." ಒಳಗಿನಿಂದ ಎರಡು ಕಪ್‌ಗಳಲ್ಲಿ ಕಾಫಿ ತಂದಳು.

ತನಗೆ ಅತಿ ಸಮೀಪದಲ್ಲಿ ಕುಳಿತು ಚಿಂತೆಯಿಂದ ಕಾಫಿ ಹೀರುತ್ತಿದ್ದವಳನ್ನು ನೋಡಿ ನಗು ಬಂದಂತಾಗಿತ್ತು. ಅವನ ಕಡೆ ಆಗಾಗ್ಗೆ ನೋಡುತ್ತಿದ್ದವಳು, ಅವನ ನಗೆಯನ್ನು ಕಂಡು ಹುಬ್ಬು ಗಂಟಿಕ್ಕಿದ್ದಳು.

"ನನ್ನ ಬಗ್ಗೆ ಕರುಣೆಯೇ ಇಲ್ಲ. ನಗು ಬರ್ತಿದೆ ಅಲ್ವಾ ನಿಮಗೆ?"

"ಯಾರದ್ದಾದ್ರೂ ಕರುಣೆ ಬೇಕಾದರೆ, ಇಂಥಾ ಕೆಲಸ ಮಾಡಬೇಕಾ?" ಅವನು ಛೇಡಿಸಿದ.

"ಅವಮಾನದಿಂದ ನನ್ನ ಪ್ರಾಣ ಹೋಗ್ತಿದೆ. ನಿಮಗೆ ತಮಾಷೆ...."

"ಪ್ರಾಣ ಹೋಗಿದ್ದು ನಂದು... ಅವಿವೇಕಿಗಳ ತರಹ ತಿರುಗಾಡುಕ್ಕೆ ಹೋಗಿದ್ದೋರು ನೀವು...." ಸಿಡುಕಿದ.

"ಸಾರಿ ಸುಮಂತ್..... ಪ್ಲೀಸ್ ಈ ವಿಷಯಾನ ಯಾರಿಗೂ ಹೇಳಬೇಡಿ."

"ನಾನ್ಯಾಕೆ ಟಾಂ ಟಾಂ ಮಾಡಿಕೊಂಡು ಬರಲಿ? ಇಷ್ಟರ ಮೇಲೆ ಯಾರಿಗಾದ್ರೂ ತಿಳಿದರೂ ಏನೀಗ.... ಇದೇನು ಕೊಲೆಯೇ? ಕಳ್ಳತನವೇ?"

"ಅಲ್ಲ. ಆದರೂ ಪೋಲಿಸ್ ಸ್ಟೇಷನ್ನಿಗೆ ಹೋದದ್ದು.... ನರ್ಸಿಂಗ್ ಹೋಮ್‌ಗೆ ಹೋದದ್ದು...... ನೆನೆಸಿಕೊಂಡರೆ, ಈಗಲೂ ಭಯ ಆಗುತ್ತೆ"

"ಪೋಲಿಸ್ನೋರು ಒಳ್ಳೆಯವನಾಗಿದ್ದಕ್ಕೆ ಬಚಾವ್ ಆದ್ರೀ..... ಇಲ್ಲದಿದ್ದರೆ, ಏನೇನಾಗುತ್ತಿತ್ತೋ...?"

"ಪ್ಲೀಸ್..... ನೆನಪಿಸಬೇಡಿ...." ಎನ್ನುತ್ತಾ ಕಣ್ಣುಗಳನ್ನು ಮುಚ್ಚಿಕೊಂಡಳು. ಸುಮಂತನಿಗೆ ತಮಾಷೆ ಎನಿಸಿತ್ತು. ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದ.... "ಏಯ್ ಕಣ್ಣು ಬಿಡು.... ಕಣ್ಣು ಬಿಡು...." ಎಂದ. ಅವನ ಬಿಸಿ ಉಸಿರು ಅವಳಿಗೆ ತಾಗಿತ್ತು.... ಹೆದರಿ ಕಣ್ಣು ಬಿಟ್ಟಳು.

"ಏಯ್ ಏನ್ಮಾಡ್ತಿದೀರಿ ನೀವು......" ಹಿಂದೆ ಸರಿದಳು.

"ನಾನೇನ್ಮಾಡ್ದೆ...... ಕಣ್ಣು ಬಿಡು ಅಂತಂದೆ....."

"ನೆನ್ನೆ ರಾತ್ರಿಯಿಂದ ನನಗೆ ಏನೇನೋ ಕೆಟ್ಟ ಆಲೋಚನೆಗಳಿಂದ ಭಯ ಆಗ್ತಿದೆ ಸುಮಂತ್.... ದಯವಿಟ್ಟು ಬೈಯಬೇಡಿ...."

"ನಾನೆಲ್ಲಿ ಬೈದೆ? ಹುಚ್ಚು ಹುಡುಗಿ.... ಬಾಯಿಲ್ಲಿ" ಎಂದು ಅವಳನ್ನು ತನ್ನ ಬಳಿಗೆ ಎಳೆದುಕೊಂಡ. ಅವನೆದೆಗೆ ಒರಗಿ ಕೂತಿದ್ದವಳಿಗೆ ಏನೋ ನೆಮ್ಮದಿ. ಸುಮಂತನಿಗೂ ಏನೋ ನೆಮ್ಮದಿ. ನೆನ್ನೆಯ ಆ ಪ್ರಸಂಗ ನಡೆಯಬಾರದಾಗಿತ್ತು ನಿಜ. ಆದರೆ ಅದರಿಂದ, ಈಗ ನನ್ನ ಪ್ರೀತಿಯನ್ನು ಪ್ರಕಟಗೊಳಿಸುವ ಈ ಅವಕಾಶ ಒದಗಿದೆ ಎಂದುಕೊಂಡು ಅವಳನ್ನು ತನ್ನ ಬಾಹುಗಳಿಂದ ಬಳಸಿದ.

* * *

- - 23 - -

ಸ್ಮಿತಾ, ಒಳಗಿನಿಂದ ತಾರಾ ತಾರಾ.... ಅಂತ ಕ್ಷೀಣವಾಗಿ ಕರೆದದ್ದು ಇವರಿಬ್ಬರಿಗೂ ಕೇಳಿಸಿರಲೇ ಇಲ್ಲ. ಅಡಿಗೆಯವರು ಒಳಗಿನಿಂದ ಬಂದರು. ಯಾರ ಪರಿವೆಯೂ ಇಲ್ಲದೇ ಒಬ್ಬರಿಗೊಬ್ಬರು ಒರಗಿಕೊಂಡು, ಕಣ್ಣುಮುಚ್ಚಿ ಕುಳಿತವರನ್ನು ಕಂಡು ಆಕೆಗೆ ಸಂಕೋಚವೆನಿಸಿತ್ತು. ಮೆಲ್ಲಗೆ ಕೆಮ್ಮಿದರು. ಸುಮಂತ ಬೆಚ್ಚಿ ಬಿದ್ದು, ಅತ್ತ ನೋಡಿದ. ಆಕೆ ಒಳಗೆ ಹೊರಟು ಹೋದರು. ಅವನಿಗೂ ಸಂಕೋಚವಾಯಿತು. ತಾರಾ.... ತಾರಾ.... ಅಂತ ಎಬ್ಬಿಸಿದ. ಅಷ್ಟರಲ್ಲಿ ಸ್ಮಿತಾ ಮತ್ತೊಮ್ಮೆ ಕರೆದಳು.

"ತಾರಾ..... ನಿನ್ನ ಸ್ನೇಹಿತೆ ಕರೀತಿದಾರೆ....." ಎಚ್ಚರಿಸಿದ.

"ಆಂ" ಎಂದು ಬೆಚ್ಚಿ ಬಿದ್ದು ಎದ್ದು ಅವನನ್ನೇ ನೋಡಿದಳು. ಇಬ್ಬರೂ ಆತಂಕದಿಂದ ಸ್ಮಿತಾ ಮಲಗಿದ್ದೆಡೆಗೆ ಬಂದರು.

"ಹೇಗಿದೀಯೇ.... ಎಷ್ಟು ಹೆದರಿಸಿ ಬಿಟ್ಟೆಯಲ್ಲಾ....."

"ಸುಮಂತ್ ನೀವು ಮದುವೆಗೆ ಹೋಗಲಿಲ್ವಾ....?"

"ನಿಮಗೋಸ್ಕರಾನೇ ಕಾಯ್ತಾ ಇದೀವಿ. ಕಾಫಿ ಕುಡೀತೀರಾ..... ಇನ್ನು ಸ್ವಲ್ಪ ಹೊತ್ತಿಗೆ ಕಾರು ಬರುತ್ತೆ. ಛತ್ರಕ್ಕೆ ಹೋಗೋಣ."

"ನಾನು ಬರುಲ್ಲ. ನೀವಿಬ್ರೂ ಹೋಗಿಬನ್ನಿ....."

"ನಾನೂ ಬರುಲ್ಲ. ನೀವು ಮಾತ್ರ ಹೋಗಿಬನ್ನಿ" ತಾರಾ ನುಡಿದಳು.

"ನಾನೀಗ ಹುಶಾರಾಗಿದೀನಿ.... ನೀವಿಬ್ಬರೂ ಹೋಗಿ.... ನನಗೋಸ್ಕರ ಮಿಸ್ ಮಾಡ್ಕೋಬೇಡಿ....."

"ಇಲ್ಲ ಸ್ಮಿತಾ. ನನಗೆ ಹೋಗೋಕೆ ಸುತರಾಂ ಮನಸ್ಸಿಲ್ಲ. ಎಲ್ರೂ ನನ್ನನ್ನೇ ನೋಡ್ತಾರೆ. ಹೋಗೋದಾದ್ರೆ ಇಬ್ಬರೂ ಹೋಗೋಣ. ಇಲ್ಲದಿದ್ದರೆ ಇಬ್ಬರೂ ಬೇಡ. ಕಡೆಯ ತೀರ್ಮಾನವೆಂಬಂತೆ ಹೇಳಿ, ಕಾಫಿ ತರಲೆಂದು ಒಳಗೆ ಹೋದಳು.

"ಪ್ಲೀಸ್ ಸುಮಂತ್..... ನನಗೋಸ್ಕರ ಯಾರೂ ಮಿಸ್ ಮಾಡಿಕೊಳ್ಳುವುದು ಬೇಡ. ಅವಳನ್ನು ಕರೆದುಕೊಂಡು ಹೋಗಿ. ಅಡಿಗೆಯವರಿರುತ್ತಾರಲ್ಲವಾ?" ತಾರಾ ತಂದ ಕಾಫಿಯನ್ನು ಮೂವರು ಕುಡಿದರು. ಎಲ್ಲರಿಗೂ ಚೇತನ ಬಂದಂತಾಗಿತ್ತು.

"ಹೋಗೋದು ಬಿಡೋದು ಆಮೇಲೆ ತೀರ್ಮಾನಿಸೋಣ. ಮೊದಲು ಸ್ನಾನ ಮಾಡಿ ರೆಡಿಯಾಗೋಣ. ಸತೀಶಂಗೆ ನಿರಾಸೆ ಮಾಡಬಾರದು ಅಲ್ವಾ? ಅವನು ಅಲ್ಲಿ ಹಸೆಮಣೆ ಮೇಲೆ ಕೂತಿದ್ರೂ, ಅವನ ಮನಸ್ಸೆಲ್ಲಾ ಇಲ್ಲೇ ಇರುತ್ತೆ ಅಲ್ವಾ?" ಸುಮಂತನ ಮಾತಿಗೆ ಸ್ಮಿತಾ "ಎಸ್" ಎಂದಳು.

ಸ್ವಲ್ಪ ಸಮಯದ ನಂತರ ಕಾರು ಬಂದು ನಿಂತ ಸದ್ದಾಯಿತು. ಮೂವರು ಸಿದ್ಧರಾಗಿದ್ದರು. ಆದರೆ, ಸ್ಮಿತಾ ತಾನು ಮನೆಯಲ್ಲೇ ಉಳಿದುಕೊಂಡು, ಅವರಿಬ್ಬರನ್ನು ಒತ್ತಾಯ ಮಾಡಿ, ಕಳಿಸಿದಳು.

ಸತೀಶನ ಆತಂಕವನ್ನು ಗಮನಿಸಿ, ಸುಮಂತ ಅವನ ಬಳಿಗೆ ಹೋಗಿ ಮಾತನಾಡಿದ "ಸ್ಮಿತಾ ಹುಶಾರಾಗಿದಾರೆ. ಅಡಿಗೆಯವರು ನೋಡ್ಕೋತಾರೆ" ಅಂತ. ಅವನು ಮಂಟಪದಿಂದ ಕೆಳಗಿಳಿಯುವಷ್ಟರಲ್ಲಿ ಹಿಂದಿನಿಂದ ಬೆನ್ನ ಮೇಲೆ ಒಂದು ಕೈ ಬಿದ್ದಿತ್ತು. ಬೆಚ್ಚಿ ತಿರುಗಿ ನೋಡಿದ. ಮಾವ.... ಹಲ್ಲು ತೋರಿಸಿ ನಕ್ಕ.

"ಅನಂತ ಮಾವ.... ನೀವು ಇಲ್ಲಿ....." ಮತ್ತೆ ಮಾವ ನಕ್ಕ.

"ಸುಮಂತ ನೀನು..... ಯಾವಾಗ ಬಂದೆ?"

"ನಾನು ನೆನ್ನೇನೇ ಬಂದೆ....." ಎನ್ನುತ್ತಾ ತಾರಾಳ ಕಡೆ ನೋಡಿದ.

"ನಿನ್ನ ಜೊತೆ ಬಂದ್ಲಲ್ಲಾ ಈಗ ತಾನೇ.... ಆ ಹುಡುಗಿ ಯಾರು?"

"ಅವಳು ತಾರಾ ಅಂತ.... ನನ್ನ ಜೊತೆ ಆಫೀಸ್ನಲ್ಲಿ ಕೆಲಸ ಮಾಡ್ತಾಳೆ. ಅತ್ತೇನೂ ಬಂದಿದಾರಾ?" ಕೇಳಿದ.

"ಇಲ್ಲ. ವನಜ ಬಂದಿಲ್ಲ. ಸತೀಶ ನಿನ್ನ ಸ್ನೇಹಿತನೋ?"

"ಹೌದು ಮಾವ. ಇವರು ನಿಮಗೆ ಸಂಬಂಧಾನಾ......?"

"ಹುಂ. ನಂಗೂ ಸಂಬಂಧ ಏನಿಲ್ಲ. ಸತೀಶನ ತಂದೇನೂ, ನಾನೂ ಬಾಲ್ಯ ಸ್ನೇಹಿತರು.... ಈಗಲೂ ನಮ್ಮಿಬ್ಬರ ನಡುವೆ ಮಂಡಿ ವ್ಯವಹಾರ ಇದ್ದೇ ಇದೆ....."

ಅಷ್ಟರಲ್ಲಿ ಸುಮಾರು ವಯಸ್ಸಿನ ಒಂದು ಹುಡುಗಿ ಬಂದು, "ಅಪ್ಪಾ..... ಅಮ್ಮ ಕರೀತಿದಾಳೆ ಬರಬೇಕಂತೆ" ಎಂದಾಗ ಸುಮಂತ ತಬ್ಬಿಬ್ಬಾದ. ಮಾವ ತಲೆ ಕೆರೆದು ನಕ್ಕ....

"ಅತ್ತೆ ಬಂದಿಲ್ಲ ಅಂತ ಮಾವ ಹೇಳ್ತಾರೆ. ಈ ಹುಡುಗಿ ಯಾರೋ ಬಂದು ಅಪ್ಪ ಅಂತ ಕರೀತಾಳೆ...." ಏನೋ ರಹಸ್ಯವಿದೆ ಅಂತೆನಿಸಿತ್ತು.

"ಹೂಂ. ಬಂದೇ ನಡೀ....." ಎಂದು ಹೊರಟವನನ್ನು ಸುಮಂತ ನಿಲ್ಲಿಸಿದ.

"ಮಾವ ಈ ಹುಡುಗಿ ಯಾರು? ನಿಮ್ಮ ಮಗಳಾ.....?"

"ಹೂಂ. ಮಗಳೇ.... ನಿಧಾನವಾಗಿ ಮಾತನಾಡ್ತೀನಿ. ಈಗ ಬಂದೆ" ಎನ್ನುತ್ತಾ ಒಳಗೆ ಹೋದವನನ್ನೇ ದುರು ದುರು ನೋಡಿದ ಸುಮಂತ. ಕೆಳಗಿಳಿದು ತಾರಾಳ ಬಳಿಗೆ ಬಂದ. ತಾರಾಳ ಎದುರಿಗೆ ಯಾವ ವಿಷಯವನ್ನೂ ಕೇಳಬಾರದು ಎಂದು ಕೊಂಡು, ಮತ್ತೆ ಅನಂತ ಮಾವನೊಡನೆ ಮಾತನ್ನೇ ಆಡಲಿಲ್ಲ.

ಮದುವೆಯ ಕಲಾಪಗಳು ಮುಗಿದಿದ್ದವು. ಅತಿಥಿಗಳ ಊಟ ಉಪಚಾರಗಳು ಮುಗಿದವು. ಸುಮಂತ, ತಾರಾ ಇಬ್ಬರೂ ಒಟ್ಟಿಗೆ ಇನ್ನೊಂದು ಪಂಕ್ತಿಯ ಊಟಕ್ಕೆ ಕುಳಿತಿದ್ದರು. ಅನಂತ ಅವರಿದ್ದೆಡೆಗೆ ಬಂದ.

"ಏನಮ್ಮಾ.... ನಿನ್ನ ಹೆಸರು?" ಅನಂತ ಮಾವ ಕೇಳಿದ.

"ತಾರಾ.... ನೀವ್ಯಾರೋ ಗೊತ್ತಾಗ್ಲಿಲ್ಲ...."

"ಇವರು ನಮ್ಮ ಸೋದರ ಮಾವ..... ಅನಂತಯ್ಯ ಅಂತ."

ತಾರಾ ನಮಸ್ಕಾರ ಎಂದಳು. "ನಿಂದು ಊಟ ಆದ್ಮೇಲೆ, ಒಂದು ಗಳಿಗೆ ಬಂದು ನೋಡು ನನ್ನನ್ನು" ಅನಂತ ಆಜ್ಞೆ ಮಾಡಿ ಅಲ್ಲಿಂದ ಸರಿದ. ಊಟದ ನಂತರ ಕೆಲವರು ಮನೆಯ ಕಡೆ ಹೊರಟರು.

"ತಾರಾ..... ನೀನು ಮನೆಗೆ ಹೋಗು.... ಅಲ್ಲಿ ಸ್ಮಿತಾ ಒಬ್ಬಳೇ ಇದಾಳೆ" ಎಂದು ಹೇಳಿ ಅವಳನ್ನು ಕಳಿಸಿ, ತಾನು ಮಾವನನ್ನು ಹುಡುಕಿಕೊಂಡು ಬಂದ. ಅವನಿಗೆ ಏನೋ ಅನುಮಾನ ಉಂಟಾಗಿತ್ತು.

"ಇದೆಲ್ಲಾ ಏನು ಮಾವ? ಯಾಕೆ ಹೀಗೆ ಮಾಡಿದ್ರಿ?"

"ಇವತ್ತು ನೆನ್ನೇದಲ್ಲ ಈ ಸಂಬಂಧ..... ವನಜನ್ನ ಮದುವೆಯಾಗೋಕ್ಕಿಂತ ಮುಂಚಿನ ಸಂಬಂಧ....."

"ಹಾಗಾದ್ರೆ ಅತ್ತೇನ ಯಾಕೆ ಮದುವೆಯಾದ್ರೀ.... ಅವರಿಗೆ ಮೋಸ ಮಾಡಿದ ಹಾಗಾಗಲಿಲ್ವಾ?

"ನನಗೆ ಆದದ್ದು ಮೋಸ.... ನಾನೆಷ್ಟೋ ಹೇಳಿದೆ. ನನ್ನ ಮದುವೆಯಾಗಿದೆ. ಇವಳೇ ನಿನ್ನ ಸೊಸೆ ಅಂತ. ಆದರೆ ನಿಮ್ಮ ಅಜ್ಜಿ ಒಪ್ಪಲಿಲ್ಲ. ಬಲವಂತವಾಗಿ ನನ್ನ ಕೊರಳಿಗೆ

ವನಜಳನ್ನು ಕಟ್ಟಿದಳು. ಆದರೆ ನಾನು ನಿನ್ನ ಅತ್ತೆಗೆ ಏನೂ ಮೋಸ ಮಾಡಿಲ್ಲ. ಆದರೆ ಅವಳೇ ನನ್ನಿಂದ ದೂರ ಇದಾಳೆ"

"ಇನ್ನೇನು ಮಾಡ್ತಾರೆ? ಇದನ್ನೆಲ್ಲ ಒಪ್ಪಿಕೊಳ್ಳೋಕೆ ಆಗುತ್ತಾ? ಆದರೆ ಈ ವಿಷಯ ನಮಗ್ಯಾರಿಗೂ ತಿಳಿದೇ ಇರಲಿಲ್ಲ"

"ನಿಮ್ಮತ್ತೆ ಯಾರಿಗೂ ಹೇಳಿಲ್ಲ. ಅದಕ್ಕೇ ತಿಳಿದಿಲ್ಲ"

"ಅಮ್ಮಂಗೆ ತಿಳಿದರೆ ನೊಂದ್ಕೋತಾಳೆ ಅಷ್ಟೇ....."

"ಹೇಳಲೇ ಬೇಡ....."

"ಒಂದಲ್ಲ ಒಂದು ದಿನ ತಿಳಿದೇ ತಿಳಿಯುತ್ತೆ....."

"ತಿಳಿದರೆ ತಿಳೀಲಿ ಬಿಡು..... ಈಗ ಒಂದು ಹುಡುಗೀನ ಕರೆದುಕೊಂಡು ಬಂದು ಸರಸ ಆಡ್ತಿದೀಯಲ್ಲ ನಿಮ್ಮಮ್ಮನಿಗೆ ಗೊತ್ತಾ?"

"ಮಾವಾ......"

"ನಂಗೆಲ್ಲ ಗೊತ್ತು" ಮಾವನ ನಗೆ ಅವನಿಗೆ ಹಿಡಿಸಲಿಲ್ಲ.

"ನಾವಿಬ್ಬರೂ ಒಟ್ಟಿಗೇ ಕೆಲಸ ಮಾಡೋರು. ಸತೀಶನ ಮದುವೆಗೆ ಅಂತ ಬಂದಿದೀವಿ...."

"ಮತ್ತೆ, ನೆನ್ನೆ ದಿನವೇ ಬಂದಿದ್ದೆಯಂತೆ... ಇಷ್ಟೊತ್ತೂ ಎಲ್ಲಿದ್ರಿ?" ಮಾವನ ಮಾತು ಅಸಹ್ಯವನ್ನುಂಟು ಮಾಡಿತ್ತು.

"ಅದನ್ನೆಲ್ಲ ನಾನು ನಿಮಗೆ ಹೇಳಬೇಕಾಗಿಲ್ಲ......"

"ಪರವಾಗಿಲ್ಲ ಹೇಳಬೇಡ..... ಆದರೆ ನಿಮ್ಮಮ್ಮನಿಗೆ ತಿಳಿದರೆ......"

"ತಿಳಿದರೆ ಏನಪ್ಪಾ ಗತಿ ಅಂತ ಅನ್ನೋ ತಪ್ಪನ್ನು ನಾನು ಮಾಡಿಲ್ಲ....."

"ನಾನೂ ತಪ್ಪು ಮಾಡಿರಲಿಲ್ಲ. ಆದರೆ ನಿಮ್ಮ ಅಜ್ಜಿ ತಪ್ಪು ತಪ್ಪು ಅಂತ ಹೊಡೆದುಕೊಂಡು ಅತ್ತಳು. ನಾನು ಇಬ್ಬರು ಹೆಂಡಿರ ಗಂಡನಾದೆ.... ಆದರೆ ನನ್ನ ನೆಮ್ಮದಿ....?"

"ಹೋಗ್ಲೀ ಬಿಡಿ ಮಾವ...... ಅದು ನಿಮ್ಮ ಹಣೇ ಬರಹ..... ನನಗೇನಂತೆ?"

"ಒಂದ್ಮಾತು ಹೇಳ್ತೀನಿ ಕೇಳು.... ನೀನೇನಾದ್ರೂ ಈ ಹುಡುಗೀನ ಪ್ರೀತಿಸೋದಾದ್ರೇ... ಇವಳನ್ನೇ ಮದುವೆಯಾಗು. ಏನೇ ಅಡ್ಡಿ ಬಂದರೂ ಸರಿ.... ಇವಳ ಕೈ ಬಿಡಬೇಡ..... ಇವಳಿಗೆ ಮೋಸ ಮಾಡಬೇಡ. ಇಬ್ಬರು ಹೆಂಡಿರ ಗಂಡನಾಗಬೇಡ....." ಮಾವನನ್ನೇ ವಿಚಿತ್ರವಾಗಿ ನೋಡಿದ. ಮಾವನ ಮಾತಿನಲ್ಲಿ ಏನೋ ನೋವು ಅಡಗಿದೆ ಅನ್ನೋದು ಅರ್ಥವಾಗಿತ್ತು.

"ನನಗೆ ಮೂರು ಜನ ಹೆಣ್ಣು ಮಕ್ಕಳಿದಾರೆ. ಒಬ್ಬರಿಗೂ ಮದುವೆಯಾಗಿಲ್ಲ. ನಿನಗೆ ಒಬ್ಬಳನ್ನು ಕೊಡುವ ಆಸೆಯೇನೋ ಇತ್ತು. ಆದರೆ ನಿನ್ನ ಅತ್ತೆ ಬೇಡವೇ ಬೇಡ ಎಂದು ಬಿಟ್ಟಳು. ನಿನ್ನನ್ನೇ ಕೇಳೋಣ ಅಂತಿದ್ದೆ. ಈಗ ಅದೂ ಬೇಡ ಅಂತ ಅನ್ನಿಸ್ತಿದೆ."

ಮಾವನ ಮಾತಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ಮಾವ ಸುಮಂತನ ಕೈಗಳನ್ನು ಹಿಡಿದುಕೊಂಡ.

"ಈಗ ಹೇಳು. ನಾನು ಮಾಡಿದ್ದು ತಪ್ಪಾ? ನಿನ್ನ ಅತ್ತೆಗೆ ಮಕ್ಕಳಾಗಲಿಲ್ಲ ಅದು ನನ್ನ ತಪ್ಪಲ್ಲ. ಅವಳ ಜೀವನ ಹಾಳಾಯ್ತು ಅಂತ ಎಲ್ಲರೂ ನನ್ನನ್ನೇ ಅಂದರು.... ಆದರೆ ಶಾಂತಂಗೆ ಈ ವಿಚಾರ ತಿಳಿದಿಲ್ಲ ಅಂತಂದ್ರೆ ನನಗೆ ನಂಬಿಕೇನೇ ಬರುಲ್ಲ....."

"ನಂಗೊತ್ತಿಲ್ಲ. ಆದರೆ ನಮಗಂತೂ ತಿಳಿಯದು."

"ನೀವು ಚಿಕ್ಕ ಹುಡುಗ್ರು ಬಿಡಿ....." ಎಂದು ತಾನೇ ಸಂತೈಸಿದ.

"ಸುಮಂತನ ಮನಸ್ಸು ಕೆಟ್ಟು ಹೋಯಿತು. ಮದುವೆಗೆ ಬಂದಿರುವ ಖುಷಿಯೇ ಇಲ್ಲವಾಯ್ತು. ನೆನ್ನೆ ತಾರಾಳ ಹಗರಣ ; ಇವತ್ತು ಮಾವನ ಪ್ರಕರಣ.

"ಅತ್ತೇನ ಮಾತಾಡಿಸೂವಂತೆ ಬಾ....." ವಿಧಿ ಇಲ್ಲದೇ ಸುಮಂತ ಮಾವನೊಡನೆ ಒಳಗಿನ ಕೋಣೆಗೆ ಬಂದ.

"ಜಾನೂ, ನೋಡು..... ಇವನು ನನ್ನ ತಂಗಿಯ ಮಗ.... ಸುಮಂತ ಅಂತ. ಸುಮಂತ ಬೆರಗಾಗಿ ಅವಳನ್ನೇ ನೋಡಿದ. ಎಂಥಾ ಲಕ್ಷಣವಾದ ಹೆಂಗಸು....! ಇವರೆದುರಿಗೆ ಅತ್ತೆ ಏನೇನೂ ಇಲ್ಲ. ಇವರುಗಳು ನನ್ನ ಹೆಣ್ಣು ಮಕ್ಕಳು, ವಿಮಲ, ವಸಂತ, ವಿನುತಾ.... ಹುಡುಗಿಯರು ನೆಲವನ್ನು ನೋಡುತ್ತಾ ನಿಂತಿದ್ದರು. ಮುಜುಗರಗೊಂಡಿದ್ದ ಸುಮಂತ ಹೊರ ಬಂದರೆ ಸಾಕೆಂದು ಚಡಪಡಿಸಿದ.

ಸ್ಮಿತಾ ಅವತ್ತೇ ತನ್ನ ಊರಿಗೆ ಹೋಗಬೇಕೆಂದು ಹಠ ಹಿಡಿದಳು. ತಾರಾಳಿಗಾಗಲೀ, ಸುಮಂತನಿಗಾಗಲೀ ಅಲ್ಲಿ ಉಳಿದುಕೊಳ್ಳುವ ಮನಸ್ಸಿರಲಿಲ್ಲ.

ಈ ರಾತ್ರಿ ಸತೀಶನ ಮೊದಲ ರಾತ್ರಿ.... ನಾವುಗಳು ಇಲ್ಲಿದ್ದು ಮಾಡುವುದೇನು ಅಂದುಕೊಂಡು, ಬಾಡಿಗೆಗೆ ಒಂದು ಟ್ಯಾಕ್ಸಿಯನ್ನು ಗೊತ್ತು ಮಾಡಿದ.

"ಸ್ಮಿತಾಳನ್ನು ಅವಳ ಊರಿಗೆ ತಲುಪಿಸಿ, ನಂತರ ನಾವು ಹೋಗುತ್ತೇವೆ"

"ಬಸಿರಿ ಹುಡುಗಿ, ರಾತ್ರಿಯ ಪ್ರಯಾಣ ಒಳ್ಳೆಯದಲ್ಲ" ಎಂದು ಹಿರಿಯರು ಹೇಳಿದರೂ, ಸ್ಮಿತಾ ಒಪ್ಪಲಿಲ್ಲ.

"ಸುಮಂತ ಜೊತೆಗಿರ್ತಾರೆ. ಇಲ್ಲಿಂದ ನಾಲ್ಕು ಗಂಟೆಗಳ ಪ್ರಯಾಣ ಅಷ್ಟೇ. ಎಂಟು ಒಂಭತ್ತು ಗಂಟೆಯ ಹೊತ್ತಿಗೆ ನಮ್ಮ ಮನೆ ಸೇರಿರುತ್ತೀನಿ"

"ಏನೋಮ್ಮ ನಿಮ್ಮಗಳ ಧೈರ್ಯವೇ ಧೈರ್ಯ. ಈಗಿನ ಕಾಲದೋರು.... ಸುರಕ್ಷಿತವಾಗಿ ಊರನ್ನು ಸೇರಿಕೊಂಡರೆ ಸಾಕು" ಎನ್ನುತ್ತಾ ಸತೀಶನ ತಾಯಿ, ಹುಡುಗಿಯರಿಬ್ಬರಿಗೂ ರೇಶಿಮೆಯ ಸೀರೆಗಳನ್ನು, ಸುಮಂತನಿಗೆ ಸೂಟಿನ ಬಟ್ಟೆಯನ್ನು ಉಡುಗೊರೆಯನ್ನಾಗಿ ಕೊಟ್ಟರು.

"ಏನಯ್ಯಾ ಇದು.... ನನಗೇಕೆ ಸೂಟಿನ ಬಟ್ಟೆ?"

"ಸೂಟು ಹೊಲಿಸಿಕೊಳ್ಳಲಿ ಅಂತ....." ಸತೀಶ ಬೆನ್ನ ಮೇಲೆ ಗುದ್ದಿದ.

"ಆಂಟಿ, ಸೀರೆಯೆಲ್ಲಾ ಯಾಕೆ? ನಮಗೆ ಸಂಕೋಚವಾಗುತ್ತೆ"

"ನೀವು ನಮ್ಮ ಮನೆ ಹೆಣ್ಣು ಮಕ್ಕಳಿದ್ದ ಹಾಗೇ.... ಸದಾ ಸದಾ ಏನು ಬರ್ತೀರಾ? ಇದೊಂದು ಅವಕಾಶ. ನೀನು ಮದುವೆಯಾಗಿ, ತಾಯಿಯಾಗಲಿರುವ ಹೆಣ್ಣು, ಇವಳು ಮದುಮಗಳಾಗಿ ಹಸೆಮಣೆ ಏರಲಿರುವ ಹೆಣ್ಣು" ಅವರ ಆತ್ಮೀಯತೆಯ ಮಾತಿಗೆ ಇಬ್ಬರೂ ಭಾವುಕರಾದರು. ಸಂತೋಷದಿಂಧ ಉಡುಗೊರೆಯನ್ನು ತೆಗೆದುಕೊಂಡು ಆಕೆಗೆ ನಮಸ್ಕರಿಸಿದರು.

"ಗಂಡು ಮಗುವಿನ ತಾಯಿಯಾಗು" ಸ್ಮಿತಾಳಿಗೆ ಆಶೀರ್ವದಿಸಿದರು.

"ಆದಷ್ಟು ಬೇಗ ಮದುವೆಯಾಗಲಮ್ಮ..." ತಾರಾಳಿಗೆ ಆಶೀರ್ವದಿಸಿದರು. ತಾರಾ ಕೆಂಪಾಗಿದ್ದಳು. ಸತೀಶ ಸುಮಂತನ ಮೊಣಕೈ ತಿವಿದ. ಸತೀಶನ ಪತ್ನಿ ಅಲ್ಲೇ ಕುಳಿತು ಎಲ್ಲವನ್ನು ಮುಗುಳ್ನಗುತ್ತಾ ವೀಕ್ಷಿಸುತ್ತಿದ್ದಳು. ಸತೀಶ ಹೆಂಡತಿಯ ಕಿವಿಯಲ್ಲಿ ಏನೋ ಉಸುರಿದ. ಅವಳು ನಾಚಿಕೆಯಿಂದ ತಲೆ ತಗ್ಗಿಸಿದಳು. ಸುಮಂತ ಗಮನಿಸಿದ್ದ.

"ಸತೀಶ, ಅವನ ಹೆಂಡತಿಯನ್ನು ಬಹಳ ಖುಷಿಯಾಗಿಟ್ಟುಕೊಂಡಿರುತ್ತಾನೆ.,..."

ಎಂದೆನಿಸಿತ್ತು.

"ಕ್ಷೇಮವಾಗಿ ಊರನ್ನು ತಲುಪಿದ್ದಂತೆಯೇ ಫೋನು ಮಾಡಿ" ಎಂದು ಹೇಳಿ ತಮ್ಮ ಮನೆಯ ಫೋನು ನಂಬರನ್ನು ಕೊಟ್ಟ ಸತೀಷ. ಟ್ಯಾಕ್ಸಿ ಹೊರಟಿತು. ಟಾ ಟಾ ಮಾಡಿದರು.

* * *

ಬೆಳಗಿನ ಝಾವದ ಹೊತ್ತಿಗೆ, ತಾರಾಳನ್ನು ರಾಧಮ್ಮನ ಮನೆ ತಲುಪಿಸಿ, ಸುಮಂತ ತನ್ನ ಮನೆಗೆ ಬಂದ. ಸ್ಮಿತಾಳನ್ನು ಸುಕ್ಷೇಮವಾಗಿ ತಲುಪಿಸಿದ ನೆಮ್ಮದಿ ಇಬ್ಬರಲ್ಲೂ ಇತ್ತು.

ಹೆಣ್ಣು ಮಕ್ಕಳ ರಕ್ಷಣೆ, ಬಹಳ ಕಷ್ಟ ಎನ್ನುವ ಅನುಭವ ಸುಮಂತನಿಗಾಗಿತ್ತು.

"ಸಧ್ಯ ಸ್ಮಿತಾಳನ್ನು ಅವಳನ್ನು ಅವಳ ಮನೆ ತಲುಪಿಸಿದ್ದು ನಿರಾಳವಾಯ್ತು. ನಾನು ಎಷ್ಟು ಹೆದರಿ ಬಿಟ್ಟಿದ್ದೆ ಗೊತ್ತಾ?"

"ಅವಳೊಬ್ಬಳೇ ಅಲ್ಲ.... ನಿನ್ನನ್ನು ನಿನ್ನ ಮನೇಗೆ ಸರಿಯಾಗಿ ಸೇರಿಸಿ ಬಿಟ್ಟರೆ, ಅಲ್ಲಿಗೆ ನನ್ನ ಜವಾಬ್ದಾರಿ ಮುಗೀತು."

"ಏನಂದ್ರೀ....? ನನ್ನ ಜವಾಬ್ದಾರಿ ನಿಮಗೆ ಅಷ್ಟು ಭಾರವಾಗ್ತಿದೆಯಾ?" ಎನ್ನುತ್ತಾ ಅವನ ಭುಜಕ್ಕೊರಗಿದಳು.

"ಹಾಗಲ್ಲ. ನೆನ್ನೆಯ ದಿನದಿಂದ, ಏನೋ ಆತಂಕ, ಏನೋ ಗಾಬರಿ, ಸಮಯ ಅದರಲ್ಲೇ ಕಳೆದು ಹೋಯ್ತು. ಮದುವೆಗೆ ಬಂದಿದ್ದೆವು ಅನ್ನೋ ಖುಷಿಯೇ ಇರಲಿಲ್ಲ"

"ಸಾರಿ ಸುಮಂತ್..... ತಪ್ಪೆಲ್ಲಾ ನನ್ನದೇ..... ನಾನೇ ಸ್ಮಿತಾಳನ್ನು ಆಚೆ ತಿರುಗಾಡಲೆಂದು ಕರೆದುಕೊಂಡು ಹೋಗಿದ್ದು.

"ಅದಕ್ಕೇ ಹೇಳಿದ್ದು, ನಿನ್ನನ್ನ ನಿನ್ನ ಮನೆಗೆ ತಲುಪಿಸಿ ಬಿಟ್ಟ ಮೇಲೆ ನಾನು ಹಾಯಾಗಿ ನಿದ್ದೆ ಮಾಡಬಹುದು." ಅವನ ಭುಜಕ್ಕೆ ಒರಗಿದ್ದ ತಾರಾ ಹಾಗೇ ನಿದ್ದೆ ಹೋಗಿದ್ದಳು. ಸುಮಂತ ಅವಳ ಭುಜದ ಸುತ್ತ ಕೈ ಹಾಕಿ, ತನಗೆ ಒರಗಿಸಿಕೊಂಡಿದ್ದ. ರಾತ್ರಿಯ ಪ್ರಯಾಣ, ಅದೂ ಟ್ಯಾಕ್ಸಿಯಲ್ಲಿ ಒಬ್ಬ ಹುಡುಗಿಯ ಜೊತೆ ಬರುವುದು ತರವಲ್ಲ ಎಂದು ಮನವರಿಕೆಯಾಗಿತ್ತು. ಇನ್ನೆಂದೂ ಇಂತಹ ಅವಿವೇಕದ ಕೆಲಸ ಮಾಡಬಾರದೆಂದು ನಿಶ್ಚಯಿಸಿದ್ದ. ತಾರಾ ನಿರಾತಂಕವಾಗಿ ನಿದ್ರಿಸಿದ್ದಳು. ಆದರೆ ತಾನು ಗಳಿಗೆ ಗಳಿಗೇಗೂ ಗಡಿಯಾರದ ಮುಳ್ಳನ್ನು ಗಮನಿಸುತ್ತಾ ದಾರಿಯನ್ನು ಸವೆಸಿದ್ದ.

ಮುಂಬಾಗಿಲನ್ನು ತೆಗೆದ ರಾಮಸ್ವಾಮಿ ಮಗನ ಕಡೆ ಪ್ರಶ್ನಾರ್ಥಕವಾಗಿ ನೋಡಿದ್ದರು. "ಮದುವೆ ಚೆನ್ನಾಗಿ ಆಯ್ತಾ? ರಾತ್ರಿಯೇ ಹೊರಟು ಬಂದ್ಯಾ?"

"ಹೂಂ" ಎಂದಷ್ಟೇ ಹೇಳಿ ಬಟ್ಟೆ ಬದಲಾಯಿಸಿ ಮಲಗಿದ್ದ.

"ಸೋಮು.... ಸೋಮು.... ಏಳಪ್ಪಾ" ಅಂತ ತಾಯಿ ಎಬ್ಬಿಸಿದಾಗ, ಗೊಣಗಿದ್ದ.

"ರಜಾ ಹಾಕಿದೀನಿ...." ಎಂದು ಹೇಳಿ ಮಗ್ಗುಲು ಬದಲಾಯಿಸಿದ.

"ಮಲಗಿರಲಿ ಬಿಡೇ..... ಪಾಪ ರಾತ್ರಿ ಪ್ರಯಾಣ ಮಾಡಿ ಬಂದಿದಾನೆ.... ನಾನು ವಾಕಿಂಗ್ ಹೋಗಿ ಬರ್ತೀನಿ. ಮುಂಬಾಗಿಲು ಹಾಕ್ಕೋ....."

ಸುಮಂತ ಮತ್ತೆ ಎದ್ದಾಗ ಒಂಭತ್ತು ಗಂಟೆಯಾಗಿತ್ತು. ಹೊರ ಬಂದವನು ತಾಯಿಯ ಮುಖವನ್ನು ನೋಡಿದ್ದ. ಆಗ ಅವನಿಗೆ ಅನಂತ ಮಾವನ ನೆನಪಾಗಿತ್ತು.

"ಯಾಕೆ ಎದ್ದೆಯೋ? ರಜಾ ಹಾಕಿದೀನಿ ಅಂತ ಅಂದ್ಯಲ್ಲಾ"

"ಅಮ್ಮಾ... ಅಪ್ಪ ವಾಕಿಂಗ್‌ನಿಂದ ಬಂದಾಯ್ತಾ?"

"ಹುಂ ಬಂದಾಯ್ತು. ಸ್ನಾನ ಮಾಡ್ತಿದಾರೆ... ಕಾಫಿ ಕೊಡ್ಲಾ?"

"ಹುಂ" ಎನ್ನುತ್ತಾ ಅವತ್ತಿನ ದಿನಪತ್ರಿಕೆಯನ್ನು ಹಿಡಿದು ಕುಳಿತ. ತಾಯಿ ಕೊಟ್ಟ ಕಾಫಿಯನ್ನು ಕುಡಿದ. ಅನಂತ ಮಾವನ ಬಗ್ಗೆ ತಾಯಿಯನ್ನು ಕೇಳುವ ಮನಸ್ಸಾಗಿತ್ತು. ಆದರೆ ಅದಕ್ಕೆ ಮುಂಚೆ ತಂದೆಯ ಬಳಿ ಮಾತನಾಡಬೇಕು ಎಂದುಕೊಂಡ.

ತಂದೆ ಸ್ನಾನ ಮುಗಿಸಿ ಬರುವುದನ್ನೇ ಕಾದಿದ್ದು, "ಅಪ್ಪಾ, ನಾನು ಮಾತನಾಡ ಬೇಕಾಗಿತ್ತು. ನನ್ನ ಜೊತೆ ಹೊರಗೆ ಬರ್ತೀರಾ?" ತಾಯಿಗೆ ಕೇಳಿಸದಂತೆ ಕೇಳಿದ್ದ.

ರಾಮಸ್ವಾಮಿ ಅಡಿಗೆ ಮನೆಯ ಕಡೆ ನೋಡುತ್ತಾ 'ಹುಂ' ಎಂದ. ಅವನೂ ಸ್ನಾನ ಮುಗಿಸಿ ಹೊರಟ.

"ರಜಾ ಹಾಕಿದೀನಿ ಅಂದ್ಯಲ್ಲೋ, ಆಫೀಸಿಗೆ ಹೊರಟ್ಯಾ? ತಿಂಡಿ ಕೊಡ್ಲಾ?"

"ಸ್ವಲ್ಪ ಬೇರೆ ಕೆಲಸ ಇದೆ. ನಾನೂ ಅಪ್ಪ ಇಬ್ಬರೂ ಹೊರಗೆ ಹೋಗ್ತಾ ಇದೀವಿ..... ತಿಂಡಿ ತಿಂದೇ ಹೊರಡ್ತೀವಿ" ಸಿಡುಕಿದ.

"ಕೋಪ ಯಾಕೆ ಮಾಡ್ಕೋತೀಯೋ.....?"

"ಮತ್ತೇನಮ್ಮ.... ಪ್ರತಿಯೊಂದು ವಿಷಯಾನೂ ನಿನಗೆ ಹೇಳುಕ್ಕಾಗುತ್ತಾ?"

"ಬೇಡಪ್ಪಾ ಬೇಡ. ಏನೂ ಹೇಳಬೇಡ. ನಿನಗೆ ಎಷ್ಟೋ ಕೆಲಸಗಳಿರುತ್ತವೆ. ಅದನ್ನೆಲ್ಲ ನನಗ್ಯಾಕೆ ಹೇಳಬೇಕು......? ನಾನ್ಯಾಕೆ ಕೇಳಬೇಕು....?"

"ಹಾಗಲ್ಲ ಶಾಂತಾ..... ರಾತ್ರಿಯೆಲ್ಲಾ ನಿದ್ದೆಗೆಟ್ಟು ಪ್ರಯಾಣ ಮಾಡಿ ಬಂದಿದಾನೆ.... ಅವನೇನೋ ಆಡಿದ್ರೆ, ನೀನು ಏನೋ ಆಡ್ತಿಯಲ್ಲಾ....."

"ಸರಿ. ನಿಮ್ಮಿಬ್ಬರಿಗೂ ಹೊತ್ತಾಗುತ್ತೆ. ಬೇಗ ತಿಂಡಿ ತಿನ್ನಿ ಬನ್ನಿ" ಶಾಂತ ಬಿಸಿ ಬಿಸಿ ಉಪ್ಪಿಟ್ಟನ್ನು ತಂದಿಟ್ಟಳು. ಇಬ್ಬರೂ ಮಾತಿಲ್ಲದೇ ತಿಂದರು. ಬೈಕ್ ಹತ್ತುವ ಮುಂಚೆ, ರಾಮಸ್ವಾಮಿ ಮಗನಿಗೆ ಹೇಳಿದ.

"ನಿಮ್ಮಮ್ಮನ ಮಾತಿಗೆ ತಲೆ ಕೆಡಿಸ್ಕೋ ಬೇಡ ಸೋಮು... ಏನೇನೋ ಆಡಿ ಬಿಡ್ತಾಳೆ.... ತಾನೇನೇನು ಆಡ್ತೀನಿ ಅಂತ ಅವಳಿಗೆ ಗೊತ್ತಿದೆಯೋ ಇಲ್ಲವೋ?"

"ಅವಳಿಗೆ ಗೊತ್ತಿಲ್ಲದ ಎಷ್ಟೋ ವಿಷಯಗಳಿವೆ" ಎಂದುಕೊಂಡು ಬೈಕನ್ನು ಓಡಿಸಿದ. ಪಬ್ಲಿಕ್ ಲೈಬ್ರರಿಯ ಮುಂದಿದ್ದ ಪಾರ್ಕಿನ ಬಳಿ ಬೈಕನ್ನು ನಿಲ್ಲಿಸಿದ. ಇಬ್ಬರೂ ಇಳಿದರು. ಅಲ್ಲಿಯೇ ಇದ್ದ ಕಲ್ಲು ಬೆಂಚಿನ ಮೇಲೆ ಕುಳಿತರು. ಅನಂತನ ಬಗ್ಗೆ ಮಗ ಹೇಳಿದುದನ್ನು ಕೇಳಿ ರಾಮಸ್ವಾಮಿ ದಂಗಾದ. ಮಾತೇ ನಿಂತು ಹೋಯಿತೇನೋ ಎನ್ನುವಷ್ಟು ಮೌನವಾದ. ಇಲ್ಲಿ, ಅನಂತನದು ತಪ್ಪೋ ಸರಿಯೋ ಎಂದು ಅರ್ಥವಾಗದಷ್ಟು ಗಲಿಬಿಲಿಗೊಂಡಿದ್ದ.

ಮಾತು ಮುಗಿಸಿ ಸುಮಂತ ತಂದೆಯ ಕಡೆ ನೋಡಿದ. "ನೀವೇ ಹೇಳಿ ಅಪ್ಪಾ.... ಅನಂತ ಮಾವನದು ತಪ್ಪಲ್ವಾ? ವನಜ ಅತ್ತೆಗೆ ಅನ್ಯಾಯವಾಗಲಿಲ್ವಾ? "

"ನಂಗೇನು ಹೇಳಬೇಕು ಅಂತ ಗೊತ್ತಾಗ್ತಿಲ್ಲ ಸೋಮು. ಇಷ್ಟು ವರ್ಷಗಳಾದ್ರೂ ನನಗೆ ಈ ವಿಷಯ ತಿಳಿದೇ ಇರಲಿಲ್ಲ. ನಿಮ್ಮ ಮಾವನ ಮೇಲೆ ಯಾವ ಅನುಮಾನ ಸಹ ಇರಲಿಲ್ಲ."

"ಅಮ್ಮಂಗೂ ಗೊತ್ತಿಲ್ಲ ಅಂತೀರಾ?"

"ಒಂದಲ್ಲ ಒಂದು ದಿನ ನಿಮ್ಮಮ್ಮ ಬಾಯಿ ಬಿಟ್ಟಿರುತ್ತಿದ್ದಳು. ಅವಳಿಗೂ ಗೊತ್ತಿಲ್ಲವೇನೋ ಅಂತ ಹೇಳಿದರೂ, ಬಹುಶಃ ಅವಳಿಗೆ ತಿಳಿದಿರಲೇ ಬೇಕು. ಬೇಕೂಂತ ನನಗೆ ತಿಳಿಸಿಲ್ಲ... ಅದಕ್ಕೆ ಕಾರಣವೂ ಗೊತ್ತು" ಎಂದು ತನಗೆ ತಾನೇ ಹೇಳಿಕೊಂಡು ಸುಮ್ಮನಾದ.

"ನಿಮಗೆ ತಿಳಿಸುವವರೆಗೂ, ನನಗೆ ನೆಮ್ಮದಿ ಇರಲಿಲ್ಲ. ಈಗ ಹೃದಯ

ಹಗುರವಾಯಿತು. ಆದರೆ, ನನಗೆ ಉಪದೇಶ ಮಾಡಿದ್ದನ್ನು ನೋಡಿದರೆ, ಅವರ ಮಾತಿನಲ್ಲಿ ತತ್ವವಿದೆ ಅಂತನ್ನಿಸಿತು... ಹೌದಲ್ವಾ ಅಪ್ಪಾ.....?"

"ಹೌದು ಸೋಮು. ಅನಂತ ಹೇಳಿದ್ದು ಸರಿ. ನೀನು ತಾರಾಳನ್ನು ನಿಜವಾಗಿಯೂ ಪ್ರೀತಿಸುತ್ತಿರೋದೇ ಆದ್ರೆ, ಅವಳನ್ನು ಬಿಟ್ಟು ಬೇರೆ ಯಾರನ್ನು ಮದುವೆಯಾಗಬಾರದು. ನಿಮ್ಮ ಅಮ್ಮನೂ ಒಪ್ಪುವಂತಹ ಯಾವುದಾದರೂ ಉಪಾಯ ಹುಡುಕೋಣ."

"ಹೌದಪ್ಪಾ... ಬೇರೆ ಯಾವ ಉಪಾಯ ಇಲ್ಲದಿದ್ದರೂ, ನಾವಿಬ್ಬರೂ ರಿಜಿಸ್ಟರ್ಡ್ ಮದುವೇನಾದ್ರೂ ಮಾಡಿಕೊಳ್ತೀವಿ. ಇದನ್ನಂತೂ ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ."

"ಕಡೆಗೆ ಇರೋ ಉಪಾಯ ಇದೊಂದೇ..... ಆಮೇಲೆ ನಿಮ್ಮಮ್ಮ ಒಂದಲ್ಲ ಒಂದು ದಿನ ಒಪ್ಪಿಯೇ ಒಪ್ತಾಳೆ" ತಂದೆಯ ಬಳಿ ಮಾತನಾಡಿದ ಮೇಲೆ ಸುಮಂತ ನಿರಾಳನಾದ. "ನಡೀರಿ ಅಪ್ಪಾ ಮನೆಗೆ ಹೋಗೋಣ.... ಅಮ್ಮಾ ಕಾಯ್ತಾ ಇರ್ತಾಳೆ" ಬೈಕ್‌ನ ಸ್ಟಾರ್ಟ್ ಮಾಡಿದ.

"ನಡಿಯಪ್ಪಾ...." ಎನ್ನುತ್ತಾ ಬೈಕ್ ಹತ್ತಿದರು. ಬೈಕ್ ಮನೆಯ ಕಡೆಗೆ ಓಡಿತು.

ಆ ದಿನ ಕಳೆಯಿತು. ಯಾರೂ ಒಬ್ಬರಿಗೊಬ್ಬರು ಹೆಚ್ಚಿಗೆ ಮಾತಾಡಿರಲಿಲ್ಲ. "ಇವತ್ತೇನಾಗಿದೆ ಇವರಿಗೆ? ಮಾತಿಲ್ಲದೇ ಊಟ ಮಾಡುತ್ತಿದಾರಲ್ಲ" ಎಂದು ಕೊಂಡರೂ ಗಂಡನನ್ನು ಕೇಳಲಿಲ್ಲ ಶಾಂತ. ಏನಾದ್ರೂ ಆಡಿದರೆ, ವೃದ್ಧಾಶ್ರಮಕ್ಕೆ ಹೋಗ್ತೀನಿ ಅಂತ ಹೆದರಿಸೋದು ಬೇರೆ.... ಏಕೋ ಏನೋ ಯಾವುದೂ ಹಿತವೆನಿಸಲಿಲ್ಲ.

ಆಚಿ ಕಳಿಸಿದ್ದ ಹುಡುಗಿಯ ಫೋಟೋ ನೋಡಿದ್ದಳು. ಪರವಾಗಿಲ್ಲ ಹುಡುಗಿ ಸುಮಾರಾಗಿದ್ದಾಳೆ ಅಂತೆನ್ನಿಸಿದ್ದರೂ, ಇವಳಿಗಿಂತ ಚೆನ್ನಾಗಿರುವ ಹುಡುಗಿಯನ್ನು ನೋಡಬೇಕು ಎಂದೆನ್ನಿಸಿತ್ತು.

ಒಂದೆರಡು ದಿನಗಳ ನಂತರ, ವನಜಳಿಂದ ಪತ್ರ ಬಂದಿತ್ತು. ಹುಡುಗಿಯ ಫೋಟೋ ಹಾಗೂ ಜಾತಕದ ಪ್ರತಿಯನ್ನು ಕಳಿಸಿದ್ದಳು. ಈ ಹುಡುಗಿಯನ್ನು ಈ ಮುಂಚೆ ಎಲ್ಲೋ ನೋಡಿದೀನಿ ಎಂಬ ಭಾವನೆ ಮೂಡಿತು. ಸ್ವಲ್ಪ ಹೊತ್ತಿನ ನಂತರ ನೆನಪಿಗೆ ಬಂತು. ಆಚಿ ಸಹ, ಇದೇ ಹುಡುಗಿಯ ಫೋಟೋ ಜಾತಕ ಕಳಿಸಿರುವುದು. ನಗು ಬಂತು. ಈ ಹುಡುಗಿಯನ್ನೂ ಬಿಟ್ಟರೆ ಬೇರೆ ಯಾರೂ ಇಲ್ವಾ ಈ ಇಬ್ಬರಿಗೂ.

ಸುಮಂತ ಮನೆಗೆ ಇನ್ನು ವಾಪಸ್ಸಾಗಿರಲಿಲ್ಲ. ಗಂಡ ಎದ್ದು ವಾಕಿಂಗ್‌ಗೆ ಹೋಗುವ ಮೊದಲು ಮಾತನಾಡಿ ಬಿಡಬೇಕೆಂದುಕೊಂಡು ರಾಮಸ್ವಾಮಿ ಮಲಗಿದ್ದ ಕಡೆಗೆ ಬಂದಳು.

"ಎದ್ದು ವಾಕಿಂಗ್ ಹೋಗುಲ್ವೇ......?" ಅವನು ಇತ್ತ ತಿರುಗಿ ಆಶ್ಚರ್ಯದಿಂದ ಅವಳನ್ನೇ ನೋಡಿದ.

"ದಿನಾ, ವಾಕಿಂಗ್ ಹೊರಟು ಹೋಗ್ತೀರಿ" ಅಂತ ದಬಾಯಿಸುತ್ತಿದ್ದಳು. ಇವತ್ತು ತಾನೇ ಕಳಿಸುತ್ತಿದಾಳಲ್ಲ.... ಎಂದುಕೊಂಡು...."ಹೂಂ. ಹೋದರಾಯ್ತು...... ದಿನಾ ಅದೇ ರಸ್ತೆ ; ಅದೇ ಜನ.... ಅದೂ ಬೇಜಾರಾಗಿ ಹೋಯ್ತು" ಅಂತಂದ.

"ಒಂದು ತಮಾಷೆ ಗೊತ್ತಾ ನಿಮಗೆ.... ವನಜಾ, ಆಚಿ ಇಬ್ಬರೂ ಒಂಗೇ ಹುಡುಗಿಯ ಫೋಟೋ ಜಾತಕ ಕಳಿಸಿದ್ದಾರೆ...."

"ಅದರಲ್ಲೇನು ತಮಾಷೆ?"

"ಬೇರೆ ಯಾರೂ ಇರಲಿಲ್ವಾ? ಅಂತ....."

"ಏನೋ ಕಾಕತಾಳೀಯ ಆಗಿರಬಹುದು... ಹುಡುಗಿ ಹೇಗಿದಾಳೆ?"

"ಏನೋ ಇದಾಳೆ ಸುಮಾರಾಗಿ.... ನನಗೆ ಇಷ್ಟವಾಗಲಿಲ್ಲ"

"ಸುಮಂತನಿಗೆ ತೋರಿಸಿದ್ಯಾ?"

"ಇಲ್ಲ.... ಬೇರೆ ಯಾವುದಾದರನ್ನು ನೋಡೋಣ. ಹುಡುಗಿಯ ಬಗ್ಗೆ ವಿವರಗಳೇ ಇಲ್ಲ, ಅಲ್ಲದೇ ಜಾತಕ ಸಹ ಹೊಂದುತ್ತೋ ಇಲ್ಲವೋ...?"

"ಹುಡುಗಿ ಇಷ್ಟವಾದರೆ, ಜಾತಕವನ್ನು ನೋಡಿಸೋದೇ ಬೇಡ."

"ಜಾತಕ ಹೊಂದದಿದ್ದರೆ?...... ಇಬ್ಬರೂ ಅನ್ಯೋನ್ಯವಾಗಿರಬೇಡವೇ?"

"ಅನ್ಯೋನ್ಯತೆ ಜಾತಕದಿಂದ ಕೂಡಿ ಬರುಲ್ಲ ಶಾಂತಾ... ಮನಸ್ಸಿನಿಂದ ಬರಬೇಕು...... ನನ್ನ ನಿನ್ನ ಜಾತಕವನ್ನು ನೋಡಿದವರು ಇಪ್ಪತ್ತಾರು ಗುಣಗಳು ಕೂಡಿ ಬರುತ್ತವೆ ಅಂತ ಅಂದಿದ್ದರಂತೆ...."

"ನಿಮಗ್ಯಾರು ಹೇಳಿದರು...."

"ನೀನೇ ಹೇಳಿದ್ದು..... ನೀನಂತೂ ಯಾವ ವಿಷಯವನ್ನು ನನ್ನಿಂದ ಮುಚ್ಚಿಟ್ಟಿಲ್ಲ ಎಲ್ಲಾ ಹೇಳಿದೀನಿ ಅಂತ ಸದಾ ಹೇಳ್ತಿಯಾ...."

"ಹೌದು.... ನಾನು ನಿಮ್ಮ ಹಾಗೆ ಅಲ್ಲ. ಎಲ್ಲಾ ಹೇಳಿರ್ತೀನಿ" ಹೆಮ್ಮೆಯಿಂದ ಮುಖವನ್ನು ಉಬ್ಬಿಸಿದಳು. ಮಲಗಿದ್ದವನು ಎದ್ದು ಕೂತ.

"ಕಾಫಿ ಕೊಡು. ಕುಡಿದು ವಾಕಿಂಗ್ ಹೋಗಿ ಬರ್ತೀನಿ"

"ಹಾಗೇ ಬರುವಾಗ, ಶಾಸ್ತ್ರಿಗಳ ಮನೆಗೆ ಹೋಗಿ ಬನ್ನಿ. ಅವರ ಹತ್ತಿರ ಹತ್ತಾರು ಹುಡುಗಿಯರ ಫೋಟೋ ಜಾತಕ, ವಿವರಗಳು ಇರುತ್ತವೆ."

"ಹುಂ" ಎನ್ನುತ್ತಾ ಎದ್ದ. ಬರುವಾಗ ಶಾಸ್ತ್ರಿಗಳು ಕೊಟ್ಟ ಒಂದೆರಡು ಫೋಟೋಗಳನ್ನು ಹಿಡಿದು ಬಂದ 'ತಗೋ' ಎಂದು ಹೆಂಡತಿಯ ಕೈಗಿತ್ತ. ಗಂಡನೆದುರಿಗೆ ತನ್ನ ಕುತೂಹಲವನ್ನು ತೋರಬಾರದು ಎಂದುಕೊಂಡು, ಅದನ್ನು ತಕ್ಷಣಕ್ಕೆ ನೋಡಲಿಲ್ಲ.

"ಹುಡುಗೀರು ಹೇಗಿದಾರೆ ಅಂತ ನೋಡೋಲ್ವೇನೆ....."

"ನೋಡಿದ್ರಾಯ್ತು ನಿಧಾನಕ್ಕೆ....." ಎಂದಳು ಉದಾಸೀನದಿಂದ.

"ಏನಾದ್ರೂ ಮಾಡ್ಕೋ....." ಎಂದ ಗೊಣಗಿ..... ಗಂಡ ಅತ್ತಕಡೆ ಮರೆಯಾದ ಕೂಡಲೇ, ಕವರನ್ನು ಬಿಚ್ಚಿ, ಫೋಟೋಗಳನ್ನು ನೋಡಿದಳು ಮುಖ ಸಪ್ಪಗಾಯಿತು. ಇವರುಗಳಿಗಿಂತ, ಆ ಹುಡುಗಿಯೇ ಎಷ್ಟೋ ವಾಸಿ ಎಂಬ ನಿರ್ಧಾರಕ್ಕೆ ಬಂದಳು.

"ಇವರಾದ್ರೂ ನೋಡಿ ತರಬೇಡವೆ? ಸುಮಂತ ಈ ಹುಡುಗಿಯರನ್ನು ಖಂಡಿತಾ ಒಪ್ಪೊಲ್ಲ....." ಎಂದು ತನ್ನಲ್ಲೇ ಹೇಳಿಕೊಂಡು, ಹಾಗೇ ಮುಚ್ಚಿಟ್ಟಳು.

"ಸ್ನೇಹಿತನ ಮದುವೆ ಮುಗಿಸಿ ಬಂದಾಗಿನಿಂದ, ನಮ್ಮ ಸುಮಂತ ಏನೋ ಬದಲಾಗಿದಾನೆ ಅಂತ ಅನ್ನಿಸ್ತಿದೆ..... ನನಗೇಕೋ ಭಯವಾಗುತ್ತೆ"

"ಭಯ ಯಾಕೆ......?"

"ಸ್ನೇಹಿತರ ಸಹವಾಸ.... ಮನಸ್ಸಿಗೆ ಏನೇನು ತುಂಬಿರುತ್ತಾರೋ?"

"ಯಾರ್ಯಾರ ಮಾತಿಗೋ ಮರುಳಾಗುಲ್ಲ ನಮ್ಮ ಸೋಮು. ನಮ್ಮ ಮಕ್ಕಳ ಮೇಲೆ ನಮಗೆ ನಂಬಿಕೆ ಇರಬೇಕು. ಅದು ಮುಖ್ಯ."

"ನೋಡಿ ಇಷ್ಟು ಹೊತ್ತಾದ್ರೂ ಇನ್ನು ಮನೆಗೆ ಬಂದಿಲ್ಲ. ಎಲ್ಲಿ ಯಾರ ಜೊತೆ ಓಡಾಡ್ತಿದಾನೋ ಅಂತನ್ನಿಸ್ತಿದೆ."

"ಸುಮಂತ ಅಂಥೋನಲ್ಲ ; ಒಂದು ವೇಳೆ ಹಾಗೇನಾದ್ರೂ ಇದ್ದರೆ ನಮಗೆ ಹೇಳದೆ ಇರ್ತಾನಾ?" ರಾಮಸ್ವಾಮಿ ತಲೆ ಎತ್ತದೇ ಉತ್ತರ ಕೊಟ್ಟಿದ್ದ.

* * *

- - 24 - -

ಹನಿಮೂನ್ ಮುಗಿಸಿಕೊಂಡು, ಆಫೀಸಿಗೆ ಮತ್ತೆ ಹಾಜರಾಗಿದ್ದ ಸತೀಶ ತನ್ನ ಹೊಸ ಹೊಸ ಅನುಭವಗಳನ್ನು ಯಾವ ಸಂಕೋಚವೂ ಇಲ್ಲದೆ, ತನ್ನ ಸ್ನೇಹಿತರಿಗೆ ಹೇಳಿಕೊಳ್ಳುತ್ತಿದ್ದ. ಎಂಥಾ ಜಾಲಿ ಮನುಷ್ಯ.... ಎಂದು ಎಲ್ಲರೂ ಹೇಳುವವರೇ. ಮದುವೆಯ ಕೆಲವು ಫೋಟೋಗಳನ್ನು ತಂದು ತೋರಿಸಿದ್ದ. ಅದರಲ್ಲಿ ನವದಂಪತಿಗಳೊಡನೆ, ಈ ಸಹೋದ್ಯೋಗಿಗಳೂ ನಿಂತಿರುವ ಫೋಟೋ ಇತ್ತು. ಅದರಲ್ಲಿ ಸತೀಶನ ಪಕ್ಕ ಸುಮಂತ ನಿಂತಿದ್ದ. ವಧುವಿನ ಪಕ್ಕ ತಾರಾ ನಿಂತಿದ್ದಳು. ಅವಳ ಪಕ್ಕ ಸ್ಮಿತಾ, ಸುಮಂತನ ಪಕ್ಕ ಇನ್ನೊಬ್ಬ ಸಹೋದ್ಯೋಗಿ. ಸುಮಂತನಿಗೆ ಆ ಫೋಟೋ ಹಿಡಿಸಿತು.

"ಇದನ್ನು ನಾನು ಇಟ್ಟುಕೊಳ್ತೀನಿ....." ಎಂದು ತೆಗೆದಿಟ್ಟುಕೊಂಡ. ಅದನ್ನು ತನ್ನ ಟೇಬಲ್ಲಿನ ಮೇಲಿದ್ದ ಪುಸ್ತಕಗಳ ನಡುವೆ ತೂರಿಸಿ ಇಟ್ಟ.

"ಇವನು ನಿನ್ನ ಸ್ನೇಹಿತ ಸತೀಶ ಅಲ್ವಾ? ಅವನ ಮದುವೆಯ ಫೋಟೋ" ಎನ್ನುತ್ತಾ ತಾಯಿ ನೋಡುತ್ತಾ ಕೇಳಿದಾಗ, ಸುಮಂತನ ಎದೆಯ ಬಡಿತ ಜೋರಾಗಿತ್ತು. ಇವತ್ತೇ ಎಲ್ಲವನ್ನು ಹೇಳುವ ಪರಿಸ್ಥಿತಿ ಒದಗಿದರೆ ಹೇಗೆ ಎಂದು ಗೊಂದಲಗೊಂಡು, ವಿನಾಕಾರಣ ತಾಯಿಯ ಮೇಲೆ ರೇಗಿದ.

"ನೀನ್ಯಾಕೆ ನನ್ನ ಪುಸ್ತಕಗಳನ್ನೆಲ್ಲ ಅದಲು ಬದಲು ಮಾಡ್ತೀಯಾ?"

"ನಾನೆಲ್ಲಿ ಅದಲು ಬದಲು ಮಾಡಿದೆ? ಕಾಫಿ ಕುಡಿದು ಬಿಟ್ಟಿದ್ದ ಕಪ್ ಇಲ್ಲೇ ಬಿದ್ದಿತ್ತಲ್ಲ.... ಅದನ್ನು ತೆಗೆದುಕೊಂಡು ಹೋಗೋಣ ಅಂತ ಬಂದೆ. ಈ ಫೋಟೋ ಕಣ್ಣಿಗೆ ಬಿತ್ತು. ಇದು ನೋಡಿ.... ಇವನ ಸ್ನೇಹಿತನ ಮದುವೆಯ ಫೋಟೋ" ಎನ್ನುತ್ತಾ ಗಂಡನಿಗೂ ತೋರಿದಳು.

ರಾಮಸ್ವಾಮಿ ಫೋಟೋದಲ್ಲಿರುವರನ್ನೆಲ್ಲಾ ಒಂದು ಕಡೆಯಿಂದ ನೋಡಿಕೊಂಡು, ಸುಮಂತನ ಕಡೆ ನೋಡಿದ. ಅವನ ಗಲಿಬಿಲಿ ಅರ್ಥವಾಯ್ತು.

"ನಾನು ಈ ಹುಡುಗೀನ ಎಲ್ಲೋ ನೋಡಿದೀನಿ" ಎನ್ನುತ್ತಾ, ಶಾಂತ ತಾರಾಳ ಕಡೆ ಬೊಟ್ಟು ಮಾಡಿ, ನೆನಪಿಸಿಕೊಳ್ಳ ತೊಡಗಿದಳು. ರಾಮಸ್ವಾಮಿ ಮಗನಿಗೆ ಏನೋ ಸಂಜ್ಞೆ ಮಾಡಿದ.

"ಅಮ್ಮಾ ಸತೀಶ ಊರಿಗೆ ಬಂದಿದಾನೆ. ಅವನ ಮನೆಯವರನ್ನೆಲ್ಲಾ ಒಂದು ದಿನ ಊಟಕ್ಕೆ ಕರೆಯೋಣ್ವಾ?" ತಂದೆಯ ಸಂಜ್ಞೆ ಅರಿತು, ಮಾತನ್ನು ಬದಲಾಯಿಸಲು ನೋಡಿದ್ದ.

"ಓ.... ಧಾರಾಳವಾಗಿ ಕರೆಯಪ್ಪಾ... ಸತೀಶನ ಹೆಂಡತಿ, ಮದುಮಗಳ ರೂಪದಲ್ಲಿ ಹೇಗಿದಾಳೆ ಅಂತ ತಿಳಿಯುಲ್ಲ... ಈ ಹುಡುಗಿ ಪರವಾಗಿಲ್ಲ. ಸುಮಾರಾಗಿದಾಳೆ..... ಆ..... ನನಗೀಗ ನೆನಪಿಗೆ ಬಂತು" ಅವಳ ಉತ್ಸಾಹವನ್ನು ಮುರಿಯುವಂತೆ ರಾಮಸ್ವಾಮಿ ಹೆಂಡತಿಯ ಕೈನಿಂದ ಫೋಟೋ ಕಿತ್ಕೊಂಡ ಸುಮಂತ ನಿರಾಳವಾಗಿ ಉಸಿರನ್ನು ಬಿಟ್ಟ.

"ನಮ್ಮ ಆಚಿ ಫೋಟೋ ಕಳಿಸಿದಾಳಲ್ಲ... ಆ ಹುಡುಗಿಯ ಮುಖ ಈ ಹುಡುಗಿಯ ಮುಖ ಒಂದೇ ತರಹ ಇದೆ. ಎಷ್ಟು ಹೋಲಿಕೆ ಇದೆ ನೋಡಿ....." ಮತ್ತೊಮ್ಮೆ ಫೋಟೋ ಕಿತ್ತುಕೊಂಡಳು.

"ಹಾಗಾದ್ರೆ ಭಾನುವಾರಕ್ಕೆ ಅವರುಗಳನ್ನು ಕರೆಯಲೇನಮ್ಮಾ...."

"ಅವರುಗಳು ಅಂದರೆ ಎಷ್ಟು ಜನ?"

"ಇವರಿಬ್ಬರು, ಸತೀಶನ ಅಣ್ಣ ಅತ್ತಿಗೆಯನ್ನು ಕರೆಯೋಣ ಅಂತ....."

"ನಾಲ್ಕೇ ಜನ ತಾನೇ..... ಹುಂ ಭಾನುವಾರಕ್ಕೆ ಹೇಳಿಬಿಡು...."

"ಎಲ್ಲಿ ಆ ಫೋಟೋ ಇತ್ಲಾಗೆ ಕೊಡು" ಹೆಂಡತಿ ತನ್ನ ಕೈಗೆ ಕೊಟ್ಟ ಫೋಟೋವನ್ನು ಮಗನ ಕೈಗೆ ಕೊಟ್ಟು "ಸರಿಯಾಗಿ ಒಂದು ಕಡೆ ಜೋಪಾನವಾಗಿ ಇಡು. ಬಿದ್ದು ಹಾಳಾಗುತ್ತೆ"

ಸುಮಂತ ಮುಗುಳ್ನಕ್ಕು "ಹೂಂನಪ್ಪಾ..." ಎಂದ. ಶಾಂತಾ ಏನೋ ಯೋಚಿಸುತ್ತಲೇ ಇದ್ದಳು. ರಾತ್ರಿ ಊಟಕ್ಕೆ ಬಡಿಸುವಾಗ, ಇದ್ದಕ್ಕಿದ್ದಂತೆ ಕೇಳಿದಳು. "ಏನು ಅಡಿಗೆ ಮಾಡ್ಲೀ.....?"

ಇಬ್ಬರೂ ಗೊಳ್ಳನೆ ನಕ್ಕರು. "ನಂಗೊತ್ತು ನೀವಿಬ್ರೂ ಯಾಕೆ ನಗ್ತಿದೀರಿ ಅಂತ.... ಭಾನುವಾರ ನಿನ್ನ ಸ್ನೇಹಿತನಿಗೆ, ಏನು ಅಡಿಗೆ ಮಾಡ್ಲೀ ಅಂತ ಕೇಳಿದೆ...." ಒತ್ತಿ ನುಡಿದಳು ಮತ್ತೆ ಇಬ್ಬರೂ ನಕ್ಕರು.

"ಔತಣದ ಸಿಹಿ ಊಟ ಅಂದ ಮೇಲೆ, ಪಾಯಸ, ಎರಡು ಬಗೆ ಪಲ್ಯ, ಎರಡು ಬಗೆ ಕೋಸಂಬರಿ ಮಾಡಲೇಬೇಕು. ಸಾರು, ಹುಳಿ, ಮಜ್ಜಿಗೆ ಹುಳಿ ಆಗಲೇ ಬೇಕು. ಎಲೆಯ ಒಂದು ಪಕ್ಕಕ್ಕೆ ಬಡಿಸಲು ಚಿತ್ರಾನ್ನವಾಗುತ್ತೆ. ಭಕ್ಷ್ಯ ಏನು ಮಾಡಲಿ ಅಂತ...."

"ಇಷ್ಟೆಲ್ಲಾ ಮಾಡಬೇಕಾ? ನಾನು ಕರೆಯೋದೇ ಇಲ್ಲ ಬಿಡು."

"ಇಷ್ಟೆಲ್ಲಾ ಇಲ್ಲದಿದ್ದರೆ ಔತಣ ಅಂತ ಅನ್ನಿಸೋದೇ ಇಲ್ಲ..... ಎಲ್ಲಾ ಪರವಾಗಿಲ್ಲ. ಭಕ್ಷ್ಯ ಮಾಡೋದೇ ಸ್ವಲ್ಪ ಗೋಜಲಿನ ಕೆಲಸ...."

"ನಾನು, ಹೋಟೆಲ್ಲಿಗೆ ಕರೆದುಕೊಂಡು ಹೋಗಿ ಪಾರ್ಟಿ ಕೊಡಿಸ್ತೀನಿ ಅಷ್ಟೇ......"

"ಹೋಟೆಲ್ಲು ಏನೂ ಬೇಡ. ನೀನು ಇಷ್ಟು ಬಗೆ ಮಾಡುವುದೂ ಬೇಡ. ಬಿಸಿಬೇಳೆ ಹುಳಿಯನ್ನ, ಆಂಬೊಡೆ, ಜಾಮೂನು, ಮೊಸರನ್ನ ಇಷ್ಟು ಸಾಕು...."

ಈಗ ಶಾಂತ ನಕ್ಕಳು. "ಇದೆಲ್ಲಾ ನಿಮ್ಮ ಇಷ್ಟದ ಅಡಿಗೆ ತಾನೇ......"

"ಮತ್ತೇನು ಮಾಡ್ಲೀ? ಈ ನಡುವೆ ಹಬ್ಬಗಳಲ್ಲೂ ಏನೋ ನಿನಗೆ ತಿಳಿದದ್ದು ಮಾಡ್ತೀಯ. ಕೇಳಿದ್ರೆ ನಿಮ್ಮ ಬಾಯಿ ಚಪಲ ಜಾಸ್ತಿ ಆಯ್ತು ಅಂತೀಯ"

"ಹೆಚ್ಚು ಕಡಿಮೆ ಎಷ್ಟೋ ಹಬ್ಬಗಳಲ್ಲಿ ಸುಮಂತನಿಗೆ ರಜ ಇರುಲ್ಲ.... ಹೆಣ್ಣು ಹುಡುಗಿ ಆಚಿ ಸಹ ಇಲ್ಲ.... ಬರೀ ನಮ್ಮಿಬ್ಬರಿಗೆ ಏನು ಬೇಕೋ ಅದನ್ನು ಮಾಡ್ತೀನಿ. ಇಷ್ಟು ವರ್ಷ ಕಳೆದ್ರೂ ನಿಮ್ಮ ಬಾಯಿ ಚಪಲ ತೀರಿಲ್ಲ."

"ನಿನಗೊಂದು ತರಹ ಬಾಯಿ ಚಪಲ ; ನನಗೊಂದು ತರಹ ಬಾಯಿ ಚಪಲ...." ಮಗನ ಕಡೆ ನೋಡಿ ನಕ್ಕ.

"ಏನು? ಅಪ್ಪ ಮಗ ಇಬ್ಬರೂ, ವಿಪರೀತ ಒಂದಾಗಿದೀರಿ....?"

"ಗಂಡು ಹುಡುಗ, ಬೆಳೆದು ದೊಡ್ಡವನಾಗಿದಾನೆ. ಈಗ ಅವನು ನನ್ನ ಸ್ನೇಹಿತನಂತೆ, ಅಲ್ವೇನಯ್ಯಾ....?"

"ಆದ್ರೆ, ನಿಮ್ಮಿಬ್ಬರಿಗೂ ನಾನು ಬೇಕೇ ಬೇಕು ಅಲ್ವೇನಪ್ಪಾ?"

"ಇಬ್ಬರೂ ಸರಿಯಾಗಿದೀರಿ. ಒಂದು ವಿಷಯ ಸಿಕ್ಕರೆ ಸಾಕು. ಗಂಟೆಗಟ್ಟಲೆ ಚರ್ಚೆ ಮಾಡ್ತೀರಿ."

"ಹೊತ್ತು ಹೋಗಬೇಕಲ್ಲಪ್ಪಾ...."

"ಹೊತ್ತು ಹೋಗದೇ ಇರೋದು ನಿಮಗೆ... ನನಗಂತೂ ಬಿಡುವೇ ಇರುಲ್ಲ. ಈ ನಡುವೆ ಮುಂಚಿನಷ್ಟು ಕೆಲಸ ಸಹ ಮಾಡುಕ್ಕಾಗುಲ್ಲ. ಕೆಲಸದವಳೋ ದಿನ ಬೆಳಗಾದರೆ ಚಕ್ಕರ್.... ನೀವೋ ಇಬ್ಬರೂ ಗಂಡಸರು..... ಇನ್ನೊಂದೆರಡು ಹೆಣ್ಣು ಮಕ್ಕಳಿದ್ದಿದ್ದರೆ, ನನ್ನ ಸಹಾಯಕ್ಕಾಗುತ್ತಿದ್ದರು....."

"ಎಷ್ಟೇ ಹೆಣ್ಣು ಮಕ್ಕಳಿದ್ದರೂ, ಮದುವೆಯಾಗಿ ಅವರವರ ಮನೆಗೆ ಹೋಗ್ತಾರೆ.... ಸೊಸೆ ಬಂದರೆ, ನಿನಗೆ ಸ್ವಲ್ಪ ಹಗುರ ಆಗುತ್ತೆ ನೋಡು."

"ಮನೆ ಹೆಣ್ಣು ಮಕ್ಕಳಾದರೆ, ಹೇಳಿ ಕೆಲಸ ಕಾರ್ಯ ಮಾಡಿಸಬಹುದು. ಸೊಸೆ ಎಷ್ಟಾಗಲೀ ಹೊರಗಿನಿಂದ ಬಂದವಳು.... ಏನು ಹೇಳಿದರೆ ಹೇಗೋ...."

"ಏನೇ ಹೀಗೆ ಹೇಳ್ತೀ..... ಸೊಸೇನೇ ನಮ್ಮ ಮನೆ ಹುಡುಗಿ..... ನಮ್ಮ ಹೆಣ್ಣು ಮಕ್ಕಳು, ಹುಟ್ಟಿದಾಗಲಿಂದಲೇ ಪರರವಸ್ತು... ನೀನು ನಮ್ಮ ಮನೆಗೆ ಬಂದಮೇಲೆ, ನೀನು ಈ ಮನೆಯವಳಾಗಲಿಲ್ವೇ ಹಾಗೇ......"

"ನನಗಾದರೆ, ಇಲ್ಲಿ ಬೇರೆ ಯಾರೂ ಇರಲಿಲ್ಲ. ಯಜಮಾನಿಯೂ ನಾನೇ, ಕೆಲಸದವಳೂ ನಾನೇ....... ಈಗಿನ ಕಾಲದ ಹುಡುಗಿಯರಿಗೆ ಗಂಡನ ಮನೆಗೆ ಬರ್ತಿದ್ದ ಹಾಗೇ ಯಜಮಾನಿಕೆ ಬೇಕು....."

"ಆ ಯಜಮಾನಿಕೆ ಬಿಟ್ಟು ಕೊಡೋಕೆ ನೀನು ಸಿದ್ಧಳಾಗಿಲ್ಲ ಅಲ್ವಾ?"

"ಬಿಟ್ಟು ಕೊಟ್ಟರೆ, ನಾನು ಯಾತಕ್ಕೂ ಬೇಡದವಳಾಗ್ತೀನಿ ಅಷ್ಟೇ....." ತನ್ನಲ್ಲೇ ಗೊಣಗಿಕೊಂಡಳು.

"ನಾನು ಸ್ವಲ್ಪ ರಾಧಮ್ಮನ ಮನೆಗೆ ಹೋಗಿ ಬರ್ತೀನಿ" ರಾಮಸ್ವಾಮಿ ಗಾಬರಿಗೊಂಡ. ಆ ಫೋಟೋದಲ್ಲಿರುವ ಹುಡುಗಿ ಇವಳೇ ಎಂದು ಅನುಮಾನ ಬಂದಿರಬಹುದೇ ಎಂದುಕೊಂಡ.

"ಅವರ ಮನೆಯ ಅಡಿಗೆಯವರು, ಭಾನುವಾರ ಬಂದು ಅಡಿಗೆ ಮಾಡಿಕೊಟ್ಟು ಹೋಗ್ತಾರಾ ಅಂತ ಕೇಳಿಕೊಂಡು ಬರ್ತೀನಿ" ರಾಮಸ್ವಾಮಿ ನಿರಾಳನಾದ. ಆದರೂ ಆಂತಕವಿತ್ತು.

"ಬೇಗ ಬಂದು ಬಿಡು. ಸುಮ್ಮನೇ ಹರಟ್ತಾ ಕೂತ್ಕೋ ಬೇಡ."

"ನನಗೆ ಹರಟೆ ಹೊಡೆಯೋದು ಅಂತಂದ್ರೇ ಆಗುಲ್ಲ" ಎಂದು ಕೈ ಅಲ್ಲಾಡಿಸುತ್ತಾ ಹೇಳಿ ಹೋದಳು. ಅರ್ಧಗಂಟೆಯ ನಂತರ ವಾಪಸ್ಸಾದಳು. ಅವಳ ಮುಖದಲ್ಲಿನ ಸಮಾಧಾನದ ಕಳೆಯನ್ನು ಕಂಡು ಇವನಿಗೂ ಸಮಾಧಾನವಾಗಿತ್ತು.

"ಆಕೆಗೆ ನಮ್ಮ ಮನೆಗೆ ಬಂದು ಮಾಡುಕ್ಕೆ ಬಿಡುವಾಗುಲ್ಲವಂತೆ. ಬೇಕಾದರೆ ರಾಧಮ್ಮನೇ ಬಂದು ಮೈಸೂರುಪಾಕು, ಆಂಬೊಡೇನ ಮಾಡಿಕೊಡ್ತಾರಂತೆ. ಬೇಕಾದ ಸಾಮಗ್ರಿಗಳ್ನನು ತರಿಸಿಡಿ. ನಿಮ್ಮ ಮನೆಗೇ ಬಂದು ಮಾಡಿಕೊಡ್ತೀನಿ ಅಂತಂದ್ರು."

"ಅದೇನ್ಮಾಡ್ತೀಯೋ ಮಾಡ್ಕೋ......"

"ಸಾಮಾನಿನ ಲಿಸ್ಟು ಬರೆದಿಡ್ತೀನಿ. ಅಂಗಡಿಯವನಿಗೆ ಕೊಟ್ಟು ಬನ್ನಿ."

"ಹೂಂ. ಸರಿಯಾಗಿ ಎಷ್ಟೆಷ್ಟು ಬೇಕು ಅಂತ ಬರೆದಿಡು."

"ಹುಂ...." ಎಂದು, ಏನೇನು ಪರಿಕರಗಳನ್ನು ಎಷ್ಟೆಷ್ಟು ಮಾಡ್ತೀನಿ, ಅದಕ್ಕೆ ಏನೇನು ಸಾಮಾನುಗಳು ಬೇಕು ತನ್ನಲ್ಲೇ ಗುಣಾಕಾರ ಹಾಕಿಕೊಂಡಳು.

"ಅಡಿಗೆ ಆಗಿದ್ರೆ ಬಡಿಸೇ..... ಟಿ.ವೀ.ಲಿ ಯಾವುದೋ ಕ್ರಿಕೆಟ್ ಮ್ಯಾಚ್ ಬರುತ್ತೆ. ನೋಡಬೇಕು."

"ನಾನು ಕನ್ನಡ ಸಿನಿಮಾ ನೋಡಬೇಕು....."

"ಸಿನಿಮಾ ಮತ್ತೆಂದಾದ್ರೂ ಬರುತ್ತೆ.... ಮ್ಯಾಚ್ ನಾಳೆ ಸಿಗುಲ್ಲ"

"ಸರಿ. ಹಾಗಾದ್ರೆ, ನಾನು ರಾಧಮ್ಮನ ಮನೆಗೆ ಹೋಗಿ ನೋಡ್ತೀನಿ. ಅವರ ಮನೇಲಿ ಕನ್ನಡ ಸಿನಿಮಾ ಬಿಟ್ಟು ಬೇರೆ ಹಾಕುಲ್ಲ" ರಾಧಮ್ಮನ ಮನೆಗೆ ಮತ್ತೆ ಹೆಂಡತಿ ಹೋಗುತ್ತಾಳಲ್ಲ ಎಂದು ಗಂಭೀರನಾದ.

"ನಿನ್ನ ಸಿನಿಮಾ ಶುರುವಾಗೋವರೆಗೂ ನೋಡ್ತೀನಿ..... ಆಮೇಲೆ ನನ್ನ ಪಾಡಿಗೆ ವಾಕಿಂಗ್ ಹೋಗ್ತೀನಿ.... ಸರೀನಾ? ಅವರಿವರ ಮನೇಗೇಕೆ ಹೋಗ್ಬೇಕು?"

"ಹೂಂ ಮತ್ತೆ. ಟಿ.ವಿ. ಇರೋದು ಮನೆಯವರಿಗೆಲ್ಲಾ ಅವರವರ ಕಾರ್ಯಕ್ರಮ ವನ್ನು ನೋಡೋಕೆ. ಸುಮಂತ ಬಂದ ಮೇಲೆ, ಅವನಿಗೆ ಬೇಕಾದ್ದು ಏನೇನೋ ನೋಡ್ತಾನೆ. ಏನೂ ಹೇಳುಕ್ಕಾಗುಲ್ಲ. ಅವನೇ ಟಿ.ವೀನ ತಂದಿದ್ದು."

"ನನ್ನ ಕಾಲದಲ್ಲೇ ಟಿ.ವಿ. ಬಂದಿದ್ದರೆ, ನಾನೂ ತಂದಿಟ್ಟಿರುತ್ತಿದ್ದೆ..... ಆದರೆ ಬರೋ ಸಂಬಳ ಸಂಸಾರಕ್ಕೇ ಸಾಕಾಗುತ್ತಿರಲಿಲ್ಲ..... ಯಾವಾಗ ನೋಡಿದರೂ, ಬರೀ ಕೈಲಿ ಮೊಳ ಹಾಕೋದೇ ಆಗಿತ್ತು..... ನಮ್ಮ ಸುಮಂತ ಕೆಲಸಕ್ಕೆ ಸೇರಿದ ಮೇಲೆ, ನೀನು ಆಸೆ ಪಟ್ಟಿದ್ದೆಲ್ಲಾ ಬಂದು ಸೇರಿದೆ ಅಲ್ವಾ?"

"ಹೂಂ ಮತ್ತೆ. ನನ್ನ ಆಸೆಗಳು ಈ ವಯಸ್ನಲ್ಲಾದರೂ ನೆರವೇರಬೇಡ್ವೆ?"

"ಆಸೆ ಅಂತ ನಮ್ಮ ಅಪೇಕ್ಷೆ ಅತಿಯಾಗಬಾರದು ಶಾಂತಾ....."

"ಸಾಕು ನಿಮ್ಮ ಉಪದೇಶ, ಏಳಿ ಊಟ ಮಾಡೋರಂತೆ.... ನಾನೇನೇನು ಕೇಳಿ ಕೇಳಿ ತರಿಸಿಕೊಂಡಿದೀನಿ....."

"ಹಾಗಲ್ಲ ಕಣೇ ನಾನು ಹೇಳಿದ್ದು... ಏನೇನೋ ಅಪೇಕ್ಷೆ ಇಟ್ಕೋ ಬೇಡ. ಆಮೇಲೆ ನಿರಾಸೆಯಾದೀತು ಅಂತ."

"ಏನೇನೋ ಮಾತನಾಡಿ ನನ್ನ ತಲೆ ಕೆಡಿಸಬೇಡಿ. ಕ್ರಿಕೆಟ್ ಮ್ಯಾಚ್ ಶುರುವಾಗಿರಬಹುದು. ಬೇಗ ಬೇಗ ಊಟ ಮಾಡಿ" ಗಂಡನ ಮಾತನ್ನು ವಿರೋಧಿಸುತ್ತಾ ಶಾಂತಾ ಬಡಿಸಿದಳು.

ಇದ್ದಕ್ಕಿದ್ದಂತೆ ಬಂದಿಳಿದ ವನಜಳನ್ನು ಕಂಡು ಶಾಂತಳಿಗೆ ಸೋಜಿಗವೆನಿಸಿತ್ತು. "ಅದೇನು ಇದ್ದಕ್ಕಿದ್ದ ಹಾಗೆ... ಅತ್ತಿಗೆ?"

'ಸುಮ್ಮನೆ ಹೀಗೇ. ನಿಮ್ಮಣ್ಣನೂ ಊರಿನಲ್ಲಿರಲಿಲ್ಲ" ರಾಮಸ್ವಾಮಿ ತಲೆ ಎತ್ತಿ ನೋಡಿದ.

"ಅನಂತಣ್ಣನ್ನಂತೂ ನೋಡಿ ಎಷ್ಟೋ ದಿನಗಳಾಯ್ತು. ಊರೂರು ತಿರುಗ್ತಾನೇ ಇರ್ತಾನೆ. ಇಲ್ಲಿಗೆ ಒಂದು ಸಾರಿ ಬಂದು ಹೋಗಬಾರದಾ?"

"ಸುಮಂತನ ಮದುವೆ ಗೊತ್ತಾಗಲಿ. ಬಂದು ಓಡಾಡ್ತಾರೆ. ನಾನು ಕಳಿಸಿದ ಫೋಟೋ ನೋಡಿದ್ರಾ? ಜಾತಕ ಹೊಂದಿತಾ?"

"ನಾನಿನ್ನು ತೋರಿಸಿಯೇ ಇಲ್ಲ. ಏಳು ಕೈಕಾಲು ತೊಳೆದುಕೋ..... ಊಟಕ್ಕೇಳು" ವನಜ ಕೈಕಾಲು ತೊಳೆದು ಬರುವಷ್ಟರಲ್ಲಿ ಶಾಂತಾ, ತಟ್ಟೆಯನ್ನು ಹಾಕಿ, ಕುಡಿಯಲು ನೀರನ್ನಿಟ್ಟು ಬಡಿಸಿದಳು. ಊಟ ಮಾಡುತ್ತಾ ವನಜ ಊರಿನ ವಿಷಯಗಳನ್ನು ಮಾತನಾಡಿದಳು. ರಾಮಸ್ವಾಮಿಯ ಊಟ ಮುಗಿದಿತ್ತು. ಎದ್ದು ಕೈ ತೊಳೆದು, ಟಿ.ವಿ.ಯ ಮುಂದೆ ಕೂತಿದ್ದ. ಆದರೆ ಕಿವಿಯೆಲ್ಲಾ ಅವರಿಬ್ಬರ ಮಾತಿನ ಮೇಲಿತ್ತು.

"ಇನ್ನು ಒಂದೆರಡು ಹುಡುಗೀರ ಫೋಟೋ ತಂದಿದೀನಿ. ನನ್ನ ಊರಿನ ಕಡೆಯವರು.

ಹುಡುಗೀರು ನನ್ನ ಹಾಗೇ ಹೆಚ್ಚಿಗೆ ಓದಿಲ್ಲ. ಆದರೆ, ಮನೆ ಕೆಲಸ ಕಾರ್ಯಗಳಲ್ಲಿ ನಿಪುಣರು. ನಿನ್ನನ್ನ ಮೀರಿಸ್ತಾರೆ"

"ನೀವು ಕಳಿಸಿದ್ರಲ್ಲ.... ಅದೇ ಹುಡುಗಿಯ ಫೋಟೋ, ಜಾತಕನ ಆಚಿ ಸಹ ಕಳಿಸಿದ್ದು...... ಹುಡುಗಿ ಸುಮಾರಾಗಿದಾಳೆ....."

"ಅದಕ್ಕೇ ಜಾತಕಾನ ತೋರಿಸಲಿಲ್ವಾ?"

"ಇನ್ನು ನಾಲ್ಕಾರು ನೋಡೋಣ ಅಂತ... ಸುಮಂತನಿಗೇನು ವಯಸ್ಸು ಮೀರಿ ಹೋಯ್ತೆ?"

"ಎಷ್ಟು ನೋಡಿದ್ರೂ ಅವನ ಹಣೇಲಿ ಯಾರು ಬರೆದಿದಾಳೋ ಅವಳೇ ಅವನ ಹೆಂಡತಿ...."

"ಹಾಗಂತ, ಯಾವುದನ್ನ ನೋಡಿದೀವೋ ಅದನ್ನೇ ಅವನ ತಲೆಗೆ ಕಟ್ಟುಕ್ಕೆ ಆಗುತ್ಯೆ?"

"ನಾನು ನಿಮ್ಮಣ್ಣನ ತಲೆಗೆ ಕಟ್ಟು ಬಿದ್ದಿದೇನಲ್ಲ ಹಾಗೆ....."

"ಸುಮ್ಮನಿರಿ ಅತ್ತಿಗೆ...ನಿಮ್ಮಂಥೋರು ಸಿಕ್ಕಿದ್ದು ನಮ್ಮಣ್ಣನ ಪುಣ್ಯ"

"ಆ ಪುಣ್ಯ ಅವರಿಗೆ ಬೇಕಿಲ್ಲವಲ್ಲ....."

"ಸದಾ ಒಗಟಾಗಿ ಮಾತಾಡ್ತೀರಿ..... ನಿಮಗೆ ಮಕ್ಕಳಾಗಲಿಲ್ಲ ಅಂತಂದ್ರೆ ಅದು ನಿಮ್ಮಿಬ್ಬರ ತಪ್ಪಲ್ಲ....."

"ನಾನೂ ಮನಸ್ಸು ಮಾಡಿದ್ದರೆ, ನನಗೂ ಒಂದಲ್ಲ ನಾಲ್ಕು ಮಕ್ಕಳಾಗಿರುತ್ತಿದ್ದವು..... ನಾನೇ ನಿಮ್ಮಣ್ಣನಿಂದ ದೂರ ಇದ್ದು ಬಿಟ್ಟೆ."

"ಇದು ಅನ್ಯಾಯ ಅಲ್ವಾ ಅತ್ತಿಗೆ?"

"ಯಾವುದು ಅನ್ಯಾಯ ಶಾಂತಾ? ಯಾವುದು ಅನ್ಯಾಯ ಅಂತ.... ನಾನು ಮದುವೆಯಾಗಿ ಬರೋ ಹೊತ್ತಿಗೆ, ನಿಮ್ಮಣ್ಣನಿಗೆ ಆ ಮೊದಲೇ ಮದುವೆಯಾಗಿ.... ಒಂದು ಹೆಣ್ಣು ಮಗು ಸಹ ಇತ್ತು....."

ಆಂ..... ಶಾಂತ ಕೆನ್ನೆ ಮೇಲೆ ಕೈ ಇಟ್ಟಳು. ನಂಬದವಳಂತೆ ತಲೆಯಾಡಿಸಿದಳು.

"ನಿನಗೆ ಗೊತ್ತಿರಲಿಲ್ಲ. ಅಂತಂದ್ರೆ ನನಗೆ ನಂಬುಕ್ಕೇ ಆಗ್ತಿಲ್ಲ"

"ನನಗೇನೂ ಖಂಡಿತಾ ಗೊತ್ತಿಲ್ಲ. ನಿಜ ಹೇಳ್ತಿದೀರಿ ತಾನೇ......?"

"ನಾನ್ಯಾಕೆ ಸುಳ್ಳು ಹೇಳಲಿ? ಸುಮಂತ ನಿಮಗೆ ಏನನ್ನು ಹೇಳಲಿಲ್ವಾ?"

"ಇಲ್ಲವಲ್ಲ..... ನನಗೇ ಗೊತ್ತಿಲ್ಲದ್ದು ಅವನಿಗೇನು ಗೊತ್ತು?"

"ಸುಮಂತ ಅವನ ಸ್ನೇಹಿತನ ಮದುವೆಗೆ ಹೋಗಿದ್ನಲ್ಲ.... ಅಲ್ಲಿಗೆ ನಿಮ್ಮ ಅಣ್ಣನೂ ಅವರ ಸಂಸಾರದೊಂದಿಗೆ ಬಂದಿದ್ರಂತೆ. ತಾನೇ ಎಲ್ಲಾ ಹೇಳಿದ್ರಂತೆ."

"ಅಯ್ಯೋ ರಾಮಾ.... ಅವನೇಕೆ ಇವನಿಗೆ ಹೇಳಿದ?"

"ಒಳ್ಳೇದೇ ಆಯ್ತು..... ಇಲ್ಲದಿದ್ದರೆ ನಿಮಗ್ಯಾರಿಗೂ ತಿಳಿಯುತ್ತಲೇ ಇರಲಿಲ್ಲ"

"ಅನಂತಣ್ಣ ಯಾಕೆ ಹೀಗೆ ಮಾಡ್ದ? ಅಮ್ಮಂಗೆ ಅಪ್ಪಂಗೆ ಗೊತ್ತಿದೆಯಾ?"

"ಗೊತ್ತಿದೆ. ಎಲ್ಲರಿಗೂ ಗೊತ್ತಿದೆ. ಆದರೆ ಮನೇಲಿ ಆ ವಿಷಯವೊಂದನ್ನು ಬಿಟ್ಟು ಬೇರೆ ಎಲ್ಲಾ ಮಾತನ್ನಾಡ್ತಾರೆ ಅಷ್ಟೇ......"

"ಮೆಲ್ಲಗೆ ಮಾತ್ನಾಡಿ ಅತ್ತಿಗೆ. ನಮ್ಮ ಯಜಮಾನರಿಗೆ ಕೇಳಿಸೀತು....."

"ಕೇಳಿಸಲಿ ಬಿಡು ಶಾಂತಾ..... ನಿಮ್ಮ ಯಜಮಾನರು, ಶ್ರೀರಾಮಚಂದ್ರ ಇದ್ದಹಾಗೆ. ಅವರಿಗಂತೂ ಅಪ್ಪ ಅಮ್ಮ ಸಹ ಇರಲಿಲ್ಲ. ಬೇಕಾದ ಹಾಗೆ ಇರಬಹುದಾಗಿತ್ತು....

ಆದರೆ ಬಹಳ ನಿಷ್ಠೆಯ ಮನುಷ್ಯ.... ಅವರನ್ನು ಕಂಡರೆ, ಅವರ ಕಾಲುಗಳನ್ನು ಮುಟ್ಟಿ ನಮಸ್ಕಾರ ಮಾಡಬೇಕು ಅಂತ ಅನ್ನಿಸುತ್ತೆ."

ಗಂಡನನ್ನು ಹೊಗಳಿದ್ದು ಉತ್ಪ್ರೇಕ್ಷೆ ಅಂತೆನ್ನಿಸಿತ್ತು.... "ಅಣ್ಣ ಹೀಗೆ ಮಾಡಬಾರದಾಗಿತ್ತು...." ಲೊಚಗುಟ್ಟಿದಳು. ಮುಖ ಕೆಟ್ಟು ಹೋಗಿತ್ತು.

"ಅವಳಿಗೆ ಬರೀ ಹೆಣ್ಣುಗಳೇ ಹುಟ್ಟಿವೆ. ನಿನಗಾದ್ರೂ ಒಂದು ಗಂಡು ಮಗುವಾಗಲಿ ಅಂತ ಆಸೆ ಅಂತ ನನ್ನ ಬಳಿಗೆ ಬಂದಿದ್ದರು.... ನಾಚಿಕೆ ಇಲ್ಲದೇ......"

"ನೀವು ಜಗಳ ಆಡಬೇಕಾಗಿತ್ತು ಅತ್ತಿಗೆ...... ಅವಳನ್ನು ಬಿಟ್ಟು ನನ್ನ ಬಳೀಲೇ ಇರಬೇಕು ಅಂತ..."

"ನನಗೆ ಅಂತ ಭಂಡ ಜೀವನ ಬೇಕಿಲ್ಲ. ನನಗೆ, ಅವರ ತಂಟೆಯೇ ಬೇಡ. ನನ್ನ ಪಾಡಿಗೆ ನಾನು ಹಾಯಾಗಿದೀನಿ."

"ಆದರೂ ಎಷ್ಟು ದಿನ ಹೀಗೇ ಇರ್ತೀರಿ ಅತ್ತಿಗೆ... ಒಂದಲ್ಲ ಒಂದು ದಿನವಾದ್ರೂ ಅವನ ನೆರವು ಬೇಕಾಗುತ್ತೆ..... ನೀವು ಒಬ್ಬರೇ ಇರೋಕಾಗುತ್ತಾ?"

"ಎಲ್ಲಾದ್ರೂ ಯಾರ ಮನೇಲಾದ್ರೂ ಇದ್ದು ಕಾಲ ಕಳಿತೀನಿ.... ನಿಮ್ಮ ಮನೇಲಿದ್ರೆ ನೀನು ಎರಡು ಹೊತ್ತು, ಎರಡು ತುತ್ತು ಅನ್ನ ಹಾಕಲಾರೆಯಾ?" ನಕ್ಕಳು.

"ಅದು ಹಾಗಲ್ಲ ಅತ್ತಿಗೆ...... ಗಂಡ ಅನ್ನೋ ಪ್ರಾಣಿ ಇರೋವಾಗ....."

"ಅವರು , ಅವಳ ಜೊತೇನೇ ಇರಲಿ ಶಾಂತಾ.... ಅವಳಿಗೆ ಅವರ ಅಗತ್ಯವಿದೆ. ಅಲ್ಲದೇ ಮೂರು ಹೆಣ್ಣು ಮಕ್ಕಳ ಜವಾಬ್ದಾರಿ ಇದೆ......"

"ಮದುವೆ ಗಿದುವೆ ಆಗಿದೆಯಾ.......?"

"ಯಾರು ಮದುವೆ ಆಗ್ತಾರೆ?"

"ಪಾಪಾ..... ಯಾವುದೋ ತಪ್ಪಿಗೆ ಹುಟ್ಟಿ ಬಿಡುತ್ತವೆ......."

"ನೀವೇಕೆ ಪಾಪಾ ಅಂತೀರೋ..... ನಂಗೊತ್ತಿಲ್ಲ..... ನಿಮ್ಮಣ್ಣ ಮಾಡಿದ್ದು ತಪ್ಪು ಅಂತ ಅನ್ನಿಸುಲ್ವಾ?"

"ಅವನ ತಪ್ಪಿಗೆ ಆ ಹುಡುಗಿಯರು ಯಾಕೆ ಶಿಕ್ಷೆ ಅನುಭವಿಸಬೇಕು......?" ಈ ಮಾತುಗಳನ್ನು ಕೇಳ್ತಾ ಕೇಳ್ತಾ ಅನ್ನ ಗಂಟಲಿನಲ್ಲಿ ಇಳೀತಾನೇ ಇಲ್ಲ......"

"ನನಗೂ ಹೊಸದರಲ್ಲಿ ಹೀಗೇ ಆಯ್ತು. ಆದರೆ ನಾನ್ಯಾಕೆ ಉಪವಾಸ ಮಾಡಲಿ ಹೇಳು.... ಊಟಾನೂ ಇಲ್ಲದಿದ್ದರೆ, ನನಗಿನ್ನೇನಿದೆ ಹೇಳು.......?"

"ನಂಗೇನು ಹೇಳಬೇಕೋ ಗೊತ್ತಾಗ್ತಿಲ್ಲ..... ಏಳಿ ಕೈ ಒಣಗ್ತಿದೆ."

"ಏನತ್ತೆ.... ಯಾವಾಗ ಬಂದ್ರಿ? ಹೇಗಿದೀರಿ?" ಸುಮಂತ ಅತ್ತೆಯನ್ನು ಕಂಡೊಡನೆ ಪ್ರಶ್ನಿಸಿದ. ವನಜ ನಗುನಗುತ್ತಾ ಅವನ ಹತ್ತಿರ ಮಾತನಾಡುತ್ತಿರುವುದನ್ನು ಕಂಡು ಶಾಂತ ಬೆರಗಾದಳು.

ಈ ಅತ್ತಿಗೆಯ ಎದೆಗಾರಿಕೆಗೆ ಮೆಚ್ಚಬೇಕು.... ಎದೇಲಿ ದಾವಾನಲ ಹತ್ತಿ ಉರಿದು ಹೋಗ್ತಿದೆ. ಮೇಲೆ ನಗುನಗುತ್ತಾ ಮಾತಾಡ್ತಿದಾಳಲ್ಲ.

"ನೀವಿಬ್ರೂ ಮಾತಾಡ್ತಾ ಇರಿ. ನಾನು ರಾಧಮ್ಮನ ಮನೆಗೆ ಹೋಗಿ, ಬೇಗ ಬಂದು ಬಿಡ್ತೀನಿ."

"ಈಗ ಯಾಕೆ?" ಸುಮಂತನನ್ನು ಪ್ರಶ್ನಾರ್ಥಕವಾಗಿ ನೋಡಿದಳು.

"ನಾಳೆ ಸುಮಂತನ ಸ್ನೇಹಿತನ ಮನೆಯವರು, ಊಟಕ್ಕೆ ಬರೋರಿದಾರೆ. ರಾಧಮ್ಮನ ಮನೆ ಅಡಿಗೆಯೋರಿಗೆ ಕೇಳೋಕೆ ಹೇಳಿದ್ದೆ. ಈಗ ಹೇಗೂ ನೀನು ಬಂದಿದೀಯ. ನೀನೂ

ನಾನು ಸೇರಿ ಎಲ್ಲಾ ಮಾಡಬಹುದು.... ಅದಕ್ಕೇ ಅವರಿಗೆ ಪರವಾಗಿಲ್ಲ ಬರಬೇಡಿ ಅಂತ ಹೇಳಿ ಬರ್ತೀನಿ"

"ನಾನೂ ಬರ್ತೀನಿ ತಡಿ......" ಸುಮಂತನ ಕಡೆ ನೋಡಿ ಸಂಜ್ಞೆ ಮಾಡಿದಳು. ಇಬ್ಬರೂ ಅತ್ತ ಹೋದರು. ಸುಮಂತ ಮುಂಬಾಗಿಲಿಗೆ ಬಂದು ನಿಂತ. ಅನಂತ ಮಾವನಿಂದ ಅತ್ತೆಗೆ ಅನ್ಯಾಯವಾಗಿದೆ. ಆದರೂ ಎಷ್ಟು ಸಹನೆಯಿಂದ ಇದಾರೆ.... ಅತ್ತೆಯ ದೊಡ್ಡತನಕ್ಕೆ ಮೆಚ್ಚಿದ್ದ. ಆ ರಾತ್ರಿ, ಅತ್ತಿಗೆ ನಾದಿನಿಯರ ಮಾತುಕತೆಯೇ ಮುಗಿಯಲಿಲ್ಲವಾದ್ದರಿಂದ, ಸುಮಂತನಿಗೆ ಮಾತನಾಡಲು ಸಮಯ ಸಿಗಲಿಲ್ಲ.

ಹೊತ್ತಿಗೆ ಸರಿಯಾಗಿ, ಸತೀಶ ತನ್ನ ಪತ್ನಿ ಹಾಗೂ ಅಣ್ಣ ಅತ್ತಿಗೆಯರೊಂದಿಗೆ ಬಂದ. ಸುಮಂತ, ಹಾಗೂ ರಾಮಸ್ವಾಮಿ ಅವರುಗಳನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಒಳಗಿನಿಂದ ಶಾಂತಾ ಬಂದು, ಅವರುಗಳನ್ನು ಸ್ವಾಗತಿಸಿ, ಕುಳಿತುಕೊಳ್ಳುವಂತೆ ಹೇಳಿ ಉಪಚರಿಸಿದಳು. ವನಜ ಒಳಬಾಗಿಲಿನಲ್ಲಿ ನಿಂತು ಹೊರಗಿರುವವರನ್ನು ನೋಡಿದಳು. ಸುಮಂತ ಅತ್ತೆಯನ್ನು ಕರೆದು, ಅತಿಥಿಗಳಿಗೆ ಪರಿಚಯಿಸಿದ.

ಅದೂ ಇದೂ ಮಾತನಾಡಿ ಸಮಯ ಕಳೆದರು. ಊಟದ ಸಮಯವಾಗಿತ್ತು. ಬಾಳೆಯ ಎಲೆ ಹಾಕಿ ಬಡಿಸಿದರು. ಸತೀಶನಂತೂ ಬಾಯಿ ತುಂಬಾ ಹೊಗಳಿಕೊಂಡು ಊಟ ಮಾಡಿದ.

"ನಮ್ಮ ಅತ್ತೆ ಅಡಿಗೆ ಕೆಲಸ ತುಂಬಾ ಚೆನ್ನಾಗಿ ಮಾಡ್ತಾರೆ" ಸುಮಂತ ಹೊಗಳಿದ.

"ಸುಮೀ... ಇವರ ಬಳಿ ಬಂದು ಅಡಿಗೆ ಕೆಲಸ ಕಲಿತ್ಕೋ...." ಹೆಂಡತಿಗೆ ಹೇಳಿದ. ಅತ್ತಿಗೆ ನಾದಿನಿಯರು, ಉಪಚಾರ ಮಾಡಿ ಬಡಿಸಿದರು. ಅವರುಗಳು ಅಡಿಗೆಯನ್ನು ಹೊಗಳಿಕೊಂಡು ಊಟ ಮಾಡಿದರು.

"ಆಂಟಿ, ಅಡಿಗೆಯಂತೂ ತುಂಬಾ ಚೆನ್ನಾಗಿತ್ತು. ನಿಮಗೇನಾದರೂ ಉಳಿದಿದೆಯೋ ಇಲ್ಲವೋ?" ಸತೀಶನ ಅಣ್ಣ ನಗುತ್ತಾ ಕೇಳಿದ.

"ಇಷ್ಟೆಲ್ಲಾ ಯಾಕೆ ಮಾಡಿದ್ರಿ? ನಿಮಗೆಲ್ಲಾ ಶ್ರಮ ನಮ್ಮಿಂದ" ಸತೀಶನ ಅತ್ತಿಗೆ ನುಡಿದಳು.

"ಏನಮ್ಮಾ ಹಾಗಂದರೆ.... ಇದೆಲ್ಲಾ ಏನು ಮಹಾ? ಅಡಿಗೆ ಕೆಲಸಾನೆಲ್ಲಾ ಶ್ರಮ ಅಂತಂದ್ರಾಯ್ತು... ನಾವು ಇಬ್ಬಿಬ್ಬರು ಇದ್ದೆವಲ್ಲ....."

"ನೀವು ಊಟಕ್ಕೆ ಕೂತ್ಕೊಳ್ಳಿ ನಾವು ಬಡಿಸ್ತೀವಿ" ಸತೀಶ ನುಡಿದ. ಅಷ್ಟರಲ್ಲಿ ವನಜ ಸರಸರನೆ ಎಂಜಲೆಲೆಗಳನ್ನು ಎತ್ತಿ ಹಾಕಿ, ಗೋಮಯ ಹಾಕಿ ನೆಲವನ್ನು ಒರೆಸಿದ್ದಳು.

"ನಾನು ಬಡಿಸ್ತೀನಿ"ಎನ್ನುತ್ತಾ ಸತೀಶನ ಅತ್ತಿಗೆ ಮುಂದಾದಳು.

"ನೀವು ಅಪರೂಪಕ್ಕೆ ಬಂದಿರೋರು...... ನಾನು ಇವರಿಬ್ಬರಿಗೂ ಬಡಿಸ್ತೀನಿ ನೀವುಗಳು ಕೂತ್ಕೊಳ್ಳಿ" ರಾಮಸ್ವಾಮಿ ತಾನೇ ಎಲೆಗಳನ್ನು ಹಾಕಿ, ಬಡಿಸಲು ಪ್ರಾರಂಭಿಸಿದ.

ಊಟದ ನಂತರ, ಶಾಂತ, ಎಲ್ಲರಿಗೂ ಎಲೆ ಅಡಿಕೆ ಸುಣ್ಣವನ್ನು ತಂದು ಇತ್ತಳು. ಅವರುಗಳು ಹೊರಡಲು ಎದ್ದಾಗ, ಎಲ್ಲರಿಗೂ ಉಡುಗೊರೆಗಳನ್ನು ತಾಂಬೂಲದೊಂದಿಗೆ ಕೊಟ್ಟಳು. ಹುಡುಗಿಯರಿಗೆ, ರವಿಕೆ ಖಣಗಳನ್ನು ಇಟ್ಟು ಕೊಟ್ಟಳು. ಅವರುಗಳು ಸಂಕೋಚದಿಂದ ಉಡುಗೊರೆಯನ್ನು ಸ್ವೀಕರಿಸಿದರು. ನವದಂಪತಿಗಳು ಹಿರಿಯರೆಲ್ಲರಿಗೂ ನಮಸ್ಕಾರ ಮಾಡಿ ಆಶೀರ್ವಾದ ಪಡೆದರು. ಅವರುಗಳು ಅತ್ತ ಹೊರಟರು. ಸುಮಂತ ಗೇಟಿನ ತನಕ ಹೋಗಿ ಬೀಳ್ಕೊಟ್ಟ.

ವನಜ ಒಂದು ಚಾಪೆ ದಿಂಬು ತಂದುಕೊಂಡು, ಮಲಗಿದಳು. ಬಳಿಯಲ್ಲೇ ಶಾಂತ ಕುಳಿತಳು.

"ನೀನು ಮಲಗುಲ್ವೇನೇ ಶಾಂತ......?"

"ಬಂದ ಅತಿಥಿಗಳ ಎದುರಿಗೆ, ಮುಖವಾಡ ಧರಿಸಿ, ನಾಟಕ ಆಡಿದೆ. ನನಗೆ ಅಣ್ಣನ ವಿಷಯ ಕೇಳಿದಾಗಿನಿಂದ ನನ್ನ ಮನಸ್ಸೇ ಕೆಟ್ಟು ಹೋಗಿದೆ"

"ನಿನಗೆ ಹೊಸ ವಿಷಯ ; ಹಾಗೆನ್ನಿಸುತ್ತಿದೆ. ಹೊಸದರಲ್ಲಿ ಒಂದು ವಾರ ನಾನೂ ಹೇಗೆ ಹೇಗೋ ಆಡಿದ್ದೆ. ಕ್ರಮೇಣ ನಾನೇ ಪರಿಹಾರ ಹುಡುಕಿಕೊಂಡೆ."

"ಅಣ್ಣ ಈ ವಿಷಯಗಳನ್ನು ಯಾವಾಗ ಹೇಳಿದ.....?"

"ಮದುವೆಯಾದ ರಾತ್ರಿಯೇ.... ಏನೋ ಸತ್ಯಹರಿಶ್ಚಂದ್ರನ ವಂಶದವರಂತೆ, ನಿನಗೆ ಎಲ್ಲಾ ಹೇಳಿಬಿಡ್ತೀನಿ ಅನ್ನೋ ಭರಾಟೆಯಲ್ಲಿ ಎಲ್ಲಾ ಒದರಿದರು. ಅವರಿಗೆ ಯಾವ ಸಂಕೋಚ, ಅವಮಾನಗಳಿರಲಿಲ್ಲ. ಆದರೆ ನನ್ನ ಭಾವನೆಗಳೆಲ್ಲ ಸುಟ್ಟು ಹೋದವು. ಅವತ್ತೇ ಆ ಗಳಿಗೆಯಲ್ಲಿ ನಾನು ಒಂದು ನಿರ್ಧಾರಕ್ಕೆ ಬಂದೆ..... ಆದ್ದರಿಂದ ನನಗೆ ಯಾವ ದುಃಖವೂ ಇಲ್ಲ" ಒವನಜ ಸುಮ್ಮನಾದಳು.

* * *

- - 25 - -

"ನಾನು ಅವನ ಒಡ ಹುಟ್ಟಿದ ತಂಗಿ, ನನಗೆ ಈಗಲೂ ನಂಬಿಕೆ ಬರುತ್ತಿಲ್ಲ...... ನೀವು ಎಷ್ಟಾಗಲೀ ಹೊರಗಿನಿಂದ ಬಂದವರು. ಸಂಬಂಧವನ್ನೇ ಕಳೆದು ಕೊಂಡು ಬಿಟ್ಟಿರಿ..... ನಾನು...... ನಾನು....." ಒಮತ್ತೆ ಶಾಂತ ಮಾತುಗಳನ್ನೆತ್ತಿದಳು.

"ನಂಗೊತ್ತು ಶಾಂತಾ... ನೀವಿಬ್ಬರೂ ಒಂದೇ ರಕ್ತದವರು.... ಆದರೆ ತಪ್ಪು ಯಾರೇ ಮಾಡಿರಲಿ, ತಪ್ಪು ತಪ್ಪೇ ತಾನೇ?"

"ಅದೇ ಯಾಕೆ ಹೀಗೆ ಮಾಡಿದ ಅಂತ ನನಗಂತೂ ಅರ್ಥವಾಗ್ತಿಲ್ಲ."

"ಅವರು ಆ ಹೆಂಗಸನ್ನು ಪ್ರೀತಿಸಿದ್ದು ತಪ್ಪು ಅಂತ ಹೇಳ್ತಿಲ್ಲ. ಪ್ರೀತಿಸಿದವಳನ್ನು ಯಾರಿಗೂ ತಿಳಿಸದೇ ಮದುವೆಯಾದದ್ದು ತಪ್ಪು..... ಮನೆಯವರಿಗೆ ತಿಳಿಸುವ ಧೈರ್ಯವಿಲ್ಲದಿದ್ದ ಮೇಲೆ ಪ್ರೀತಿ ಯಾಕೆ ಮಾಡಬೇಕಾಗಿತ್ತು....?"

ಒಳಬಾಗಿಲಿನಲ್ಲಿ ನಿಂತು, ಇವರಿಬ್ಬರ ಮಾತುಕತೆಗಳನ್ನು ಕೇಳಿಸಿಕೊಂಡಿದ್ದ ತಂದೆ ಮಗ ಒಬ್ಬರನ್ನೊಬ್ಬರು ನೋಡಿಕೊಂಡರು. ಈಗ ಶಾಂತಳಿಗೆ ಎಲ್ಲಾ ತಿಳಿದಿದೆ, ಒಂಥರಕ್ಕೆ ಒಳ್ಳೆಯದೇ ಆಯ್ತು ಅಂತಂದುಕೊಂಡ ರಾಮಸ್ವಾಮಿ. ಅತ್ತೆಯೇನೋ ಎಲ್ಲಾ ಸುಲಭವಾಗಿ ಹೇಳಿಬಿಟ್ಟರು.... ಆದರೆ ಅಮ್ಮನಿಗೆ ಅಣ್ಣನ ಬಗ್ಗೆ ಏನೋ ನಂಬಿಕೆ..... ಹೆಜ್ಜೆಯ ಸದ್ದು ಕೇಳಿ ಇಬ್ಬರೂ ಮಾತು ನಿಲ್ಲಿಸಿ, ಇತ್ತ ತಿರುಗಿದರು.

"ಒಂದು ಗಳಿಗೆ ಮಲಗಲಿಲ್ವಾ ನೀವು.....?" ಗಂಡನನ್ನು ಪ್ರಶ್ನಿಸಿದಳು ಶಾಂತ.

"ಅವರುಗಳಿಗೆ ಆಟೋ ಸಿಗುವುದು ತಡವಾಯ್ತು. ಈಗ ತಾನೇ ಒಳಗೆ ಬಂದೆವು. ಮುಂಬಾಗಿಲು ತೆಗೆದು, ಒಳಗೆ ಮಲಗಿ ಬಿಟ್ಟಿದೀರಿ...."

"ಎಚ್ಚರವಾಗಿಯೇ ಇದ್ದೆವು. ಏನೋ ಮಾತಾಡುತ್ತಿದ್ದೆವು"

"ಏನ್ಮಾತಾಡ್ತಾ ಇದ್ರೀ ಅತ್ತೆ?" ಎನ್ನುತ್ತಾ ಸುಮಂತ ಅಲ್ಲಿಯೇ ಕುಳಿತ.

"ಏನೋ ಹೆಂಗಸರ ಮಾತು, ಅದೂ ಇದೂ ಇರುತ್ತಲ್ಲ..... ನೀನು ಹೋಗಿ ಒಂದು ಗಳಿಗೆ ಸುಧಾರಿಸ್ಕೋ....." ಶಾಂತ ಮಗನನ್ನು ಕಳಿಸಲು ನೋಡಿದಳು. ವನಜ

ಸುಮಂತನ ಕಡೆ ತಿರುಗಿದಳು.

"ನೀನು ನಿನ್ನ ಸ್ನೇಹಿತನ ಮದುವೇಲಿ, ನಿಮ್ಮ ಮಾವನ್ನ ಭೇಟಿಯಾಗಿದ್ದೆಯಂತೆ......."

"ಹೌದು... ನಿಮಗೆ ಹೇಗೆ ಗೊತ್ತಾಯ್ತು?"

"ನಿಮ್ಮ ಮಾವನೇ ಹೇಳಿದರು....."

"ಮಾವ ಸಿಕ್ಕಿದ್ದ ಅಂತ ನೀನು ನನಗೆ ಹೇಳಲೇ ಇಲ್ಲ" ಶಾಂತ ಮಗನ ಮೇಲೆ ಆಕ್ಷೇಪಣೆ ಹೊರಿಸಿದಳು.

"ಏನೋ ಮರೆತು ಬಿಟ್ಟೆ....."

"ಇದೆಲ್ಲ ಮರೆತು ಹೋಗುತ್ತೇನೋ.... ಹೋಗಲಿ ಹೋಗು..... ನಮ್ಮ ನಮ್ಮ ಮಾತ್ನಲ್ಲಿ ನಿನಗೇನು ಕೆಲಸ? ಸುಮಂತ ಹೆಚ್ಚಿಗೆ ಮಾತನಾಡದೇ ಎದ್ದು ಹೋದ.

ನನಗೆ ಎಲ್ಲಾ ತಿಳಿದಿದೆ ಅಂತ ತಿಳಿದುಕೊಳ್ಳಲೂ ಅಮ್ಮ ಸಿದ್ಧಳಾಗಿಲ್ಲ. ಯಾಕೋ ಅಮ್ಮನ ವರ್ತನೆ ಸರಿಯಿಲ್ಲ ಅಂತನ್ನಿಸಿತ್ತು.

"ಒಂದು ಚೂರು ಮೈಸೂರು ಪಾಕು, ನಾಲ್ಕು ಆಂಬೊಡೇನ ತೆಗೆದುಕೊಂಡು ಹೋಗಿ ರಾಧಮ್ಮನಿಗೆ ಕೊಟ್ಟು ಬರ್ತೀನಿ" ಶಾಂತ ಹೊರಟಾಗ, ವನಜಳೂ ಅವಳೊಡನೆ ಹೊರಟಳು. ಮುಂಬಾಗಿಲಿನಲ್ಲಿ ನಿಂತಿದ್ದ ತಾರಾ, ಇವರುಗಳನ್ನು ಕಂಡೊಡನೆ ಒಳಗೆ ಮಾಯವಾದಳು.

"ಅದ್ಯಾರು ಆ ಹುಡುಗಿ?" ವನಜ ಶಾಂತಳನ್ನು ಕೇಳಿದಳು.

"ರಾಧಮ್ಮನ ದೂರದ ಸಂಬಂಧಿ.... ಇವರ ಮನೇಲೇ ಇದ್ದುಕೊಂಡು ಓದಿದ್ದಳಂತೆ. ಈಗ ಕೆಲಸದಲ್ಲಿದಾಳೆ. ತಂದೆ ತಾಯಿ ಯಾವುದೋ ಊರಿನಲ್ಲಿದಾರೆ...."

"ಹುಡುಗೀನ ನೋಡಿದೀಯಾ?"

"ಇಲ್ಲಿ ಸರಿಯಾಗಿ ನೋಡಿಲ್ಲ.... ನಾನು ಹೆಚ್ಚಿಗೆ ಇವರ ಮನೆಗೆ ಬರುಲ್ಲ. ಬಂದರೂ ಈ ಹುಡುಗಿ ಕಣ್ಣಿಗೆ ಬಿದ್ದಿಲ್ಲ." ರಾಧಮ್ಮಾ...... ರಾಧಮ್ಮಾ........ ಎಂದು ಕರೆಯುತ್ತಾ ಮುಂಬಾಗಿಲಿಗೆ ಬಂದಳು.

"ಅವರು ಮನೇಲಿಲ್ಲ......." ಎನ್ನುತ್ತಾ ಒಳಗಿನಿಂದಲೇ ನುಡಿದಳು ತಾರಾ.

"ಎಲ್ಲಿಗೆ ಹೋಗಿದಾರೆ.....? ಪರವಾಗಿಲ್ಲ ನೀನೇ ಬಾ....." ಎನ್ನುತ್ತಾ ತಾನೇ ಒಳ ಬಂದಳು. ತಟ್ಟೆಯಲ್ಲಿ ಏನನ್ನೋ ಇಟ್ಟುಕೊಂಡು ತಿನ್ನುತ್ತಿದ್ದ ತಾರಾ ಎದ್ದು ನಿಂತಳು. ಶಾಂತಾ ಅವಳನ್ನೇ ಮಿಕಿ ಮಿಕಿ ನೋಡಿದಳು. ಈ ಮುಂಚೆ ತಾನು ಎಲ್ಲಿಯೋ ನೋಡಿದೀನಿ ಅಂತ ಅನ್ನಿಸಿತ್ತು. ವನಜ, ತಿಂಡಿಯ ಡಬ್ಬಿಗಳನ್ನು ಆ ಹುಡುಗಿಯ ಕೈಗಿತ್ತಳು. "ಇವನ್ನ ರಾಧಮ್ಮನಿಗೆ ಕೊಟ್ಟುಬಿಡು" ಹುಂ ಎಂದಳು ಅವಳು ತಲೆಯಾಡಿಸಿ.

"ನೀನು...... ನೀನು....... ನಿನ್ನ ಹೆಸರೇನು?" ಶಾಂತ ತಡವರಿಸುತ್ತಾ ಕೇಳಿದಳು.

"ನಾನು..... ತಾರಾ....." ಅವಳು ನುಡಿದು, ಕಣ್ಣು ತಪ್ಪಿಸಿದಳು. ಶಾಂತ ಅವಳನ್ನೇ ಬೆರಗಾಗಿ ನೋಡುತ್ತಿದುದನ್ನು ಗಮನಿಸಿ, ವನಜ ಅವಳನ್ನು ಎಚ್ಚರಿಸಿದಳು.

"ನಡೀ....... ಮನೆಗೆ ಹೋಗೋಣ" ಅವಳ ಕೈ ಹಿಡಿದು ಹೊರ ಕರೆ ತಂದಳು.

"ಅತ್ತಿಗೇ.... ನಾನು ಈ ಹುಡುಗೀನ ಈ ಮುಂಚೆ ಎಲ್ಲೋ ನೋಡಿದೀನಿ"

"ಪಕ್ಕದ ಮನೆಯ ಹುಡುಗಿ, ನೋಡದೇ ಇರ್ತೀಯಾ?"

"ಹಾಂ ಈಗ ನೆನಪಿಗೆ ಬಂತು...... ಫೋಟೋದಲ್ಲಿ.... ಸುಮಂತನ ಹತ್ತಿರ ಒಂದು ಗ್ರೂಪ್ ಫೋಟೋ ಇದೆ ಅದರಲ್ಲಿ..... ಇವಳೇ ಇವಳೇ....."

"ಒಬ್ಬರಿದ್ದ ಹಾಗೆ ಇನ್ನೊಬ್ಬರು ಇರ್ತಾರೆ. ಎಷ್ಟೋ ಸಾರಿ ಒಬ್ಬರಿಗೊಬ್ಬರಿಗೆ ಸಂಬಂಧವೇ ಇರುಲ್ಲ....." ಇರಬಹುದು ಅಂತೆನ್ನಿಸಿತ್ತು.

"ಅಲ್ಲ ನಮ್ಮನ್ನು ನೋಡಿ, ಆ ಹುಡುಗಿ ಯಾಕೆ ಒಳಗೆ ಹೋದಳು....."

"ಏನೋ ನಾಚಿಕೆ ಇರಬಹುದು..." ಇದ್ದಕ್ಕಿದ್ದಂತೆ ಶಾಂತ ಸುಮ್ಮನಾದಳು. ಮನೆಗೆ ಬಂದವಳೇ ಮಗನ ಟೇಬಲ್ಲಿನ ಮೇಲೆ ಪುಸ್ತಕಗಳ ನಡುವೆ ಆ ಫೋಟೋವನ್ನು ಹುಡುಕಿದಳು.

"ಏನಮ್ಮ ಏನು ಬೇಕು?" ಪರ ಪರ ಸದ್ದನ್ನು ಗಮನಿಸಿ ಕೇಳಿದ.

"ಅವತ್ತೊಂದು ಗ್ರೂಪ್ ಫೋಟೋ ಇತ್ತಲ್ಲ. ಎಲ್ಲಿ ಅದು? ವನಜಂಗೆ ತೋರಿಸಬೆಕು....."

"ನನ್ನ ಹತ್ತಿರ ಇಲ್ಲ..... ಅವತ್ತೇ ವಾಪಸ್ಸು ಕೊಟ್ಟು ಬಿಟ್ಟೆ...." ಏನೋ ಅನುಮಾನದ ಸುಳಿವು ಸಿಕ್ಕಿತ್ತು.

"ಹೌದೇನೋ...... ರಾಧಮ್ಮನ ಮನೇಲೆ ಒಬ್ಬಳು ಹುಡುಗಿ ಇದಾಳೆ. ಅವಳಂತೂ ಥೇಟ್ ಈ ಹುಡುಗಿಯ ತರಹವೇ....." ಸುಮಂತ ಕೇಳಿಸದವನಂತೆ ನಟಿಸಿದ್ದ. ಶಾಂತ ಹೊರಗೆ ಹೊರಟು ಹೋದಳು. ಅವನು ಕಣ್ಣು ಬಿಟ್ಟ. ಶಾಂತ ಎಲ್ಲರಿಗೂ ಕಾಫಿ ಕೊಟ್ಟಳು.

"ನಾನೂ ಅತ್ತಿಗೆ ಇಬ್ಬರೂ ಶಾಸ್ತ್ರಿಗಳ ಮನೆಗೆ ಹೋಗಿ ಬರ್ತೀನಿ...... ಆ ಜಾತಕಗಳು ಇದ್ದವಲ್ಲ ಎಲ್ಲಿ?" ಗಂಡನನ್ನು ಕೇಳಿದಳು.

"ನಂಗೊತ್ತಿಲ್ಲ. ನಿನಗೇ ಕೊಟ್ಟಿದ್ದೆ...."

"ನನಗೆಲ್ಲಿ ಕೊಟ್ರಿ? ಒಂದಾದ್ರೂ ಕೆಲಸ ಸರಿಯಾಗಿ ಮಾಡುಲ್ಲ."

"ಬಿಡು ಶಾಂತ.... ನಾಳೆ ಹೋದ್ರಾಯ್ತು."

"ನೀವು ಬಂದಿರುವಾಗ, ಒಂದೊಂದಾಗಿ ಎಲ್ಲಾ ಕೆಲಸಗಳನ್ನು ಬೇಗ ಬೇಗ ಮಾಡಿದರೆ, ನನಗೆ ಎಷ್ಟೋ ಹಗುರವಾಗುತ್ತೆ. ಇಲ್ಲದಿದ್ದರಂತೂ ಈ ಮನೆಯಿಂದ ಒಬ್ಬಳೇ ಹೋಗಿ ಎಲ್ಲಾ ಮಾಡಿಕೊಂಡು ಬರುಕ್ಕೆ ಕಷ್ಟ ಆಗುತ್ತೆ...."

"ಎಷ್ಟು ಜಾತಕಗಳಿವೆ?"

"ಒಂದೈದಾರು ಇವೆ...... ಜಾತಕ ತೋರಿಸಿ, ಆಗುತ್ತೆ ಆಗುಲ್ಲ ಅಂತ ಹೆಣ್ಣಿನ ಮನೆಯವರಿಗೆ ಹೇಳಬೇಡವೆ?"

"ಹೌದು ಹೆಣ್ಣು ಹೆತ್ತವರನ್ನು ಹಾಗೆ ಸುಮ್ಮನೆ ಕಾಯಿಸಬಾರದು...... ಒಪ್ಪಿಗೆ ಇಲ್ಲದಿದ್ದರೆ ತಿಳಿಸಿಬಿಡು."

"ಫೋಟೋಗಳು ಸಿಕ್ಕಿದ್ದರೆ, ನಿಮಗೆ ತೋರಿಸುತ್ತಿದ್ದೆ. ಸ್ವಲ್ಪ ಹುಡುಕಿ ಕೊಡ್ತೀರಾ? ಅದೆಲ್ಲಿಟ್ಟಿದೀರೋ?"

ಅಸಹನೆಯಿಂದ, ರಾಮಸ್ವಾಮಿ, ತಾನೇ ತೆಗೆದಿಟ್ಟಿದ್ದ ಫೋಟೋ ಜಾತಕಗಳನ್ನು ತಂದು ಕೊಟ್ಟ. "ಸಿಕ್ತಾ? ನಂಗೊತ್ತಿತ್ತು ನೀವೇ ತೆಗೆದಿಟ್ಟಿದ್ದು ಅಂತ....." ಎಂದು ನುಡಿಯದೇ ಇರಲಿಲ್ಲ. ವನಜ ಫೋಟೋಗಳನ್ನು ನೋಡಿದಳು. ಆದರೆ ಏನನ್ನೂ ಆಡಲಿಲ್ಲ. ಆದರೆ ಕಡೆಯಲ್ಲಿ ತಾರಾಳ ಫೋಟೋ, ಮತ್ತೊಮ್ಮೆ ನೋಡಿ,

"ಈ ಹುಡುಗಿ ಪರವಾಗಿಲ್ಲ... ಸುಮಂತನಿಗೆ ತೋರಿಸಿದ್ಯಾ?"

"ಇಲ್ಲ, ಜಾತಕ ತೋರಿಸಿದ ಮೇಲೆ ಹೇಳಿದ್ರಾಯ್ತು ಅಂತಂದುಕೊಂಡೆ."

"ಸುಮಂತ... ಬಾ ಇಲ್ಲಿ...."

"ಈಗ್ಯಾಕೆ ಅವನು? ಅಷ್ಟರಲ್ಲಿ ಸುಮಂತ ಬಂದಿದ್ದ.

"ಇವತ್ತು ಸಿಹಿ ಅಡಿಗೆ ಮಾಡಿದ್ದಾಗಿದೆ. ಒಳ್ಳೆಯ ಶಕುನ.... ಇವತ್ತಿನಿಂದಲೇ ವಧೂ ಪರೀಕ್ಷೆ ಪ್ರಾರಂಭವಾಗಲಿ....." ಎನ್ನುತ್ತಾ, "ನೋಡೋ ಸುಮಂತ ಈ ಹುಡುಗಿ ಹೇಗಿದಾಳೆ ಅಂತ....."

"ನಿಮಗೆ ಹೇಗಿದಾಳೆ ಅಂತ ಅನ್ನಿಸುತ್ತೆ?" ಅಂತ ಹೇಳಿ ತನ್ನ ಕಣ್ಣ ಮುಂದೆ ಹಿಡಿದಿದ್ದ ಫೋಟೋ ನೋಡಿ ಮನಸ್ಸಿನಲ್ಲೇ ನಕ್ಕ.

"ಇವಳು ತಾರಾ...." ಎಂದ. ವನಜ ಹಿಂದೆ ಬರೆದಿದ್ದ ಹೆಸರನ್ನು ಓದಿ.... "ಅಲ್ಲ ಇವಳ ಹೆಸರು ರೂಪಾ..." ಎಂದಳು.

"ಇಲ್ಲ ಅತ್ತೆ. ಇವಳು ತಾರಾನೇ.... ಇವಳ ಫೋಟೋ ಹೇಗೆ ಬಂತು?"

"ಆಚಿ ಕಳಿಸಿದ್ಲು. ಇನ್ನೊಂದನ್ನ ಅತ್ತಿಗೆ ಕಳಿಸಿದ್ರು..... ಆದರೆ ಇಬ್ಬರೂ ಒಂದೇ...." ಸುಮಂತ ಗಟ್ಟಿಯಾಗಿ ನಕ್ಕ.

"ಇನ್ನೊಂದೆರಡು ಫೋಟೋ ಇದೆಯಲ್ಲ. ಅದೂ ಇವಳದ್ದೇನಾ?"

"ನಿನಗೆ ತಮಾಷೆ. ಊರಿಗೆಲ್ಲಾ ಒಬ್ಬಳೇ ಪದ್ಮಾವತಿ ಅನ್ನೋ ಹಾಗೆ, ಇವಳೊಬ್ಬಳೇನಾ ಮದುವೆಗಿರುವುದು..."

"ನಂಗೇನೋ ಈ ಹುಡುಗಿ ಒಪ್ಪಿಗೆ ಆಗಿದಾಳೆ ಶಾಂತಾ.... ಒಂದೇ ಹುಡುಗಿಯ ಫೋಟೋ ಎರಡೆರಡು ಕಡೆಯಿಂದ ಬಂದಿದೆ. ಇವತ್ತು ಶುಭ ದಿನ.... ನೀನೂ ಹೂಂ ಎಂದು ಬಿಡು."

"ಸುಮಂತ ನಿನಗೆ ಒಪ್ಪಿಗೇನೇನೋ....."

"ನಾಳೆ ಯೋಚಿಸಿಬಿಟ್ಟು ಹೇಳಿದ್ರೆ ಆಗುಲ್ವಾ ಅತ್ತೆ...."

"ಶುಭಸ್ಯ ಶೀಘ್ರಂ ಅಂತ. ಶುಭ ಕೆಲಸಕ್ಕೆ ನಿಧಾನ ಮಾಡಬಾರದು. ಈ ಹುಡುಗೀನ ಕರೆಸುಕ್ಕೆ ಏರ್ಪಾಡು ಮಾಡಿ... ನಾನು ಲಗ್ನಪತ್ರಿಕೆಯ ಶಾಸ್ತ್ರವನ್ನು ಮುಗಿಸಿಕೊಂಡು ವಾಪಸ್ಸು ಹೋಗ್ತೀನಿ."

"ಅಷ್ಟು ಅವಸರ ಯಾಕೆ ಅತ್ತಿಗೆ? ಹುಡುಗಿ ಎಲ್ಲಿ ಓಡಿ ಹೋಗ್ತಾಳೆ? ಅಷ್ಟಕ್ಕೂ ಇವಳಲ್ಲದಿದ್ದರೆ ಇನ್ನೊಬ್ಬಳು"

"ಹಾಗೆ ಹಗುರವಾಗಿ ಮಾತನಾಡಬೇಡ ಶಾಂತಾ.... ಯಾರ್‍ಯಾರ ಕಾಲ್ಗುಣ ಹೇಗೆ ಹೇಗೆ ಇರುತ್ತೋ..... ಈ ಹುಡುಗಿಯ ಸಂಬಂಧ ಬೆಳೆಸಿದರೆ ಒಳ್ಳೆಯದಾಗುತ್ತೆ ಅಂತ ನನಗನ್ನಿಸ್ತಾ ಇದೆ."

ಶಾಂತ ಪೆಚ್ಚಾಗಿದ್ದಳು. ಅತ್ತಿಗೆ ಯಾಕೆ ಹೀಗೆ ಭಾವುಕಳಾಗುತ್ತಿದಾಳೆ ಅಂತೆನ್ನಿಸಿತ್ತು. ಸುಮಂತನಿಗೆ, ಅತ್ತೆಯ ನಾಟಕ ಸ್ವಲ್ಪ ಹೆಚ್ಚಾಯಿತೆನ್ನಿಸಿತ್ತು.

"ಅಮ್ಮಾ ನನಗೆ ಈ ಹುಡುಗಿ ಒಪ್ಪಿಗೆಯಾಗಿದಾಳೆ. ಇವಳನ್ನೇ ಮದುವೆಯಾಗ್ತೀನಿ" ಅಂತಂದುಬಿಟ್ಟ. ಶಾಂತ ಮಂಕಾಗಿ ಬಿಟ್ಟಳು. ಅತ್ತಿಗೆಯ ಎದುರಿಗೆ ಈ ವಿಷಯಗಳನ್ನು ಎತ್ತಿ ಆಡಲೇ ಬಾರದಾಗಿತ್ತೆಂದು ಕೊಂಡಳು.

"ಚೆನ್ನಾಗಿ ತಮಾಷೆ ಮಾಡ್ತಾನೆ ಅಲ್ವಾ?" ಅತ್ತಿಗೆಯ ಕಡೆ ನೋಡಿದಳು.

"ಇಲ್ಲಮ್ಮ. ನಾನು ತಮಾಷೆ ಮಾಡ್ತಿಲ್ಲ. ಇವಳು ನನಗೆ ಇಷ್ಟವಾಗಿದಾಳೆ."

"ತಮಾಷೆ ಹೆಚ್ಚಾಯ್ತು. ನಿನಗೆ ತಿಳಿಯುಲ್ಲ. ಫೋಟೋ ನೋಡಿದ ಮಾತ್ರಕ್ಕೆ ಒಪ್ಪಲು ಹೇಗೆ ಸಾಧ್ಯ? ಇನ್ನು ಜಾತಕ ತೋರಿಸಿಲ್ಲ.... ಎದುರು ಬದುರು ಕೂತು ನೋಡಬೇಡವೆ? ಮುಖ್ಯವಾದ ವಿಚಾರಗಳನ್ನು ಮಾತನಾಡಬೇಡವೆ? ಮದುವೆ ಮಾತು ಅಂತಂದ್ರೆ ಸುಲಭ

ಅಂತ ಅಂದ್ಕೊಂಡ್ಯಾ?"

"ನಾನು ಸುಲಭ ಮಾಡ್ತೀನಮ್ಮ. ಜಾತಕ ಗೀತಕ ತೋರಿಸೋದೇ ಬೇಡ. ಎದುರು ಬದುರು ಕೂತು, ನೋಡಿ ಮಾತನಾಡುವ ಅಗತ್ಯವಿಲ್ಲ. ಇದೇ ನನ್ನ ಕಡೇ ನಿರ್ಧಾರ...."

"ನೋಡಿ ಅತ್ತಿಗೆ ಹೇಗಾಡ್ತಾನೆ? ನಾವೇನು ಮದುವೆ ಮಾಡುಲ್ಲ ಅಂತ ಹೇಳಿದೀವೆ? ಇದ್ದಕ್ಕಿದ್ದಂತೆ ಏನಾಯ್ತು ಇವನಿಗೆ? ಎಲ್ಲೋ ಅಣ್ಣನ ಗಾಳಿ ಬೀಸಿದೆ ಅಂತ ಕಾಣಿಸುತ್ತೆ."

"ನಿಮ್ಮಣ್ಣ ಅತ್ತೆಗೆ ಮೋಸ ಮಾಡಿದ್ರು. ನಾನು ಹಾಗೆ ಮಾಡುಲ್ಲ. ಇವಳನ್ನು ಒಪ್ಪಿದೀನಿ. ಇವಳನ್ನೇ ಮದುವೆಯಾಗ್ತೀನಿ. ಒಂದು ವೇಳೆ ನೀವುಗಳೇನಾದ್ರೂ ಅಡ್ಡಿ ಬಂದರೆ, ನಾನು ಅದಕ್ಕೆ ಕೇರ್ ಮಾಡುಲ್ಲ. ರಿಜಿಸ್ಟರ್ಡ್ ಮದುವೆಯಾಗಿ ಅವಳನ್ನು ಮನೆಗೆ ಕರೆದುಕೊಂಡು ಬರ್ತೀನಿ."

ಶಾಂತ ಕುಸಿದು ಕೂತಳು. ಇದ್ದಕ್ಕಿದ್ದಂತೆ ಇವನಿಗೇನಾಯ್ತು? "ರೀ ಸ್ವಲ್ಪ ಬರ್ತೀರಾ.... ಇವನು ಹೇಗೆ ಹೇಗೋ ಆಡ್ತಿದಾನೆ..... ನೀವಾದ್ರೂ ಸ್ವಲ್ಪ ಹೇಳಿ"

"ಅಪ್ಪ ಹೇಳಿದ್ರೂ ನಾನು ಕೇಳುಲ್ಲ. ಇದು ನನ್ನ ಸ್ವಂತ ವಿಷಯ."

"ಅಲ್ಲ ಕಣೋ....."

"ನೀನು ತೋರಿಸಿದ ಹುಡುಗಿಯನ್ನೇ ಒಪ್ಪಿದೀನಿ. ಇಪ್ಪತ್ತೆಂಟು ಹುಡುಗಿಯರನ್ನು ನೋಡಿ, ಅವರ ಮನೆಯ ತಿಂಡಿಯನ್ನು ತಿಂದು, ಹುಡುಗಿ ಒಪ್ಪಿಗೆಯಾಗಲಿಲ್ಲ ಅಂತ ಹೇಳೋ ಜಾತಿಯವನಲ್ಲ ನಾನು. ಆಗೋದಾದ್ರೆ ಇವಳನ್ನೇ ಮದುವೆಯಾಗೋದು. ಇಲ್ಲದಿದ್ರೆ ಹೀಗೇ ಇದ್ದು ಬಿಡ್ತೀನಿ" ಕಡೆಯ ಬಾಣವನ್ನು ಬಿಟ್ಟ.

ಮಗನ ಮಾತಿಗೆ ಅವಳು ಬೆರಗಾದಳು. ದಿಗಿಲೂ ಆಗಿತ್ತು. "ಇದೇನೋ ಹೀಗೆಲ್ಲಾ ಮಾತನಾಡ್ತೀಯ. ಇದನ್ನೆಲ್ಲ ಯಾರು ಹೇಳಿಕೊಟ್ಟರು?"

"ಯಾರೂ ಹೇಳಿ ಕೊಟ್ಟಿಲ್ಲ....."

"ಅತ್ತಿಗೆ ನೀವಾದ್ರೂ ಹೇಳಿ, ಇವನ್ಯಾಕೆ ಹೀಗಾಡ್ತಿದಾನೋ, ನನಗೆ ಹೆದರಿಕೆ ಆಗ್ತಿದೆ."

"ಸುಮಂತ, ದುಡುಕಬೇಡ. ನಿಮ್ಮಮ್ಮ ಹೇಳೋದೂ ನಿನ್ನ ಒಳ್ಳೆಯದಕ್ಕೇ. ಹೀಗೆ ಪಟ್ಟು ಹಿಡಿದರೆ ಹೇಗೆ? ಇವಳೇ ಆಗಬೇಕೆಂಬ ಹಠ ಯಾಕೆ?" ಶಾಂತಳ ಸಮಾಧಾನಕ್ಕಾಗಿ, ಈ ಮಾತುಗಳನ್ನು ಹೇಳಿದಳು.

"ಬಿಡಿ ಅತ್ತೆ.... ಎಲ್ಲರೂ ನನಗೇ ಉಪದೇಶ ಮಾಡ್ತಿದೀರಾ? ನಾನು ಹೇಳಿದ್ದರಲ್ಲಿ ತಪ್ಪೇನಿದೆ?"

"ತಪ್ಪೇನಿಲ್ಲ.... ಒಂಥರಾ ತಮಾಷೆಯಾಗಿ ಕಾಣ್ತಿದೆ."

"ಮಾವ ಮಾಡಿದ್ದು ತಪ್ಪು ಅಂತ ನಿಮಗ್ಯಾರಿಗೂ ಅನ್ನಿಸಲಿಲ್ಲ. ನಾನು ಮಾಡಿದ್ದು ತಮಾಷೆ..."

"ರೀ ಬನ್ರೀ ಇಲ್ಲಿ. ಇವನು ಹೇಗೆ ಹೇಗೋ ಆಡ್ತಿದಾನೆ...." ರಾಮಸ್ವಾಮಿ ಮುಂದೆ ಬಂದು ನಿಂತ.

"ಇದ್ಯಾಕೆ ಹೀಗಾಡ್ತಿದಾನೆ ಇವನು?"

"ನನಗೇನು ಗೊತ್ತು? ನೀವಿಬ್ರೂ ಕೇಳ್ತಿದೀರಲ್ಲ. ಮತ್ತೇನು ಹೇಳಲಿ?"

"ನೀವು ಯಾವತ್ತೂ ಹೀಗೆ. ಸಮಯದಲ್ಲಿ ಕೈ ಕೊಡೋರೆ.... ಸುಮಂತ ಯಾರನ್ನು ಮದುವೆಯಾಗದಿದ್ದರೂ ಪರವಾಗಿಲ್ಲ.... ಈ ಹುಡುಗೀನೇ ಆಗಬೇಕು ಅಂತ ಯಾಕೆ ಹಠ?"

"ನಿನಗೂ ಯಾಕೆ ಹಠ? ಅವನು ಒಪ್ಪಿದ ಹುಡುಗಿಯ ಜೊತೆ ಮದುವೆ

ಮಾಡಿಸುವುದು ನಮ್ಮ ಧರ್ಮ."

"ಧರ್ಮ ಕರ್ಮ ನನಗೆ ಗೊತ್ತಿಲ್ಲ. ನಾನು ಈ ಹುಡುಗಿಯನ್ನು ಒಪ್ಪಿಲ್ಲ"

"ನಿನಗೆ ವಿವೇಕ ಸಾಲದು ಶಾಂತಾ. ಅವನೂ ದೊಡ್ಡವನಾಗಿದಾನೆ. ಅವನ ಆಸೆಗೂ, ಅವನ ಮಾತಿಗೂ ಬೆಲೆ ಕೊಡಬೇಕು. ಏನಾಗಿದಾಳೆ ಈ ಹುಡುಗಿ. ಇದ್ದುದರಲ್ಲಿ ಪರವಾಗಿಲ್ಲ ಅಂತಂದೆ. ಆಚಿ ಕಳಿಸಿದ ಮೊದಲ ಸಂಬಂಧ ಇದು... ಇದೇ ಆದರೆ ಅದರಲ್ಲಿ ಏನು ಅಂತ....."

"ಬೇರೆ ಯಾವುದಾದರೂ ನೋಡೋ ಆಸೆ ನನಗಿತ್ತು"

"ಓ... ನಾಲ್ಕಾರು ಮನೆಗಳಿಗೆ ಹೋಗಿ, ವಧೂ ಪರೀಕ್ಷೆ ಮಾಡಿ, ಅವರ ಆಸ್ತಿ ಅಂತಸ್ತನ್ನು ತಿಳಿದುಕೊಂಡು, ಗತ್ತಿನಿಂದ ಮಾತನಾಡುವ ಆಸೆ.... ಅಲ್ವಾ?"

"ಹೌದು ಮತ್ತೆ..... ಹುಡುಗಿಯ ಮನೆತನ, ಅನುಕೂಲತೆ, ಯಾರ‍್ಯಾರಿದಾರೆ, ಹೇಗಿದಾರೆ ಎಲ್ಲಾ ವಿಚಾರಿಸಿ ನೋಡಬೇಡವೆ?"

"ಅದನ್ನೆಲ್ಲ ಕಟ್ಟಿಕೊಂಡು ನನಗೆ ಏನೂ ಆಗಬೇಕಾಗಿಲ್ಲ" ಸುಮಂತನೆಂದ.

"ಅದನ್ನು ಎಲ್ಲಾ ನಿಧಾನವಾಗಿ ವಿಚಾರಿಸದ್ರಾಯ್ತು.... ಇದಕ್ಕೆಲ್ಲ ನೀನು ಅಡ್ಡಿ ಬರಬೇಡ ಸೋಮು.... ಅದು ಅವಳ ರೀತಿ ನೀತಿ... ಹುಡುಗಿಯ ಮನೆಯವರನ್ನು ಕರೆಸಿ, ನೋಡಿದ್ರಾಯ್ತು....." ಇಷ್ಟನ್ನೆಲ್ಲಾ ರಾಮಸ್ವಾಮಿ ಶಾಂತಳ ಸಮಾಧಾನಕ್ಕಾಗಿ ಆಡಿದ್ದ.

ಇವಳು ಸುಜಾತಳ ಮಗಳು ಅಂತ ತಿಳಿದರೆ ಮತ್ತೇನು ರಂಪವಾಗುವುದೋ ಎಂಬ ಅನುಮಾನ ಕಾಡಲು ಪ್ರಾರಂಭಿಸಿತ್ತು. ಸುಮಂತ ತನ್ನ ಪಾಡಿಗೆ ತಾನು ಎದ್ದು ಹೋಗಿದ್ದ. ವನಜ ಶಾಂತಳಿಗೆ ಸಮಾಧಾನ, ಸಲಹೆ ನೀಡುತ್ತಿದ್ದಳು. ಶಾಂತ ಭುಸುಗುಟ್ಟುತ್ತಿದ್ದಳು. "ಇವನು ಹೀಗೇ ಆಡಿದ್ರೆ ರಾಧಮ್ಮನ ಮನೇಲಿರೋ ಆ ಹುಡುಗೀನ ತಂದು ಇವನ ಕೊರಳಿಗೆ ಬಲವಂತವಾಗಿ ಕಟ್ತೀನಿ. ಜೀವಮಾನವೆಲ್ಲಾ ಅನುಭವಿಸಲಿ" ಶಾಂತ ರೋಷದಿಂದ ಆಡಿದಾಗ, ರಾಮಸ್ವಾಮಿ, ವನಜ ಮುಖ ಮುಖ ನೋಡಿ ಕೊಂಡರು.

"ರಾಧಮ್ಮನ ಮನೇಲಿರೋ ಹುಡುಗಿ ಏನೂ ಬಿಟ್ಟಿ ಬಿದ್ದಿಲ್ಲ. ನೀನು ಕೇಳಿದ ತಕ್ಷಣ ಒಪ್ಪಿಕೊಂಡು ಬಿಡೋಕೆ...." ಸುಮಂತನ ಕಿವಿಗಳಿಗೆ ಈ ಮಾತು ಕೇಳಿಸಿತ್ತು.

"ಒಪ್ಪದೇ ಏನು ಮಾಡ್ತಾಳೆ ಅವಳಿರೋ ಚಂದಕ್ಕೆ...... ಸುಮಂತನಂತಹ ಗಂಡ ಅವಳಿಗೆ ಸಿಗಬೇಕಾದ್ರೆ ಪೂರ್ವಜನ್ಮದ ಪುಣ್ಯವಿರಬೇಕು...."

"ಇದೆಲ್ಲಾ ಆಗದ ಹೋಗದ ಮಾತು..... ನಿನ್ನ ಬಲವಂತಕ್ಕೆ ಈ ಹುಡುಗಿಯನ್ನು ಮದುವೆಯಾಗಿ, ಅವನ ಪಾಡಿಗೆ ಅವನು, ಇನ್ನೊಂದು ಹುಡುಗಿಯ ಜೊತೆ ಸಂಸಾರ ನಡೆಸುತ್ತಿದ್ದರೆ, ಯಾರೂ ಸುಖವಾಗಿರುಲ್ಲ. ನಿನ್ನ ಅಣ್ಣನ ಸಂಸಾರದ ಹಾಗಾಗುತ್ತೆ ಅಷ್ಟೇ....."

"ಅಣ್ಣನ ಹಾಗೇ ಇವನ್ಯಾಕೆ ಆಡಬೇಕು.... ಸುಮಂತ ಅಂಥೋನಲ್ಲ. ಒಂದಲ್ಲ ಒಂದು ದಿನ ನನ್ನ ಮಾತಿಗೆ ಒಪ್ಪುವವನೇ..... ಒಪ್ಪದಿದ್ದರೆ ಹೀಗೇ....."

"ನಿನ್ನಣ್ಣ ಇವನಿಗೆ ಮಾವ.... ಅದು ಮೇಲ್ಪಂಕ್ತಿ.... ಇವನೂ ಹಾಗಾಡುಲ್ಲ ಅಂತ ನೀನು ಯಾರಿಗೆ ಭರವಸೆ ಕೊಡ್ತೀಯ ಶಾಂತಾ?" ಈಗ ವನಜಳ ಸರದಿ.

"ಅವನಿಗೆ ಬುದ್ಧಿ ಹೇಳೋದು ಬಿಟ್ಟು, ನೀವಿಬ್ರೂ ನನಗೇ ಉಪದೇಶ ಮಾಡ್ತಿದೀರಲ್ಲ"

"ಯಾರಾದರೊಬ್ಬರು ಅನುಸರಿಸಿಕೊಂಡು ಹೋಗಬೇಕು.... ಈಗ ಸುಮಂತನ

ಕಾಲ, ಅವನ ಮದುವೆ, ಅವನ ಒಪ್ಪಿಗೆ ಮುಖ್ಯ. ಒಂದು ಪಕ್ಷ ಅವನು ಯಾರನ್ನಾದರೂ ಪ್ರೀತಿಸಿ, ಅವಳನ್ನೇ ಮದುವೆಯಾಗ್ತೀನಿ ಅಂತ ಹೇಳಿದ್ರೆ ಏನ್ಮಾಡ್ತಿದ್ದೆ?" ಮತ್ತೆ ವನಜ ಪ್ರಶ್ನಿಸಿದಾಗ, ಶಾಂತ ಪೆಚ್ಚಾದಳು ತಕ್ಷಣಕ್ಕೆ ಅವಳಿಗೆ ಉತ್ತರ ಹೊಳೆಯಲಿಲ್ಲ.

"ನನಗೆ ಯಾವುದಕ್ಕೂ ಅವಕಾಶ ಕೊಡದೇ, ದಿಢೀರನೇ ಫೋಟೋ ನೋಡಿ ಒಪ್ಪಿಗೆ ಕೊಡೋದು ಅಂದ್ರೆ ಏನು ಅರ್ಥ? ಇದ್ಯಾವ ಮಂತ್ರ ಜಾಲ?"

"ಮಂತ್ರವೂ ಅಲ್ಲ ; ತಂತ್ರವೂ ಅಲ್ಲ. ಕೆಲವೊಮ್ಮೆ ದಿಢೀರನೆ ಒಂದು ತರಹ, ಅಂತರಾಳದಿಂದ ಪ್ರೇರಣೆ ಉಂಟಾಗುತ್ತದೆ.... ಆಗಲಿ ಈ ಹುಡುಗಿಯ ಬಗ್ಗೆ ವಿಚಾರಿಸಿ ಮುಂದುವರೆಯೋಣ. ಮುಂದೆ ಖಂಡಿತಾ ಬೇಡವೆನಿಸಿದರೆ, ಸುಮಂತನಿಗೆ ಮತ್ತೆ ತಿಳುವಳಿಕೆ ಹೇಳೋಣ...."

"ನೀವೇನೋ ಶುಭ ದಿನ, ಶುಭ ಶಕುನ..... ಹಾಗೇ ಹೀಗೆ ಅಂತ ಅಂದ್ರೀ..... ನೋಡಿ ಒಂದು ಹಗರಣವೇ ಆಯ್ತು. ನನ್ನ ಮನಸ್ಸೇ ಕೆಟ್ಟು ಹೋಯ್ತು...."

"ನಿನ್ನ ಮನಸ್ಸು ಕೆಡುವಂಥ ಅನಾಹುತ ಏನೂ ಆಗಿಲ್ಲ. ಎಲ್ಲಾ ಸರಿ ಹೋಗುತ್ತದೆ." ಗೋಡೆಯ ಮೇಲೆ ಗಡಿಯಾರ 'ಢಣ್' ಎಂದು ಹೊಡೆದಾಗ, ಎಲ್ಲರೂ ಅತ್ತ ನೋಡಿದರು.

"ಗಂಟೆ ಆರೂವರೆಯಾಯ್ತು. ದೇವರ ಮುಂದೆ ದೀಪನಾದ್ರೂ ಹಚ್ಚಿ ಒಂದು ಗಳಿಗೆ ಧ್ಯಾನ ಮಾಡ್ತೀನಿ. ನನ್ನ ಮನಸ್ಸಂತೂ ಗಲಿಬಿಲಿಗೊಂಡಿದೆ."

"ನಾನೂ ಬರ್ತೀನಿ. ಭಜನೆ ಗೀತೆಗಳನ್ನು ಹಾಡೋಣ...." ಅವರಿಬ್ಬರೂ ಅತ್ತ ಹೋದ ಕೂಡಲೇ ರಾಮಸ್ವಾಮಿ, ಮಗನ ರೂಮಿಗೆ ಬಂದು, ಅವನ ಪಕ್ಕ ಕುಳಿತ.

"ಇದೇನೋ ಏನಾದ್ರೂ ಉಪಾಯ ಹುಡುಕುವ ಮೊದಲೇ, ಏನೇನೋ ಆಡಿ, ನಿಮ್ಮಮ್ಮನ್ನ ಗಲಿಬಿಲಿಗೊಳಿಸಿ ಬಿಟ್ಟೆಯಲ್ಲ...."

"ಮತ್ತಿನ್ನೇನು ಮಾಡಲಿ? ಒಂದು ಇತ್ಯರ್ಥವಾಗಲೇ ಬೇಕಾಗಿತ್ತು...."

"ರಾಧಮ್ಮನ ಮನೆಯ ಹುಡುಗಿಯ ವಿಷಯ ಏನ್ಮಾಡ್ತೀಯ?" ಗೊಳ್ಳನೆ ನಗುತ್ತಾ ಪ್ರಶ್ನಿಸಿದ. "ನೋಡ್ತಿರಿ ಏನು ಮಾಡ್ತೀನೀಂತ." ಅವನೂ ನಗುತ್ತಾ ಉತ್ತರಿಸಿದ.

"ಮದುವೆಯ ಮಾತುಗಳು ಅಂದ್ರೆ ತಮಾಷೆಯ ವಿಷಯವಲ್ಲ ಸೋಮು.... ನಾಳೆ ಹೆಚ್ಚು ಕಡಿಮೆಯಾಗಬಾರದು. ಕಂಡೋರ ಮನೆಯ ಹೆಣ್ಣು ಮಕ್ಕಳಿಗೆ ನೋವಾಗಬಾರದು. ಶಾಂತಾ ಚುಟುಕಿ ಮಾತನಾಡುವ ಸ್ವಭಾವದವಳು..... ನನಗೆ ಅದೇ ಭಯ."

"ನೀವು ಮೊದಲ್ನಿಂದ ಅಮ್ಮನಿಗೆ ಬಹಳ ಸ್ವತಂತ್ರ ಕೊಟ್ಟು ಬಿಟ್ಟಿರಿ....."

"ಏನು ಮಾಡಲಿ ಹೇಳು.... ನನ್ನ ಜೀವನದಲ್ಲಿ ಮೊದಲು ಬಂದ ಹೆಣ್ಣು... ಅವಳೇ ನನಗೆ ಸರ್ವಸ್ವ ಅಂತಂದುಕೊಂಡು ಎಲ್ಲಾ ಸ್ವತಂತ್ರವನ್ನು ಕೊಟ್ಟು ಬಿಟ್ಟೆ.... ನಾನು ಒಂಟಿಯಾಗಿದ್ದೆ. ನನ್ನ ಸಂಗಾತಿಯಾಗಿ ಬಂದು ಎಲ್ಲಾ ನಿಭಾಯಿಸಿದಳು.... ಮದುವೆಯಾದ ಹೊಸತರಲ್ಲಿ ನಿಮ್ಮಮ್ಮ ಹೀಗಿರಲಿಲ್ಲ. ನಾವಿಬ್ಬರೂ ಬಹಳ ಅನ್ಯೋನ್ಯವಾಗಿದ್ದೆವು. ಆಚಿ ಹುಟ್ಟಿದ ಮೇಲೆ, ನಿಮ್ಮಮ್ಮನ ಜೋರು ಹೆಚ್ಚಾಯಿತು. ಪ್ರತಿಯೊಂದಕ್ಕೂ ವಾದಿಸಿ ಗೆಲ್ಲುವ ಪ್ರವೃತ್ತಿ ಬೆಳೆಸಿಕೊಂಡಳು. ಅದಕ್ಕೆಒಂದು ಕಾರಣವೂ ಇದೆ. ನಿನಗೆ ಅದು ತಿಳಿದಿರಲೇ ಬೇಕು. ನಾಳೆ ನನಗೆ ಏನೂ ಗೊತ್ತಿರಲಿಲ್ಲ ಅಂತ ಅನ್ನುವಂತಾಗಬಾರದು" ಎಂದು ಸುಜಾತಳ ವಿಷಯವನ್ನು ಸಂಕ್ಷಿಪ್ತವಾಗಿ ಹೇಳಿ, "ಈ ತಾರಾಳ ತಾಯಿ ಸುಜಾತ ಅಂತ ತಿಳಿದರೆ ನಿಮ್ಮಮ್ಮ ಏನು ಮಾಡ್ತಾಳೋ ಅಂತ ನನಗೆ

ದಿಗಿಲು."

ಇದ್ದಕ್ಕಿದ್ದಂತೆ ಅತಿ ಗಂಭೀರನಾದ ಸುಮಂತ. ರಾಮಸ್ವಾಮಿಗೆ ಮುಜುಗರವಾಗಿತ್ತು.

"ಇದೇನಪ್ಪಾ....? ಸಂಸಾರ ಅಂದ್ರೆ ಹೀಗಾ? ಅಲ್ಲಿ ನೋಡಿದರೆ, ಮಾವನದೊಂದು ಹಗರಣ ; ಇಲ್ಲಿ ನಿಮ್ಮ ಮನೆಯಲ್ಲಿ ಒಂದು ಪ್ರಕರಣ. ಎಲ್ರ ಮನೇಲೂ ಹೀಗೇ ಇರುತ್ತಾ?"

"ಇರಬಹುದು ; ಇಲ್ಲದಿರಬಹುದು. ಏನೋ ಒಂದು ವಿಷಗಳಿಗೆಯಲ್ಲಿ ಹೀಗೆ ಆಗಿಬಿಡುತ್ತದೆ. ಈಗ ನೀನೇ ಹೇಳು, ತಾರಾ ಸುಜಾತಳ ಮಗಳು ಅನ್ನೋದು ಆ ಹುಡುಗಿಯ ತಪ್ಪಾ?"

"ಇಲ್ಲಪ್ಪಾ. ಇದರಲ್ಲಿ ತಾರಾಳದು ತಪ್ಪು ಹೇಗೆ ಸಾಧ್ಯ? ಹಾಗೆ ನೋಡಿದರೆ, ಅವರ ಅಮ್ಮನ ತಪ್ಪು ಏನಿಲ್ಲ"

"ಇದೇ ಮಾತನ್ನು ನಾನು ಸಮಜಾಯಿಸಿ, ತಿಳಿಸಿ ಹೇಳಲು ನೋಡಿದೆ. ನಿಮ್ಮಮ್ಮನ ತಲೆಗೇ ಹೋಗಲಿಲ್ಲ. ನನ್ನನ್ನು ದೂರಿ ಬಿಟ್ಟಳು. ಯಾರ್‍ಯಾರು ಎಲ್ಲಿದ್ದರೋ, ಮತ್ತೊಂದು ದಿನ ಸಿಗಬಹುದು ಅನ್ನೋ ಅನುಮಾನ ಸಹ ನನಗಿರಲಿಲ್ಲ. ಗೊತ್ತಿದ್ದರೆ ನಾನೂ ನಿನ್ನ ಮಾವನಂತೆ ಎಲ್ಲ ಹೇಳಿರುತ್ತಿದ್ದೆ."

"ಈಗ ಏನು ಮಾಡೋದು? ಮಾತು ಎಲ್ಲಿಂದ ಎಲ್ಲಿಗೋ ಹೋಗಿದೆ.... ಈ ಮಧ್ಯೆ ಮತ್ತೊಂದು ಸಣ್ಣ ಯುದ್ಧವಾಗುವುದಂತೂ ಖಂಡಿತಾ. ಆದರೆ ಜಯವೂ ನಮ್ಮದೇ...."

"ಅದ್ಹೇಗೆ ಹೇಳ್ತೀಯ? ...... ನಾನು ಸ್ವಲ್ಪ ಹೊರಗೆ ಸುತ್ತಾಡಿ ಬರ್ತೀನಿ. ಮಧ್ಯಾಹ್ನದಿಂದ ಮನೇಲೇ ಇದ್ದೂ ಇದ್ದೂ ಏನೋ ಆಗ್ತಿದೆ.... ಆಚಿಗೆ ಬಂದು ಹೋಗು ಅಂತ ಟೆಲಿಗ್ರಾಂ ಕೊಡಲೇನಯ್ಯ....."

"ಈಗಲೇ ಬೇಡ ಅಪ್ಪಾ..... ಅವಳು ಅವಳ ಮಕ್ಕಳೂ ಬಂದರೆ.... ಸುಮ್ಮನೇ ಗಲಾಟೆ ಜಾಸ್ತಿ ಆಗುತ್ತೆ.... ಒಂದು ವೇಳೆ ಇದು ಸರಿ ಹೋಗದಿದ್ದರೆ, ಅವಳನ್ನು ಕರೆಸೋಣ" ಸುಮಂತ ಆಕಳಿಸುತ್ತಾ ರೂಮಿನಿಂದ ಹೊರಬಂದ. ದೇವರ ಮನೆಯಿಂದ ಭಜನೆಯ ಹಾಡು ಕೇಳಿ ಬರುತ್ತಿತ್ತು.

ಪಾಪಾ... ಸಮಸ್ಯೆಯ ಪರಿಹಾರಕ್ಕೆ, ಅಮ್ಮ ದೇವರ ಮೊರೆ ಹೊಕ್ಕಿದ್ದಾಳೆ ಅಂತಂದುಕೊಂಡ. ವಾಕಿಂಗ್ ಮುಗಿಸಿ ಬರುವಾಗ, ರಾಮಸ್ವಾಮಿ, ರಾಧಮ್ಮನ ಮನೆಗೆ ಹೋಗಿ, ಸುಜಾತಳನ್ನು ಕರೆಸುವಂತೆ ಹೇಳಿ ಬಂದ. ನಾವೆಲ್ಲರೂ ಸೇರಿ ಶಾಂತಳನ್ನು ಮೂರ್ಖಳನ್ನಾಗಿ ಮಾಡುತ್ತಿದ್ದೇವೇನೋ ಅಂತೆನ್ನಿಸಿದ್ದರೂ, ಬೇರೆ ಉಪಾಯವಿಲ್ಲ ಅಂತನ್ನಿಸಿತ್ತು. ಪಾಪಾ, ಸುಜಾತ ಇನ್ನು ಏನೇನು ಮಾತು ಕೇಳಬೇಕಾಗಿದೆಯೋ, ಅಂತಂದುಕೊಂಡ. ಅವನು ಮನೆಗೆ ಕಾಲಿಡುವಷ್ಟರಲ್ಲಿ ಮತ್ತೊಂದು ಆಶ್ಚರ್ಯ ಕಾದಿತ್ತು. ಅನಂತ ತನ್ನ ಸಂಸಾರದೊಂದಿಗೆ ಬಂದು ಇಳಿದಿದ್ದ. ಸುಮಂತ ಅಪ್ಪನ ಕಡೆ ನೋಡಿ ಹಣೆ ಹಣೆ ಚಚ್ಚಿಕೊಂಡ.

"ಹೇಗಿದೀರಿ ಭಾವಾ?" ನಗುತ್ತಾ ಪ್ರಶ್ನಿಸಿದ.

"ಇಷ್ಟರ ಮಟ್ಟಿಗೆ ಇದೀನಿ. ಅದ್ಸರಿ, ಅದೇನು ಇದ್ದಕ್ಕಿದ್ದ ಹಾಗೆ ಸಂಸಾರ ಸಮೇತ ಬಂದು ಬಿಟ್ಟಿದೀಯ....?"

"ಓ..... ನನ್ನ ಇನ್ನೊಂದು ಸಂಸಾರದ ಬಗ್ಗೆ, ಸುಮಂತ ತಿಳಿಸಿದಾನೆ ಅಂತ ಅರ್ಥವಾಯ್ತು... ಇವಳ ಕಡೆಯವರೊಬ್ಬರ ಮನೆಯಲ್ಲಿ ಮದುವೆ ಇತ್ತು. ಹೊರಟು

ಬಂದೆ.... ಎರಡು ದಿನ ಇಲ್ಲಿರ್ತೀನಿ. ಹಾಗೇ ನೋಡಿಕೊಂಡು ಹೋಗೋಣ ಅಂತ ಬಂದೆ."

"ವನಜ ಬಂದಿದಾಳೆ...."

"ಗೊತ್ತಾಯ್ತು. ಅವಳನ್ನು ನೋಡಿ ಮಾತನಾಡಿಸೋಣ ಅಂತಲೇ ಬಂದೆ. ಇಲ್ಲದಿದ್ರೆ ಸೀದಾ ಛತ್ರಕ್ಕೆ ಹೋಗ್ತಿದ್ದೆ."

"ಕಾಫಿ ಆಯ್ತಾ....?"

"ಹೂಂ ಆಯ್ತು... ಸುಮಂತನಿಗೆ ಹೆಣ್ಣು ನೋಡ್ತಿದೀರಿ ಅಂತ ತಿಳೀತು. ಹಾಗೇ, ನನ್ನ ಮಗಳಿಗೂ ಯಾವುದಾದ್ರೂ ವರ ಕಣ್ಣಿಗೆ ಬಿದ್ದರೆ ಹೇಳಿ.... ಅವಳಿಗೂ ಇಪ್ಪತ್ಮೂರು ತುಂಬಿತು...."

"ನೋಡೋಣ... ತಿಳಿದ್ರೆ ಖಂಡಿತಾ ತಿಳಿಸ್ತೀನಿ."

"ನಾನು ಬರಲೇನೇ ಶಾಂತಾ......" ಶಾಂತಾ ಒಳಗೇ ಅಡಗಿದಾಳೆ ಹೊರಗೆ ಬಂದಿಲ್ಲ ಎನ್ನುವುದನ್ನು ಅರಿತ. ತಾನೇ ಒಳಗೆ ಬಂದ.

"ಹೊರಗೆ ಬಂದು ಲೋಕಾರೂಢಿಯಾಗಿ ಮಾತನಾಡಿದರೆ ಏನು ಕಳೆದುಕೊಳ್ತೀಯ.... ಆ ಹೆಂಗಸೂ ಪರಕೀಯಳಲ್ಲ. ನಿನಗೆ ಅತ್ತಿಗೆಯಾಗಬೇಕು...."

"ಇಂಥ ವಿಷಯಗಳಲ್ಲಿ ಉಪದೇಶ ಮಾಡೋಕೆ ಮುಂದಾಗ್ತೀರಿ.... ಅದೇನು ಕಂಡ ಕಂಡ ಹೆಂಗಸರ ಪರ ವಹಿಸಿ ಮಾತನಾಡೋದು."

"ಅವಳಿಂದ ನನಗೇನೂ ಆಗಬೇಕಾಗಿಲ್ಲ.... ಮನೆಗೆ ಬಂದ ಹೆಣ್ಣು ಮಕ್ಕಳು ಯಾರೇ ಆಗಿರಲಿ, ಅವರಿಗೆ ಅವಮಾನ ಮಾಡಬಾರದು. ಅರಿಶಿನ ಕುಂಕುಮ ಕೊಟ್ಟು ನಗುನಗುತ್ತಾ ಕಳಿಸಿಕೊಡು."

"ಯಾಕೋ.... ಅವಳೇನು ನನಗೆ ಬೀಗಿತ್ತಿಯಾಗಬೇಕೆ?"

"ನಿನಗೆ ಒಪ್ಪಿಗೆಯಾದರೆ ಅದೂ ಆಗಲಿ.... ಹೆಣ್ಣು ಮಕ್ಕಳೊಂದಿಗ. ಒಂದು ಹುಡುಗಿ ನಮ್ಮ ಸೊಸೆಯಾದರೆ, ಅವನಿಗೂ ಹೊರೆ ಕಡಿಮೆ ಆಗುತ್ತೆ....."

"ನಮ್ಮನ್ನು ಕೇಳಿ ಅವನ ಹೆಂಡತಿ ಮಕ್ಕಳನ್ನು ಹೆರಲಿಲ್ಲ. ನನಗೇನು ದರ್ದು? ಆ ಹುಡುಗೀನ ಸೊಸೆ ಮಾಡಿಕೊಳ್ಳೋಕೆ?"

"ನೀನೇ ಏನೇ ಹೇಳಿದರೂ, ರಕ್ತ ಸಂಬಂಧವಂತೂ ಇದ್ದೇ ಇರುತ್ತೆ..... ಅದನ್ನು ಕಿತ್ತು ಬಿಸಾಡೋಕೆ ಆಗುಲ್ಲ...."

"ನನಗೂ ಗೊತ್ತು....."

"ಎಲ್ಲಾ ಗೊತ್ತಿದ್ದೂ ಹೀಗಾಡ್ತೀಯಲ್ಲ ನೀನು. ವನಜ ತನ್ನ ದುಃಖವನ್ನು ಮರೆತು ಅವರುಗಳ ಹತ್ತಿರ ಮಾತಾಡ್ತಿದಾಳಲ್ಲ. ನಿನಗೇನಾಗಿದೆ ಅಂತ? ಸೊಸೆ ಬರೋ ಕಾಲಕ್ಕಾದರೂ ದೊಡ್ಡ ಗುಣವನ್ನು ಬೆಳೆಸಿಕೋ."

"ನಾವುಗಳು ಬರ್ತೀವಿ ಭಾವ..." ಹೊರಗಿನಿಂದ ಅನಂತ ಹೇಳಿದ.

"ಒಂದು ರವಿಕೆ ಖಣ ಇದ್ದರೆ ಇಟ್ಟುಕೊಡು.... ಹಾಗೇ ಆ ಹುಡುಗಿಯರಿಗೆ ಈ ದುಡ್ಡು ಕೊಡು...." ಎನ್ನುತ್ತಾ ಐವತ್ತರ ಮೂರು ನೋಟುಗಳನ್ನು ಎಣಿಸಿಕೊಟ್ಟ.

"ಅವಕ್ಕೆಲ್ಲಾ ಯಾಕೆ.....?"

"ಇವತ್ತಿನವರೆಗೂ ಅವರುಗಳೆಂದೂ ಬಂದವರಲ್ಲ. ಇನ್ನು ಮತ್ತೆ ಎಂದಿಗೆ ಬರ್ತಾರೋ.. ಮರ್ಯಾದೆ ಮಾಡುವುದು ನಮ್ಮ ಧರ್ಮ..... ಇಷ್ಟರ ಮೇಲೆ ನಿನ್ನಿಷ್ಟ" ಎಂದು ನುಡಿದು ಹೊರಬಂದ. ಒಳಗಿನ ಗುಸು ಪಿಸು ಮಾತು ಕೇಳಿಸಿತ್ತೇನೋ ಎಲ್ಲರೂ

ಪೆಚ್ಚಾಗಿದ್ದರು. ಗಂಡನ ಮಾತನ್ನು ಉಳಿಸುವವಳಂತೆ, ಶಾಂತ, ಆ ಹೆಂಗಸಿಗೆ ಅರಿಶಿನ ಕುಂಕುಮವನ್ನು ಕೊಟ್ಟು ಖಣವನ್ನು ಇತ್ತಳು. ಹುಡುಗಿಯರಿಗೆ ಹಣವನ್ನು ಕೊಟ್ಟಳು.

"ಇದೆಲ್ಲಾ ಯಾಕೆ?" ಅವರುಗಳು ಸಂಕೋಚದಿಂದ ನುಡಿದರು.

"ಇದರಲ್ಲಿ ನಂದೇನಿಲ್ಲ. ನಿಮ್ಮ ಭಾವ ಕೊಡು ಅಂತ ಹೇಳಿದ್ರು. ಕೊಡ್ತಾ ಇದೀನಿ" ಅಣ್ಣನ ಕಡೆ ತಿರುಗಿ ನೋಡಿದಳು. ರಾಮಸ್ವಾಮಿ ಹಲ್ಲು ಕಡಿದ. ವನಜಳ ಕಡೆ ನೋಡಿದ. ಅವಳೂ ಪೆಚ್ಚಾಗಿದ್ದಳು. ಅವರುಗಳು ಅತ್ತ ಹೋದ ಕೂಡಲೇ ಇಲ್ಲಿ ಮತ್ತೆ ಕಲಕಲ ಪ್ರಾರಂಭವಾಗಿತ್ತು.

"ಮೊದಲೇ ನನ್ನ ತಲೆ ಕೆಟ್ಟು ಹೋಗಿತ್ತು. ರಾಮಾ ಕೃಷ್ಣಾ ಅಂತ ಭಜನೆ ಮಾಡ್ತಾ ಕೂತಿದ್ರೆ ಬಂದಿಳಿದ. ಅವಳಿಗೆ ತಾನೇ ನಾಚಿಕೆ ಬೇಡವೇ, ಬಂದು ಬಿಡೋದೆ?"

"ಬಂದರೆ ಏನಾಯ್ತೀಗ? ವನಜಳೇ ಸುಮ್ಮನಿದಾಳಂತೆ ನಿನಗೇನು?"

"ನಾನು ವನಜ ಅಲ್ಲ ; ಅವನ ಬೆನ್ನಲ್ಲಿ ಬಿದ್ದೋಳು. ಅವನ ತಪ್ಪನ್ನು ಎತ್ತಿ ಆಡೋಳು...."

"ನೀನು ಆಡಿ ಬಿಟ್ಟರೆ, ಎಲ್ಲಾ ಸರಿ ಹೋಗುತ್ತಾ....?"

"ನಾವುಗಳು ಆಡಿದ್ರೇನೇ ಅವರ ತಪ್ಪು ಅವರಿಗೆ ಅರ್ಥವಾಗುವುದು....."

"ಇದು ಇವತ್ತು ನಿನ್ನೆಯ ತಪ್ಪಲ್ಲ. ಇಪ್ಪತ್ತೈದು ವರ್ಷಗಳ ಕೆಳಗೇ ಮಾಡಿದ್ದ ತಪ್ಪು.... ಅದನ್ನು ಸರಿ ಪಡಿಸುಕ್ಕಂತೂ ಆಗುಲ್ಲ... ನಾನೇ ಸುಮ್ಮನಿದೀನಂತೆ, ನೀನ್ಯಾಕೆ ಆಡಿ ಕೆಟ್ಟೋಳಾಗ್ತೀಯ?" ಅತ್ತಿಗೆ ನುಡಿದಾಗ ಶಾಂತ ಬೆರಗಾದಳು.

"ನಿಮ್ಮಷ್ಟು ದೊಡ್ಡ ಹೃದಯ ನನಗಿಲ್ಲ ಅತ್ತಿಗೆ. ಆದರೆ ನನ್ನ ಮಾತುಗಳಿಂದ ನಿಮಗೆ ನೋವಾಗಿದ್ದರೆ ಕ್ಷಮಿಸಿ. ಅಣ್ಣ ಅನ್ನೋ ಸಲುಗೆಯಿಂದ ಹೀಗಾಡಿದೆ...."

"ಎಷ್ಟಾಗಲಿ ಅವರು ನನ್ನ ಗಂಡ. ಅವರ ಅವಹೇಳನ ಕೇಳೋದು ಕಷ್ಟ....." ವನಜ ಒಳಗಿನ ರೂಮಿಗೆ-ಹೊರಟು ಹೋದಳು.

* * *

## - - 26 - -

ಶಾಂತನ ಮನಸ್ಸು ಕಲಕಿ ಹೋಗಿತ್ತು. ನಮ್ಮ ಸುಮಂತನ ಮದುವೆಯ ಮಾತುಗಳ ಉಲ್ಲಾಸವಿಲ್ಲದ ಹಾಗೆ ಮಾಡಿ ಬಿಟ್ಟ ಇವನೊಬ್ಬ.... ಸುಮಂತನೂ ನಾಳೆ ಇವನಂತೆಯೇ ಆಡಿದರೆ.... ನಾಳೆ ಏನು? ಇವತ್ತೇ ಆಡಿದ್ನಲ್ಲ.... ಇದ್ದಕ್ಕಿದ್ದ ಹಾಗೆ ಆಡಲು ಕಾರಣವೇನು? ಮದುವೆಯ ಮಾತು ಅಂತಂದ್ರೆ ಅಷ್ಟು ಉದಾಸೀನವೋ ಅಥವಾ ತಮಾಷೆ ಮಾಡ್ತಿದಾನೋ ನನಗಿನ್ನು ಅರ್ಥವಾಗ್ತಿಲ್ಲ. ಈ ಧೋರಣೆ ಸರಿಯಲ್ಲ.

ಯಾರಿಗೂ ಸರಿಯಾಗಿ ಊಟ ಸೇರಲಿಲ್ಲ. ಮಲಗಿದರೂ ನಿದ್ದೆ ಹತ್ತಿರ ಸುಳಿಯಲಿಲ್ಲ..... ಎಲ್ಲರಿಗೂ ಅವರವರ ಚಿಂತೆ.

ನಾನು ಆಡಿದ ನಾಟಕ ಸ್ವಲ್ಪ ಜಾಸ್ತಿಯೇ ಆಯಿತೇನೋ ಅಂತನ್ನಿಸಿತ್ತು ಸುಮಂತನಿಗೆ. ಆದರೆ ನಾಟಕ ಇನ್ನು ಮುಗಿದಿಲ್ಲ. ಇನ್ನೂ ಬಾಕಿ ಇದೆ. ಅದನ್ನು ಹೇಗೆ ಆಡಿದರೆ ಸರಿ ಹೋಗುತ್ತದೆ ಎಂದು ಚಿಂತಿಸುತ್ತಿದ್ದ.

ಇದ್ದಕ್ಕಿದ್ದ ಹಾಗೆ, ಅಂದುಕೊಂಡಿದ್ದಕ್ಕಿಂತ ಮುಂಚೆಯೇ ಅಂಕದ ಪರದೆ ಮೇಲೆದ್ದಿದೆ... ಮಧ್ಯದಲ್ಲಿ ಈ ನಾಟಕದ ತಿರುವು ಎತ್ತ ತಿರುಗತ್ತೋ ಸುಜಾತಳಿಗೆ ಮತ್ತೂ ಮತ್ತೂ ಮುಖಭಂಗವಾಗುವುದಾದರೆ, ನಾಟಕವನ್ನು ಇಷ್ಟಕ್ಕೆ ಮುಗಿಸಿಬಿಡುವುದು

ಎಂದು ಕೊಳ್ಳುತ್ತಿದ್ದ ರಾಮಸ್ವಾಮಿ.

"ಇಲ್ಲಿಗ್ಯಾಕೆ ಬರೋಕೆ ಹೋದನೋ ನನ್ನ ಗಂಡ. ತಾನಾಗಿಯೇ ಬಂದು ಅನ್ನಿಸಿಕೊಂಡು ಹೋದದ್ದು ಯಾವ ಪುರುಷಾರ್ಥಕ್ಕೆ.... ಆದರೆ, ಅದರಿಂದ ಶಾಂತಾ ಹೆದರಿರುವುದಂತೂ ನಿಜ.... ನಾಳೆ ತನ್ನ ಮಗನೂ ಅದೇ ದಾರಿ ತುಳಿದರೆ ಏನು ಗತಿ ಅಂತ ಖಂಡಿತಾ ಚಿಂತೆಗೊಳಗಾಗಿದಾಳೆ. ಈ ಪ್ರಕರಣದ ಬಿಸಿ, ಬಿಸಿಯಾಗಿರುವಾಗಲೇ ಸುಮಂತನ ಮದುವೆಯ ಮಾತುಕತೆಗಳು ಆರಂಭಗೊಂಡು ಒಂದು ರೂಪ ತಾಳಬೇಕು. ಸಹಾಯ ಮಾಡ್ತೀನಿ ಅಂತ ಮಾತು ಕೊಟ್ಟು ಬಿಟ್ಟಿದೀನಿ, ಸುಮಂತನಿಗೆ" ವನಜಳ ಆಲೋಚನೆ ಸಾಗಿತ್ತು.

ಎಲ್ಲರೂ ಬೆಳಗಾದರೆ ಸಾಕೆಂದುಕೊಂಡು ಮಲಗಿದ್ದರು. ಎಂದಿನಂತೆ ಬೆಳಗಾಗಿತ್ತು. ದಿನಚರಿ ಪ್ರಾರಂಭವಾಗಿತ್ತು.

"ನಾನು ನಾಲ್ಕು ದಿನ ಹಾಯಾಗಿರೋಣ ಅಂತ ಬಂದೆ. ಪಾಪಿ ಸಮುದ್ರ ಹೊಕ್ಕರೆ ಮೊಳಕಾಲುದ್ದ ನೀರು ಅನ್ನೋ ಹಾಗೆ, ನನ್ನ ಖುಷಿಗೆ ನೀರು ಸುರಿಯಲು ನಿಮ್ಮಣ್ಣ ಬಂದರು. ನಿಮಗೂ ಎಲ್ಲಾ ಬೇಸರವಾಯಿತು. ಅತ್ಲಾಗೆ ನಾನೂ ಹೊರಡ್ತೀನಿ. ನನ್ನನ್ನ ಬಸ್‌ಸ್ಟ್ಯಾಂಡಿಗೆ ಬಿಟ್ಟು ಬಿಡ್ತೀಯಾ ಸುಮಂತ....." ವನಜ ಹೊಸರಾಗವನ್ನು ಎತ್ತಿದಳು.

"ನೀವು ಈಗಲೇ ಊರಿಗೆ ಹೊರಡಬೇಡಿ ಅತ್ತೆ. ನನ್ನ ಮದುವೆಯಾಗುವವರೆಗೂ ನೀವು ಇಲ್ಲೇ ಇರಬೆಕು." ಶಾಂತಳ ಮುಖ ಚಿಕ್ಕದಾಯಿತು. ಭೂತ ಮೆಟ್ಟಿದವರ ತರಹ ಇವನೇಕೆ ಹೀಗೆ ಆಡುತ್ತಿದಾನೆ ಅಂತನ್ನಿಸಿತ್ತು. ಆದರೂ ಸುಮ್ಮನಿದ್ದಳು.

"ನಿಮ್ಮ ನಿಮ್ಮ ಮನೆಯ ವಿಷಯದಲ್ಲಿ ನಾನೇಕೆ ತಲೆ ಹಾಕಲಿ? ನನ್ನದೇ ನೂರೆಂಟು ಸಮಸ್ಯೆಗಳಿವೆ."

"ನಿಮ್ಮ ಸಮಸ್ಯೆಗೆ ನಾನು ಪರಿಹಾರ ಹುಡುಕಿ ಕೊಡ್ತೀನಿ."

"ಸರಿ ಹಾಗಾದ್ರೆ, ಈಗ ಏನು ನಿರ್ಧಾರ ಮಾಡಿದೀಯ?"

"ನಾನು ರಾತ್ರಿಯೆಲ್ಲಾ ಯೋಚಿಸಿದೆ. ಅಮ್ಮನಿಗೆ ಬೇಜಾರಾಗಬಾರದೆಂದು, ರಾಧಮ್ಮನ ಮನೇಲಿರುವ ಹುಡುಗಿಯನ್ನೇ ಮದುವೆಯಾಗಿ ಬಿಡೋಣ ಅಂತ ತೀರ್ಮಾನಿಸಿ ಬಿಟ್ಟಿದೀನಿ" ಅವನ ದನಿಯಲ್ಲಿ ತಮಾಷೆ ಕಂಡು ಬರಲಿಲ್ಲ.

ಶಾಂತ, ಆಂ ಎಂದು ಬಾಯಿ ಬಿಟ್ಟು ಮೂಗಿನ ಮೇಲೆ ಬೆರಳಿಟ್ಟಳು.

"ಯಾಕೆ ಮನಸ್ಸು ಬದಲಾಯಿಸಿಬಿಟ್ಟೆಯಾ?"

"ಹುಂ. ನಾನು ಇಷ್ಟ ಪಟ್ಟ ಹುಡುಗಿ ಅಮ್ಮನಿಗೆ ಇಷ್ಟವಾಗಲಿಲ್ಲ... ಹೇಗೂ ರಾಧಮ್ಮನ ಮನೇಲಿರೋ ಹುಡುಗಿ ಅಮ್ಮನಿಗೆ ಇಷ್ಟವಾಗಿದಾಳೆ. ಅವಳನ್ನೇ ಮದುವೆಯಾಗ್ತೀನಿ"

"ನಾನೆಲ್ಲಿ ನನಗೆ ಇಷ್ಟ ಅಂತ ಹೇಳಿದೆ? ಅತಿ ಅತಿ ಆಡಬೇಡ....."

"ನೀವೇ ಹೇಳಿ ಅತ್ತೆ ಅಮ್ಮ ಹಾಗೆ ಹೇಳಲಿಲ್ವಾ?"

"ಹೌದು. ನಿಮ್ಮಮ್ಮ ಹಾಗೇ ಹೇಳಿದ ನೆನಪು.... ನಾನು ಆ ಹುಡುಗೀನ ತಂದು ನಿನ್ನ ಕೊರಳಿಗೆ ಕಟ್ತೀನಿ ಅಂತ...." ವನಜ ಒತ್ತಿ ನುಡಿದಳು.

"ಅದು ನಾನು ರೋಷದಲ್ಲಿ ಆಡಿದ ಮಾತು. ಅದಕ್ಕೇನು ಬೆಲೆ?"

"ರೋಷದಲ್ಲಿ ಆಡಿದರೂ, ಅದೂ ಮಾತೇ.... ಇನ್ನು ನನಗೆ ಒತ್ತಾಯ ಮಾಡಬೇಡ. ನಿನಗೋಸ್ಕರ ನನ್ನ ಅನಿಸಿಕೆಯನ್ನು ಬದಲಾಯಿಸಿಕೊಂಡಿದೀನಿ. ಆದಷ್ಟು ಬೇಗ ಆ ಹುಡುಗಿಯವರ ಮನೆಯವರೊಂದಿಗೆ ಮಾತನಾಡಿ, ಮದುವೆ ಮಾಡಿಸುವುದು ನಿನ್ನ

ಜವಾಬ್ದಾರಿ. ಈಗ ನಾನು ಆಫೀಸಿಗೆ ಹೋಗ್ತಾ ಇದೀನಿ. ಸಾಯಂಕಾಲದ ಹೊತ್ತಿಗೆ ಒಂದು ಇತ್ಯರ್ಥವಾಗಬೇಕು." ತಿಂಡಿ ಕಾಫಿ ಮುಗಿಸಿ ಸುಮಂತ ಹೊರಟೇ ಬಿಟ್ಟ, ಕೈ ಬೀಸುತ್ತಾ.

ಶಾಂತಳಿಗೆ ದಿಕ್ಕು ತೋಚದಂತಾಗಿತ್ತು. ಇದ್ಯಾವ ರೀತಿಯ ಹೊಸ ಸಂಕಟ ದೇವರೇ. ನಾನು ಮದುವೆಯ ಮಾತನ್ನು ಎತ್ತಿದ್ದೇ ತಪ್ಪಾಯಿತೇ ಹಾಗಾದರೆ.... ಏನೋ ಆಡಿದೆನಪ್ಪಾ...

"ನೀವೇ ನೋಡಿದ್ರಲ್ಲ ಅತ್ತಿಗೆ. ನೆನ್ನೆಯವರೆಗೂ ಸರಿಯಾಗಿದ್ದ. ಇದ್ದಕ್ಕಿದ್ದ ಹಾಗೇ ಇವನಿಗೇನಾಯ್ತು ಅಂತ ನನಗಂತೂ ಅರ್ಥವಾಗ್ತಿಲ್ಲ. ನಂಗಂತೂ ತುಂಬಾ ಭಯವಾಗ್ತಿದೆ..... ಮದುವೆ ಎಂಬ ಸುದ್ಧಿಯ ಹೆಸರನ್ನೇ ಎತ್ತುತ್ತಿರಲಿಲ್ಲ. ಈಗ, ನೆನ್ನೆ ನೋಡಿದರೆ ಹಾಗಾಡಿದ, ಈಗ ನೋಡಿದರೆ, ಹೀಗಾಡಿದ... ಯಾವುದಾದರೂ ಹುಡುಗೀನ ಪ್ರೀತಿಸಿ, ಅವಳನ್ನೇ ಮದುವೆಯಾಗ್ತೀನಿ ಅಂತ ಹೇಳಿದ್ರೂ ನನಗೆ ಇಷ್ಟು ವ್ಯಥೆಯಾಗ್ತಿರಲಿಲ್ಲ."

ಶಾಂತಳಿಗೆ ತಿಳಿಯದಂತೆ ರಾಮಸ್ವಾಮಿ ವನಜಳ ಕಡೆ ನೋಡಿ ಮುಗುಳ್ನಕ್ಕ.

"ಇನ್ನೊಂದೆರಡು ದಿನ ಕಳೆದರೆ ಹಾಗೆ ಮಾಡಿದರೂ ಮಾಡಿದನೇ..... ಯಾರನ್ನೋ ಕರೆತಂದು, ನಾನು ಇವಳನ್ನೇ ಮದುವೆಯಾಗ್ತೀನಿ ಅಂತ ಹೇಳಿದರೆ ಆಗ ಏನು ಮಾಡ್ತೀಯ?"

"ನಂಗೊತ್ತಿಲ್ಲ ಅತ್ತಿಗೆ..... ಮದುವೇನೇ ಬೇಡ ಹಾಗೇ ಇದ್ದು ಬಿಡು ಅಂತ ಹೇಳಿ ಬಿಡ್ತೀನಿ ಅಷ್ಟೇ.... ಇದೇನು ಹುಡುಗಾಟ ಇವನದ್ದು...."

"ಅವನ ಪಾಡಿಗೆ ಅವನು, ಅವಳನ್ನೇ ಕೋರ್ಟಿನಲ್ಲಿ ಮದುವೆಯಾಗಿ ಮನೆಗೆ ಕರೆದುಕೊಂಡು ಬರ್ತಾನೆ ಅಷ್ಟೇ..... ಅಕ್ಕಪಕ್ಕದವರಿಗೆಲ್ಲ ತಿಳಿಯುತ್ತೆ. ತಮತಮಗೆ ತಿಳಿದಂತೆ ಮಾತಾಡ್ತಾರೆ. ಹುಡುಗಾಟದಲ್ಲೇ ಮುಗಿಯುತ್ತೆ ಅಷ್ಟೆ."

"ಅಂತೂ ನನ್ನನ್ನು ಸಮಸ್ಯೆಯ ಸುಳಿಗೆ ಸಿಕ್ಕಿಸಿ ಬಿಟ್ಟ. ನಾವು ಮಕ್ಕಳು ಮಕ್ಕಳು ಅಂತ ಮುಚ್ಚಟೆ ಮಾಡೋದು. ಇವಕ್ಕೆ ನಮ್ಮ ಬಗ್ಗೆ ಏನೂ ಅನ್ನಿಸಲ್ಲ....."

"ಅದಕ್ಕೇ ಅವರವರ ಆಸೆಗೆ ಬಿಟ್ಟು ಬಿಡೋದೇ ಒಳ್ಳೆಯದು" ರಾಮಸ್ವಾಮಿ ನುಡಿದಾಗ ಸಿಡಿದಳು.

"ನೀವು ಸುಮ್ಮನಿರಿ. ನಿಮ್ಮಿಂದಲೇ ಇಷ್ಟೆಲ್ಲಾ ಆದದ್ದು..."

"ನಾವು ಅವತ್ತೇ ಹೇಳಿದೆ, ಶಾಸ್ತ್ರಿಗಳ ಮನೆಯಿಂದ ತಂದ ಫೋಟೋಗಳು ಚೆನ್ನಾಗಿಲ್ಲ. ಬೇರೆ ಇನ್ನೊಂದ್ನಾಲ್ಕು ತನ್ನಿ ಅಂತ."

"ಆಚಿ ಕಳಿಸಿದ ಫೋಟೋನ್ನಲ್ಲವೇನೇ ಅವನು ಒಪ್ಪಿರುವುದು....."

"ಅದನ್ನು ಈಗ ಕೈ ಬಿಟ್ಟ..... ರಾಧಮ್ಮನ ಮನೇಲಿರೋ ಹುಡುಗೀನ ಒಪ್ಪಿದಾನಂತೆ" ವನಜ ಬೇಕೂಂತ ಒತ್ತಿ ನುಡಿದಳು.

"ಅವಳನ್ನ ನೋಡಿದಾನಂತಾ?"

"ನೋಡಿಲ್ಲ, ನನ್ನ ಮೇಲಿನ ರೋಷಕ್ಕೆ ಹಾಗೆ ಹೇಳಿದಾನೆ. ಎಲ್ಲರೂ ನಾಲ್ಕು ದಿನ ಸುಮ್ಮನಿದ್ದು ಬಿಡಿ. ದಾರಿಗೆ ಬರ್ತಾನೆ"

"ಅವನಿಗೂ ಏನೋ ಹಠ, ಸಾಯಂಕಾಲ ಅದೇ ವಿಷಯ ಕೇಳಿದ್ರೆ ಏನು ಮಾಡ್ತೀಯ?"

"ಅವನು ಬರೋ ಹೊತ್ತಿಗೆ ನಾನು ಅತ್ತಿಗೆಯ ಜೊತೆ ಊರಿಗೆ ಹೊರಟು

ಹೋಗಿರ್ತೀನಿ. ನಾನು ಬರೋ ಹೊತ್ತಿಗೆ ಎಲ್ಲಾ ಮರೆತಿರ್ತಾನೆ"

"ಬೇಡ ಶಾಂತಾ.... ಗಂಡು ಹುಡುಗರು ಹಾಗೆಲ್ಲಾ ಬೇಗ ಎಲ್ಲವನ್ನು ಮರೆಯುಲ್ಲ. ಏನೋ ಹಠಕ್ಕೆ ಬಿದ್ದಿದಾನೆ.... ನಿನ್ನ ಅಣ್ಣನ ತರಹ, ತಿಳಿಯದಂತೆ, ಯಾವುದೋ ಹುಡುಗಿಯನ್ನು ಮದುವೆಯಾಗಿ, ಕರೆ ತಂದು, ಇವಳೇ ನಿನ್ನ ಸೊಸೆ ಅಂತ ಹೇಳಿದ್ರೆ....."

"ಅದೆಲ್ಲಾ ಅಷ್ಟು ಸುಲಭವಲ್ಲ...... ಇವರು ಇರ್ತಾರಲ್ಲ.... ಇವರು ಮಗನಿಗೆ ಸರಿಯಾದ ತಿಳುವಳಿಕೆ ಹೇಳಿ ಅವನ ಮನಸ್ಸನ್ನು ಬದಲಾಯಿಸಲಿ...."

"ಅವನು ನನ್ನ ಮಾತು ಕೇಳ್ತಾನೆ ಅಂತ ಏನು ಗ್ಯಾರಂಟಿ?"

"ನೀವು ಅಪ್ಪ ಮಗ ಒಂದು..... ಈಗ ನೀವೇ ಅವನನ್ನು ದಾರಿಗೆ ತರಬೇಕು." ವನಜ ನಕ್ಕಂತೆ ಮಾಡಿ ನುಡಿದಳು.

"ನಿನಗೆ ನಿನ್ನ ಗಂಡನ ಮೇಲೇ ನಂಬಿಕೆ ಇರಲಿಲ್ಲ. ಅದ್ಯಾರೋ ಸುಜಾತಾ ಅನ್ನೋ ಹುಡುಗೀನ ಭಾವ ಮನೆಗೆ ಕರೆದುಕೊಂಡು ಬಂದಿದ್ರು ಅಂತ ಒಂದು ಹಗರಣ ಮಾಡಿದ್ದೆ. ಅಂತ ನೀನೇ ಹೇಳಿದ್ದೆ....." ಸುಮ್ಮನಿರು ಎನ್ನುವಂತೆ ಶಾಂತಾ ಸಂಜ್ಞೆ ಮಾಡಿದರೂ ವನಜ ಮುಂದುವರೆಸಿದಳು.

ಅವಳು ಭಾವನ ಅಕ್ಕನ ಮಗಳಂತೆ.... ಅವಳ ಜೊತೆ ನಿನ್ನ ಗಂಡ ಅನೈತಿಕ ಸಂಬಂಧ ಇಟ್ಟುಕೊಂಡಿದ್ದರು ಅಂತ ಅವಳನ್ನು ಬೈದು ಕೂಗಾಡಿ, ಮನೆಯಿಂದಾಚೆ ಕಳಿಸಿದ್ದೆಯಂತೆ..... ಅಂಥ ಭಾವನ ಮೇಲೆ ಈಗ ನಿನಗೆ ನಂಬಿಕೇನ? ಆ ಸಿಟ್ಟು ಭಾವನಿಗೆ ಈಗಲೂ ಇರಬಹುದು..... ತಂದೆ ಮಗ ಒಂದಾಗಿ, ಅವರವರೇ ಏನೇನು ನಿರ್ಧಾರ ತಗೋತಾರೋ....." ಶಾಂತ ತಲೆ ತಗ್ಗಿಸಿದಳು. ತಾನೆಂದೂ ಈ ವಿಷಯವನ್ನು ವನಜಳಿಗೆ ಹೇಳಿದ ನೆನಪಿಲ್ಲ. ನಾನೇ ಹೇಳಿದ್ದು ಅಂತ ಅತ್ತಿಗೆ ರಾಜಾರೋಷವಾಗಿ ಹೇಳುತ್ತಿದಾಳೆ. ಗಂಡನೆದುರಿಗೇ ಹೀಗೆಲ್ಲಾ ಆಡುತ್ತಿದಾಳೆ.

"ಸುಮ್ಮನಿರಮ್ಮ ವನಜಾ.... ನೀನೂ ಏನೇನೋ ಆರೋಪ ಹೊರಿಸಬೇಡ. ನಾನು ಅಂತಹ ಮನುಷ್ಯನಲ್ಲ. ಅವಳು ನಿಜವಾಗಿಯೂ ನನ್ನ ಅಕ್ಕನ ಮಗಳೇ.... ಮನೆಗೆ ಬಂದ ಹುಡುಗಿಗೆ ಅವಮಾನ ಮಾಡಿ ಕಳಿಸಿ ಬಿಟ್ಟಳು. ಅದೇ ಇವಳ ಜಾಯಮಾನ. ನೆನ್ನೆ ದಿನ ನಿನ್ನ ಗಂಡ ತನ್ನ ಕುಟುಂಬದೊಂದಿಗೆ ಬಂದಿದ್ನಲ್ಲ. ಪಾಪ ಅವನಿಗೂ ಮೂರು ಮೂರು ಹೆಣ್ಣು ಮಕ್ಕಳು. ನನಗಂತೂ ಅವನ ಬಗ್ಗೆ ತುಂಬಾ ಮರುಕ ಆಗ್ತಿದೆ. ಹೇಗಾಡಿಬಿಟ್ಟಳು. ನೀನೇ ನೋಡಿದ್ಯಲ್ಲ."

"ನಿಮಗೇಕೆ ಮರುಕ? ನೀವು ಅದೇ ಜಾತಿಗೆ ಸೇರಿದೋರು"

"ನೋಡಿದ್ಯಾ ವನಜ ಹೇಗಾಡ್ತಾಳೆ. ಅಂಥ ಕಳ್ಳ ಸಂಬಂಧ ಇದ್ದಿದ್ದರೆ, ನಾನು ಇವಳ ಜೊತೆ ಇರ್ತಿದ್ನಾ. ಎಂದೋ ಓಡಿ ಹೋಗಿರುತ್ತಿದ್ದೆ. ನಾನು ಕಾಯಾ, ವಾಚಾ, ಮನಸಾ ಇವಳ ಗಂಡನಾಗಿದೇನೆ. ಇದು ಅವಳಿಗೆ ಅರ್ಥವಾಗ್ತಿಲ್ಲ ಅಷ್ಟೇ."

"ನನಗೆ ಗೊತ್ತು ಭಾವ... ನೀವು ಅಂತಹವರಲ್ಲ ಅಂತ. ಆದರೆ ಸುಜಾತಳ ಬಗ್ಗೆ ನೀವು ಮೊದಲೇ ಯಾಕೆ ಶಾಂತನಿಗೆ ಹೇಳಿರಲಿಲ್ಲ?" ಕೈ ಕುಟ್ಟಿದಳು.

"ಅಯ್ಯೋ ಅದೊಂದು ದೊಡ್ಡ ಕತೆ......" ಎನ್ನುತ್ತಾ ಸರಸ್ವತಿಯ ಪುರ್ಥಾಣ ಇತಿಹಾಸಗಳನಲು ಹೇಳಿದ.

"ನೋಡಿ ಅತ್ತಿಗೆ ಎಂತೆಂಥೋರು ಇದಾರೆ ಅವರ ಮನೆಯ ಕಡೆ....."

"ಸರಸ್ವತಿ ಮಾಡಿದ ತಪ್ಪಿಗೆ ನಿನ್ನ ಗಂಡನನ್ನ ಅಂದರೆ ಏನು ಉಪಯೋಗ? ಈಗ ನನ್ನ ಗಂಡ ಮಾಡಿದ ತಪ್ಪಿಗೆ ನೀನು ನನ್ನನ್ನು ಅಂದ ಹಾಗಾಯ್ತು...."

"ನಿಮ್ಮನ್ನು ತಪ್ಪು ಅಂತ ಅಂದೋರಿಗೆ ಎಕ್ಕಡದಲ್ಲಿ ಹೊಡೆಯಬೇಕು."

"ಹಾಗೇ ನನ್ನನ್ನು ತಪ್ಪು ಅಂತ ಅನ್ನೋರಿಗೆ ಪೊರಕೆ ತಗೊಂಡು ಹೊಡೆಯಬೇಕು" ರಾಮಸ್ವಾಮಿ ನುಡಿದ.

"ನಿಮ್ಮ ತಪ್ಪನ್ನು ಮುಚ್ಚಿಟ್ಟುಕೊಳ್ಳೋಕೆ ನನ್ನನ್ನು ಹೊಡಿತೀರಾ? ಹೊಡೀರಿ ಹೊಡೀರಿ...." ಶಾಂತ ಮುಂದೆ ಮುಂದೆ ಬಂದಳು.

"ಸುಮ್ಮನಿರು ಶಾಂತ, ಅತಿಯಾಯ್ತು ನಿಂದು. ಭಾವನ ಜೊತೆ ಮೂವತ್ತು ವರ್ಷಕ್ಕೂ ಮೇಲೆ ಸಂಸಾರ ನಡೆಸಿದೀಯ. ಅವರ ಸಂಪಾದನೆ, ಹಣಕಾಸು ಎಲ್ಲಾ ನಿನ್ನ ಕೈಲೇ ಇತ್ತು... ಅದೆಲ್ಲಾ ನಿನಗೇ ಗೊತ್ತು. ಭಾವ ಹಾಗೆಲ್ಲ ನಿನಗೆ ಮೋಸ ಮಾಡೋರಾಗಿದ್ದಿದ್ರೆ ನಿನ್ನ ಕೈಗೆ ಹಣ ಕೊಡ್ತಿದ್ರಾ.... ಎರಡೆರಡು ಸಂಸಾರ ನಡೆಸೋದು ಸುಲಭವಲ್ಲ. ನಿನ್ನ ಅಣ್ಣನ್ನ ಕೇಳು ಹೇಳ್ತಾರೆ. ಹೇಗೆ ಪರದಾಡ್ತಾರೆ ಅಂತ.... ಇಲ್ಲಿ ನಾನು ಒಬ್ಬಳೇ.... ನನ್ನ ಜೀವನ ಹೇಗೋ ನಡೀತಿದೆ. ನನ್ನ ತವರು ಮನೆಯವರು ಕೊಟ್ಟ ಹಣವಿದೆ.... ನನ್ನ ಸವತಿಯ ಸಂಸಾರ ದೊಡ್ಡದು... ನಿನ್ನ ಅಣ್ಣ ಏನು ಸಂಪಾದಿಸ್ತಾರೋ ಅದನ್ನೆಲ್ಲ ಅಲ್ಲಿಗೇ ಸುರೀತಾರೆ.... ನನ್ನನ್ನು ಕಟ್ಟಿಕೊಂಡ ತಪ್ಪಿಗೆ ನನ್ನ ಖರ್ಚಿಗೂ ಹಣ ಕೊಡ್ತಾರೆ. ಅದು ಅವರ ಕರ್ಮ. ಇಬ್ಬರು ಹೆಂಗಸರನ್ನು ಏಕಕಾಲದಲ್ಲಿ ನಿಭಾಯಿಸುವುದು ಸುಲಭವಲ್ಲ. ನೀನು ನನ್ನ ಹಾಗಲ್ಲ.... ನಿನಗೆ ಸಂಸಾರವಿದೆ..... ನಿನ್ನ ಆಸೆಗಳಿವೆ. ಆದರೆ ನೀನು ತುಂಬಾ ಸ್ವಾರ್ಥಿ."

ಶಾಂತ ಮುಖ ಮುಚ್ಚಿ ಅಳತೊಡಗಿದಳು. ಇದುವರೆಗೆ ಯಾರೂ ಅವಳನ್ನು ಸ್ವಾರ್ಥಿ ಅಂತ ಅಂದಿರಲಿಲ್ಲ. ತನ್ನ ಕೈಗೆ ಗಂಡ ಸಂಸಾರದ ನೊಗವನ್ನು ಕೊಟ್ಟಿದ್ದ. ರಸಿಕ ಪ್ರೇಮಿಯಂತೆ, ಎಲ್ಲಾ ವಿಷಯಗಳಲ್ಲೂ ಚೆನ್ನಾಗಿ ನೋಡಿಕೊಂಡಿದ್ದ. ತನ್ನದೇ ದರ್ಬಾರು ಮನೆಯಲ್ಲಿ. ಆದರೂ ತನಗೇಕೆ ತನ್ನ ಗಂಡನ ಮೇಲೆ ನಂಬಿಕೆ ಇರಲಿಲ್ಲ? ಹಂಗಿಸಿ ಅಂದದ್ದೂ ಉಂಟು. ತಾನು ಕಾರಣವಿಲ್ಲದೇ ಗಂಡನ ಮೇಲೆ ಆರೋಪ ಹೊರಿಸಿ ಅಂದಿದ್ದು ಸರಿಯಲ್ಲ ಅಂತ ಅನ್ನಿಸಿದರೂ, ಈಗ ಅದನ್ನು ಒಪ್ಪಿಕೊಳ್ಳಲು ಸಿದ್ಧಳಿರಲಿಲ್ಲ. ಈಗ ಗಂಡನ ಚಿಂತೆಗಿಂತ, ಮಗನ ಚಿಂತೆ ಅಧಿಕವಾಗಿತ್ತು. ಅತ್ತಿಗೆ ಹೇಳುವಂತೆ, ಅವನು ಗುಟ್ಟಾಗಿ ಯಾರನ್ನಾದರೂ ಮದುವೆಯಾಗಿ ಬಿಟ್ಟರೆ ಎಂಬ ಆತಂಕ ಕಾಡತೊಡಗಿತು.

ಒಂದೇ ಮಾತಿನಲ್ಲಿ ತನ್ನನ್ನು ಸ್ವಾರ್ಥಿ ಅಂತ ಅಂದು ಬಿಟ್ಟಳಲ್ಲ ಈ ಅತ್ತಿಗೆ.. ನಾನು ಈ ಸಂಸಾರಕ್ಕೆ ತಾನೇ ಸ್ವಾರ್ಥಿಯಾದದ್ದು... ಗಂಡ ನನ್ನವನೇ ಆಗಿರಲಿ ಅಂತ ಆಸೆ ಪಟ್ಟರೆ ಅದು ಸ್ವಾರ್ಥತನವೇ..... ಮಕ್ಕಳು, ನನ್ನ ಆಸೆಗೆ ಬೆಲೆ ಕೊಡಲಿ ಅಂತ ಇಚ್ಛೆ ಪಟ್ಟರೆ ಅದು ಸ್ವಾರ್ಥತನವೇ....? ಬಿಕ್ಕಿ ಬಿಕ್ಕಿ ಶಾಂತ ಅಳಲಾರಂಭಿಸಿದಾಗ, ವನಜ ಅವಳ ಬಳಿ ಕುಳಿತಳು.

"ನಿನ್ನ ಮನಸ್ಸಿಗೆ ನೋವನ್ನುಂಟು ಮಾಡಬೇಕೂಂತ ನಾನು ಇಷ್ಟು ಮಾತನ್ನಾಡಲಿಲ್ಲ ಶಾಂತ. ಅಲ್ಲದೇ ನನಗೆ ಯಾವ ಹಕ್ಕೂ ಇಲ್ಲ. ನನ್ನ ಹಾಗೆ, ನಿನ್ನ ಗಂಡ ಸಹ ನಿನ್ನನ್ನು ಅಂದಿರಲಾರರು ಅಲ್ವಾ? ಸುಮ್ಮನೇ ಚಿಂತಿಸಬೇಡ.... ಏಳು...."

"ನನಗೆ ಇವರ ಬಗ್ಗೆ ಯಾವ ಚಿಂತೆಯೂ ಇಲ್ಲ ಅತ್ತಿಗೆ. ನನ್ನ ಚಿಂತೆಯೆಲ್ಲಾ ಸುಮಂತನದೇ....."

"ಅವನೂ ನಿನ್ನ ಮಗನೇ. ನಿನಗೆ ಅವನ ಮೇಲೆ ನಂಬಿಕೆ ಇರಬೇಕು."

"ನಂಬಿಕೆ ಇದೆ. ನಾನು ಇನ್ನು ಅವನ ಮದುವೆಯ ಮಾತಿಗೇ ಬರುಲ್ಲ. ಏನಾದರೂ ಮಾಡಿಕೊಳ್ಳಲಿ"

"ಹಾಗಂದ್ರೆ ಹೇಗೆ? ನೀನು ಒಪ್ಪದೇ ಹೇಗೆ ಮದುವೆ ನಡೆಯುತ್ತೆಹೇಳು."

"ನೀವೇ ಹೇಳಿ ಅತ್ತಿಗೆ.... ರಾಧಮ್ಮನ ಮನೇಲಿರೋ ಹುಡುಗೀನ ನಾನು ಹೇಗೆ ಸೊಸೆ ಅಂತ ಒಪ್ಪಿಕೊಳ್ಳಲಿ? ಏನೋ ಅಂದುದೇ ನಡಿಬೇಕೆ?"

"ಯಾಕೆ ಏನಾಗಿದಾಳೆ? ಓದಿದಾಳೆ. ಕೆಲಸದಲ್ಲಿದಾಳೆ. ನೋಡೋಕು ಚೆನ್ನಾಗಿದಾಳೆ.... ಈ ಕಾಲದಲ್ಲಿ ಇದಕ್ಕಿಂತ ಇನ್ನೇನು ಬೇಕು.....?"

"ಅವರ ಮನೆತನ, ಅಂತಸ್ತು.... ಒಂದೂ ತಿಳಿಯದಲ್ಲ."

"ತಿಳಿಯುಕ್ಕೇನು ಕಷ್ಟ? ರಾಧಮ್ಮನ ಕೇಳಿದರೆ ಹೇಳ್ತಾರೆ. ಒಂದ್ಮಾತು, ರಾಧಮ್ಮನ್ನ ನೀನು ಎಷ್ಟೋ ವರ್ಷದಿಂದ ಬಲ್ಲೆ. ಅವರ ಮನೆಯಲ್ಲಿ ಆ ಹುಡುಗಿ ಇರಬೇಕಾದರೆ, ಸರಿಯಾದ ಮನೆತನದವಳೇ ಇರಬೇಕು ಅಲ್ವಾ? ಇನ್ನು ಅಂತಸ್ತು... ಅದನ್ನು ಕಟ್ಟಿಕೊಂಡು ನಮಗೇನಾಗಬೇಕಾಗಿದೆ? ಎಷ್ಟೋ ಸಲ ಮನೆ ಮನೆಯಲ್ಲೇ ಅಂತಸ್ತು ಬೆಳೆಸಿಕೊಂಡು, ಅಪರಿಚಿತರಂತೆ ಓಡಾಡ್ತಾರೆ....."

"ಅಂತೂ ನನಗೇ ತಿಳುವಳಿಕೆ ಹೇಳ್ತಿದೀರಿ...."

"ನಾನೂ ನೀನೂ ಸಮಾನರು, ಒಂದೇ ಕುಟುಂಬದವರು. ನೀನು ನನ್ನ ನಾದಿನಿ ಅನ್ನೋದಕ್ಕಿಂತ ಸ್ನೇಹಿತೆಯ ತರಹ..... ನಿನ್ನೊಂದಿಗೆ ಸಲುಗೆಯಿಂದ ಮಾತನಾಡಬಲ್ಲೆ.... ಸುಮಂತ ಎಷ್ಟಾಗಲೀ ಚಿಕ್ಕವನು, ಈ ಕಾಲದವನು....."

"ಒಂದ್ಮಾತು ಹೇಳಿ ಅತ್ತಿಗೆ, ನಿಮಗೇ ಒಬ್ಬ ಈ ವಯಸ್ಸಿನ ಮಗನಿದ್ದು ಅವನೂ ಹೀಗೇ ವರ್ತಿಸಿದ್ದರೆ ಏನು ಮಾಡ್ತಿದ್ರಿ?"

"ನಾನು ಹೇಳ್ಲಾ.... ಅವನ ಆಸೆಗೇ ಬಿಟ್ಟು ಬಿಡ್ತಿದ್ದೆ..."

"ಇಲ್ಲ ಅತ್ತಿಗೆ ಸುಳ್ಳು ಹೇಳ್ತಿದೀರಿ... ನನ್ನ ಹಾಗೇ ನೀವೂ ಸ್ವಾರ್ಥಿಯಾಗಿರುತ್ತಿದ್ರಿ...."

"ಇರಬಹುದೇನೋ..... ಅದಕ್ಕೇ ದೇವರು ಹೀಗೆ ಕೈ ಕೊಟ್ಟ. ನಾನು ಸುಮಂತನನ್ನೇ ನನ್ನ ಮಗ ಅಂತ ಅಂದುಕೊಂಡಿದೀನಿ. ನಿಜ ಹೇಳ್ತೀನಿ. ನಿನಗೆ ಇನ್ನು ಒಂದೆರಡು ಮಕ್ಕಳಿದ್ದಿದ್ದರೆ, ನಾನು ಒಂದು ಮಗೂನ ಸಾಕಿ ಕೊಳ್ತಿದ್ದೆ... ಈಗ ನಾನು ಸುಮಂತನ್ನ ಕೇಳಿದರೆ ನೀನು ಕೊಡ್ತೀಯಾ.......?" ವನಜ ತಮಾಷೆಯ ಮಾತುಗಳನ್ನಾಡಿ ಶಾಂತಳನ್ನು ಸಮಾಧಾನಗೊಳಿಸಿದಳು.

ಈಗೇನು ಮಾಡೋದು? ಮುಂದೇನು? ಇದೇ ಆಲೋಚನೆಗಳಲ್ಲಿ ಸಮಯ ಕಳೆಯಿತು. "ತಿಂಡಿಯೆಲ್ಲಾ ಆರಿ ತಣ್ಣಗಾಗಿ ಹೋಯ್ತು. ಭಾವಂಗೂ ತಿಂಡಿ ಕೊಡಲಿಲ್ಲ ನೀನು" ಎಂದು ಆಕ್ಷೇಪಿಸಿ ತಾನೇ ತಿಂಡಿಯನ್ನು ಬಿಸಿ ಮಾಡಿ ಕೊಟ್ಟಳು. ಶಾಂತಳಿಗೂ ಕೊಡಲು ಹೋದಾಗ, ಅವಳಿಗೆ ಇನ್ನು ದುಗುಡ ಕಡಿಮೆ ಆಗಿರಲಿಲ್ಲ.

"ನಂಗೆ ಬೇಡ..." ಎಂದು ಮುಖ ತಿರುಗಿಸಿದಳು.

"ಅಯ್ಯೋ ಸುಮ್ಮನೆ ತಿನ್ನು, ಸಂಸಾರದಲ್ಲಿ ದಿನ ಬೆಳಗಾದರೆ, ಮಾತು ಹಗರಣ ಇದ್ದದ್ದೇ. ಹಾಗಂತ ದಿನಾ ಉಪವಾಸ ಮಾಡುಕ್ಕಾಗುತ್ತಾ? ನನ್ನನ್ನು ನೋಡು ಎಲ್ಲಾ ಮರೆತು ಹಾಯಾಗಿಲ್ವಾ?"

"ನಿಮಗೆ ನಿಮ್ಮ ಗಂಡನಿಂದ ಬೇಸರವಾಗಿದೆ...... ನನ್ನ ಮಗ ನನಗೆ ತಿರುಗಿ ಬಿದ್ದಿದ್ದಾನಲ್ಲ.... ನಾನೇನು ಮಾಡಲಿ? ಅವನು ಮನೆಗೆ ಬಂದ ಮೇಲೆ ಮತ್ತೆ ಹೀಗೇ ಅಸಂಬದ್ಧ ಮಾತುಗಳನ್ನಾಡಿದರೆ, ನನ್ನ ಹೊಟ್ಟೆ ಉರಿದು ಹೋಗುತ್ತೆ.... ನನ್ನ ಸಂಕಟ ಯಾರಿಗೂ ಅರ್ಥವಾಗುಲ್ಲ."

"ರಾಧಮ್ಮನ ಮನೇಲಿರೋ ಹುಡುಗಿಯಾಗಲೀ, ಆ ಫೋಟೋದಲ್ಲಿರುವ ಹುಡುಗಿಯಾಗಲೀ, ತೀರಾ ಏನೂ ಕಳಪೆಯಲ್ಲ, ವಿದ್ಯಾವಂತೆ, ಕೆಲಸದಲ್ಲಿದಾಳೆ, ನೋಡೋಕೆ ಚೆನ್ನಾಗಿದಾಳೆ... ನಿನಗ್ಯಾಕೆ ಏನೋ ಅನುಮಾನ."

"ಅವರುಗಳ ಮನೆತನ, ಆಸ್ತಿ ಪಾಸ್ತಿ ಬಗ್ಗೆ ವಿಚಾರಿಸಬೇಡವೆ? ಹಿಂದೆ ಮುಂದೆ ಏನೂ ಕೇಳದೇ, ನಾವು ನಿಮ್ಮ ಮನೆ ಹುಡುಗೀನ ಒಪ್ಪಿದೀವಿ ಅಂತ ಹೇಳೋದೆ? ಏನಂದುಕೊಳ್ತಾರೆ? ನಾವೇ ಹೇಗೆ ಮಾತನಾಡೋಕೆ ಆಗುತ್ತೆ?"

"ಏನೀಗ? ಫೋಟೋ ಕಳಿಸಿದಾರೆ, ನೋಡಿದೀವಿ, ಒಪ್ಪಿಗೆಯಾದರೆ ಮುಂದುವರೆಯುವುದರಲ್ಲಿ ತಪ್ಪೇನು? ಪಕ್ಕದ ಮನೇಲಿರೋ ಹುಡುಗಿ, ಆಗ ಈಗ ನೋಡಿರುತ್ತೇವೆ. ಚೆನ್ನಾಗಿದಾಳೆ ಅಂತ ಗೊತ್ತಿದೆ. ಇನ್ನೇನು? ಯಾರೇನನ್ನುತ್ತಾರೆ?"

"ಪಕ್ಕದ ಮನೇಲೇ ಇದ್ರೂ ನಾನಂತೂ ಆ ಹುಡುಗೀನ ಸರಿಯಾಗಿ ನೋಡಿಯೇ ಇಲ್ಲ. ರಾಧಮ್ಮ ನಮ್ಮ ಪೈಕಿಯವರೇ ಅಂತ ಅಷ್ಟು ಗೊತ್ತು..... ಅವಳ ತಂದೆ, ತಾಯಿ, ಎಲ್ಲಿದಾರೆ ಏನು ಕತೆ ಒಂದೂ ತಿಳಿದಿಲ್ಲವಲ್ಲ."

"ವಿಚಾರಿಸಿದರಾಯ್ತು.... ನಾನು ಹೋಗಿ ಕೇಳಿಕೊಂಡು ಬರ್ತೀನಿ."

"ಬೇಡ ಅತ್ತಿಗೆ, ನಾವಾಗಿಯೇ ಏಕೆ ಹೋಗಬೇಕು?"

"ಮತ್ತೇನು ಅವರಿಗೇನು ಕನಸು ಬಿದ್ದಿರುತ್ತಾ? ಕಡೇ ಪಕ್ಷ ನಮಗೆ ಮನಸ್ಸಿದೆ ಅಂತ ರಾಧಮ್ಮನಿಗೆ ತಿಳಿಸೋಣ. ಹಾಗೇ ಹುಡುಗಿಯ ಸ್ವಭಾವ, ಗುಣ, ನಡತೆ ಬಗ್ಗೆ ಕೇಳಿ ತಿಳಿದುಕೊಳ್ಳೋಣ....."

"ನಾನು ಬರುಲ್ಲ. ನೀವು ಬೇಕಾದರೆ ಹೋಗಿ ಕೇಳಿಕೊಂಡು ಬನ್ನಿ."

"ಸಾಯಂಕಾಲದವರೆಗೂ ಕಾಯೋಣ. ನಿನ್ನ ಮಗ ಏನು ಹೇಳ್ತಾನೆ ಅಂತ ಕೇಳಿ ಆಮೇಲೆ ಹೋದರಾಯ್ತು."

"ಏನೂ ಬೇಡ. ನಾನು ಮತ್ತೆ ಅವನನ್ನು ಏನೂ ಕೇಳುಲ್ಲ. ಅವನಿಗೆ ಏನೂ ಹೇಳುಲ್ಲ. ಏನೂ ಬೇಕಾದರೂ ಮಾಡಿಕೊಳ್ಳಲಿ."

"ಹಾಗಂದ್ರೆ ಹೇಗೆ? ನಿನ್ನ ವರಸೆ ತೆಗೆಯಬೇಡ." ಅಲ್ಲಿಯೇ ಅತ್ತಿಂದಿತ್ತ ತಿರುಗುತ್ತಿದ್ದ ರಾಮಸ್ವಾಮಿ ನುಡಿದ.

"ಏನು ಹಾಗಂದ್ರೆ? ನೀವುಗಳು ಏನು ಬೇಕಾದ್ರೂ ಆಡಬಹುದು ; ಏನು ಬೇಕಾದ್ರೂ ಮಾಡಬಹುದು....... ನನಗೆ ಮಾತ್ರ ಯಾವ ಅಧಿಕಾರವಿಲ್ಲ" ವನಜ ನಕ್ಕು ಬಿಟ್ಟಳು.

"ಇರೋ ಅಧಿಕಾರ ನಿನಗೆ ಇದ್ದೇ ಇದೆ. ಅದನ್ನು ಹಾಗೇ ಉಳಿಸಿಕೊಂಡಿರಬೇಕು ಅಂತ ಅನ್ನೋದಾದ್ರೆ....."

"ನಾನು ಎಲ್ಲರ ಮಾತಿಗೆ ತಲೆದೂಗಬೇಕು. ಹೌದು ತಾನೇ.....?"

"ಮತ್ತೆ? ಹಾಗಾದರೆ ಈಗ ಏನು ಮಾಡಬೇಕೂಂತ ಇದೀಯಾ?"

"ನೀವು.... ಯಜಮಾನ ಅಂತ ಈ ಮನೇಲಿ ಇರೋದು ಯಾತಕ್ಕೆ? ಹಾಗಲ್ಲ ಹೀಗೆ ಅಂತ ಅವನಿಗೆ ಯಾಕೆ ತಿಳುವಳಿಕೆ ಹೇಳಬಾರದು....?"

"ಹೇಳ್ತೀನಿ ಅಂತ ಇಟ್ಕೋ.... ಅವನು ಕೇಳದಿದ್ದರೆ....? ಮೊದಲ್ನಿಂದ ನನಗಿಂತ ಹೆಚ್ಚಿಗೆ ನಿನಗೇ ಗೊತ್ತು ಅವನ ಬಗ್ಗೆ....."

"ಏನು ಗೊತ್ತು? ಏನೂ ಗೊತ್ತಿಲ್ಲ.... ಗೊತ್ತಿದ್ದಿದ್ರೆ ಯಾಕಿತ್ತು ಮಾತು?...... ಅತ್ತಿಗೆ ನೀವೇ ಹೋಗಿ ಅದೇನು ಕೇಳ್ತೀರೋ ಅದೆನು ಹೇಳ್ತೀರೋ..... ನಿಮಗೆ ತೋಚಿದಂತೆ ಮಾಡಿ..... ಇವರನ್ನು ಎಳೆದುಕೊಂಡು ಹೋಗಿ" ಶಾಂತ ಅಲವತ್ತು

ಕೊಂಡು ನುಡಿದಾಗ ಇಬ್ಬರೂ ಮನದಲ್ಲೇ ನಕ್ಕರು. ಈ ಸಮಯಕ್ಕೇ ಕಾದಿದ್ದವಳಂತೆ ವನಜ ರಾಧಮ್ಮನ ಮನೆಗೆ ಹೊರಟಳು.

"ಬನ್ನೀ ಭಾವ, ಒಬ್ಬರಿಗಿಂತ ಇಬ್ಬರು ಮೇಲು" ರಾಮಸ್ವಾಮಿಯು ಬಾಗಿಲನ್ನು ದಾಟಿದ. ಶಾಂತ ಹೊರಗೆ ಸಹ ಬರಲಿಲ್ಲ. ಗೇಟಿನ ಬಳಿ ಬಂದಾಗ ರಾಮಸ್ವಾಮಿ ಪ್ರಶ್ನಿಸಿದ.

"ಏನಮ್ಮಾ ವನಜಾ.... ಈ ಕೆಲಸಕ್ಕೆ ಇಷ್ಟು ಮಾತುಗಳು ಬೇಕಿತ್ತಾ?"

"ಬೇಕಿರಲಿಲ್ಲ ನಿಜ.... ಆದರೆ ಈ ಮಾರ್ಗಕ್ಕೆ ಬರೋಕೆ.... ಈ ಮಾತುಗಳು ಅನಿವಾರ್ಯವಾಯಿತೇನೋ.... ಆದರೆ ಶಾಂತಳಿಗೆ ಆಶಾಭಂಗವಾಗಿರುವುದಂತೂ ನಿಜ. ಸುಮಂತನೂ ಈ ಪ್ರೀತಿ ಗೀತಿ ಅಂತ ಹೋಗಬಾರದಾಗಿತ್ತು."

"ಎಲ್ಲೋ ಅವರ ಮಾವನ್ನೇ ಹೋತಿರಬೇಕು......" ವನಜ ಸುಮ್ಮನಿದ್ದಳು.

ಅರ್ಧಗಂಟೆಯೊಳಗೆ ಇಬ್ಬರೂ ವಾಪಸ್ಸಾಗಿದ್ದರು. ಆದರೆ ಏನು ಮಾತುಗಳಾಯ್ತು ಅಂತ ಕೇಳಲಿಲ್ಲ. ತನಗೆ ಏನೂ ಆಸಕ್ತಿ ಇಲ್ಲವೆನ್ನುವಂತೆ ಸುಮ್ಮನಿದ್ದಳು. ವನಜ ತಾನಾಗಿಯೇ ಹೇಳಿದಳು.

"ಅವರಿಗೂ ಏನು ಕಮ್ಮಿ ಇಲ್ಲ. ತೋಟ ಗದ್ದೆ ಇದೆಯಂತೆ. ಅವಳ ತಾಯಿ ಎಲ್ಲೋ ಸರ್ಕಾರಿ ಕೆಲಸದಲ್ಲಿದ್ದು ರಿಟೈರ್ ಆಗಿದಾರಂತೆ. ಈಗ ಈ ಹುಡುಗಿಯೂ ಕೆಲಸದಲ್ಲಿದೆ. ಚೆನ್ನಾಗಿ ಸಂಬಳ ಬರುತ್ತಂತೆ. ಅಡಿಗೆ ಕೆಲಸ, ಹೊಲಿಗೆ, ಕಸೂತಿ ಎಲ್ಲಾ ಬರುತ್ತಂತೆ. ಸಂಗೀತ ಒಂದು ಕಲಿತಿಲ್ಲವಂತೆ.... ಶಾಂತಮ್ಮನಿಗೆ ತಕ್ಕ ಸೊಸೆ ಆಗ್ತಾಳೆ ಅಂತ ರಾಧಮ್ಮ ಬಾಯಿ ತುಂಬಾ ಹೊಗಳಿದರು."

"ಹೊಗಳ್ದೇ ಏನು ಮಾಡ್ತಾರೆ? ಅನಾಯಾಸವಾಗಿ, ಗಂಡಿನ ಮನೆಯವರು ತಾನೇ ಹೋಗಿ ಕೇಳಿಕೊಂಡರೆ?" ಗಂಡನ ಕಡೆ ಅಸಮಾಧಾನದ ದೃಷ್ಟಿ ಬೀರಿದಳು.

"ಈಗಲೂ ಏನೂ ಕಾಲ ಮೀರಿಲ್ಲ. ಅವಳನ್ನೇ ಮಾಡಿಕೊಳ್ತೀವಿ ಅಂತ ನಾವು ಬರೆದುಕೊಟ್ಟಿಲ್ಲ. ಸುಮ್ಮನೇ ಮಾತೇಕೆ?"

"ನಿಮ್ಮ ಮಗ ಬರೆದು ಕೊಟ್ಟಿದಾನಲ್ಲ."

"ಅವನೇನೋ ತಮಾಷೆ ಮಾಡಿದಾನೆ. ಫೋಟೋದಲ್ಲಿರುವ ಹುಡುಗಿ ಚೆನ್ನಾಗಿದಾಳೆ. ಒಪ್ಪಿದೀನಿ ಅಂತ ಅಂದ..... ನೀನು ರೇಗಿಸಿದೆ"

"ಅವನು ಯಾರನ್ನಾದ್ರೂ ಮದುವೆಯಾಗಲಿ, ನನಗೇನಂತೆ?"

"ಅವಳನ್ನೇ ನಿನ್ನ ಸೊಸೆ ಅಂತ ಒಪ್ಕೋ ಬೇಕಾಗುತ್ತೆ"

"ಇಂಥ ಮಗನ್ನ ಹೆತ್ತ ಮೇಲೆ ಅಂಥೋಳನ್ನ ಸೊಸೆ ಅಂತ ಒಪ್ಕೋ ಬೇಕಾಗು ತ್ತೇನೋ...." ವ್ಯಂಗ್ಯದಿಂದ ನುಡಿದು ಅಲ್ಲಿಂದ ಎದ್ದು ಹೋದಳು. ಇವರಿಬ್ಬರೂ ಮುಖ ಮುಖ ನೋಡಿಕೊಂಡರು.

ಕುದಿಯುತ್ತಿದ್ದ ನೀರಿಗೆ ಹೆಚ್ಚಿಟ್ಟ ಹೋಳುಗಳನ್ನು ಹಾಕಿದಳು. ಈ ನೀರಿನಂತೆ ನನ್ನ ಮನವೂ ಕುದಿಯುತ್ತಿದೆ. ಈ ತರಕಾರಿಯಂತೆ ಬೆಂದು ಹೋಗುತ್ತಿದೆ. ಹೇಗಪ್ಪಾ ಸಹಿಸಲಿ? ಹೇಗಪ್ಪಾ ಸಹಿಸಲಿ? ಜೊತೆಗೆ ಮನಸ್ಸಿನಲ್ಲಿ ನಾನಾ ಆಲೋಚನೆಗಳು..:.. ಈ ಸುಮಂತನ ಮನಸ್ಸನ್ನು ಬದಲಾಯಿಸುವುದು ಹೇಗೆ? ನಿರಾಸಕ್ತಿಯಿಂದ ಅಡಿಗೆ ಕೆಲಸಗಳನ್ನು ಮುಗಿಸಿದಳು.

"ಇದೇನೇ ಉಪ್ಪನ್ನೇ ಹಾಕಿಲ್ಲ...." ಬಾಯಿಗಿಟ್ಟ ತುತ್ತನ್ನು ಕೆಳಗಿಟ್ಟ ರಾಮಸ್ವಾಮಿ. ಎಲೆಯ ತುದಿಗೆ ಉಪ್ಪನ್ನು ಬಡಿಸಿದಳು. ಶಾಂತಳ ಬಗ್ಗೆ ಆತಂಕವಾಗಿತ್ತು. ಸಾಯಂಕಾಲ

ಮಗನೊಡನೆ ತಾನೇ ಮಾತನಾಡಬೇಕು ಅಂತಂದುಕೊಂಡ. ಊಟದ ಶಾಸ್ತ್ರ ಮಾಡಿ, ಶಾಂತ ತಲೆ ನೋವೆಂದು ಹೊದ್ದು ಮಲಗಿದಳು.

* * *

- - 27 - -

ನಿತ್ಯದಂತೆ ತಾಯಿ ಬಂದು ವಿಚಾರಿಸಲಿಲ್ಲವೆನ್ನುವುದನ್ನು ಸುಮಂತ ಗಮನಿಸಿದ. ಅಮ್ಮನಿಗೆ ಅಸಮಾಧಾನ ಅನ್ನೋದನ್ನ ಬಲ್ಲ. ಈ ತಾರಾ, ಈ ರೂಪ ಇಬ್ಬರೂ ಇಬ್ಬಳೇ ಅಂತ ಅಮ್ಮನಿಗೆ ತಿಳಿದರೆ ಏನನ್ನಿಸಬಹುದು.... ಎಂದು ತನ್ನಲ್ಲೇ ಯೋಚಿಸುತ್ತಿದ್ದ. ವನಜ ತಿಂಡಿ ಕಾಫಿಯನ್ನು ತಂದಿತ್ತಳು.

"ಅತ್ತೇ.... ಅಮ್ಮ ಎಲ್ಲಿ?" ಪ್ರಶ್ನಿಸಿದ.

"ತಲೆ ನೋವು ಅಂತ ಮಲಗಿದಾಳೆ..... ಏನಾದ್ರೂ ಹೇಳೋದಿದೆಯಾ?"

"ಈಗೇನಾದ್ರೂ ಮಾತಾಡಿದರೆ, ಅವಳ ತಲೆನೋವು ಹೆಚ್ಚುತ್ತೆ. ಬೇಡ ಬಿಡಿ."

"ನಿನ್ನ ಆ ಹುಡುಗಿಯ ಮನೆಯೋರಿಗೆ, ಸಾಯಂಕಾಲ ಬನ್ನಿ ಅಂತ ಹೇಳಿ ಬಂದು ಬಿಟ್ಟಿದೀನಿ. ನಿಮ್ಮಮ್ಮನ್ನ ನೋಡಿದರೆ, ಮಲಗಿ ಬಿಟ್ಟಿದಾಳೆ..... ಅವರುಗಳು ಏನಂದುಕೊಳ್ತಾರೆ...?"

"ತಡೀರಿ...... ನಾನು ನೋಡ್ತೀನಿ" ಅಂತ, ತಾಯಿ ಮಲಗಿದ್ದ ಕಡೆ ಬಂದು ಕೇಳಿದ. "ಏನಮ್ಮಾ ಹುಶಾರಿಲ್ವಾ.... ಮಲಗಿದೀಯಲ್ಲ... ದೇವಸ್ಥಾನಕ್ಕೆ ಹೋಗುಲ್ವಾ?"

ತಾಯಿ ಅಲ್ಲಾಡದೇ ಮಲಗಿದ್ದಳು. ತಾಯಿಯ ಮಗ್ಗುಲಲ್ಲಿ ಕುಳಿತ. ಮೆಲ್ಲಗೆ ಮುಸುಕು ತೆಗೆದು ನೋಡಿದ. ಅವಳು ನಿದ್ದೆಯನ್ನು ನಟಿಸಿ ಮಲಗಿದ್ದಳು. ಹಿಂದೆ ನಿಂತಿದ್ದ ಅತ್ತೆಗೆ ಹೇಳುವಂತೆ ಮಾತಾಡಿದ.

"ಅತ್ತೆ ನಾನೊಂದು ನಿರ್ಧಾರಕ್ಕೆ ಬಂದಿದೀನಿ. ಈ ಹುಡುಗೀರು ಯಾರೂ ಬೇಡ. ಅನಂತ ಮಾವನ ಮಕ್ಕಳಲ್ಲಿ ಒಬ್ಬರನ್ನು ಮದುವೆಯಾದರೆ ಹೇಗೆ? ಮಾವನಿಗೂ ಸಹಾಯ ಮಾಡಿದಂತಾಗುತ್ತದೆ....." ಕಣ್ಣು ಸಂಜ್ಞೆ ಮಾಡಿದ.

"ನಾನು ಅವತ್ತೇ ಹೇಳಿದ್ದೆ....." ಶಾಂತ ಕಣ್ಣುಗಳನ್ನು ಬಿಟ್ಟಳು. ಕಣ್ಣಲ್ಲಿ ರೋಷ ಹೊರ ಹೊಮ್ಮಿತು.

"ನನ್ನನ್ನ ಏನೂಂತ ತಿಳಿದು ಕೊಂಡಿದೀಯ..... ನೀನು ಹೇಳಿ ಹೇಳಿದ್ದನಲ್ಲ ಕೇಳಬೇಕೂಂತ ಏನಿಲ್ಲ....... ಮತ್ತೆ ಮತ್ತೆ ನನ್ನನ್ನು ಕೆರಳಿಸಬೇಡ...."

"ಏನಾಯ್ತಮ್ಮ........ ಏನಾಯ್ತು ಈಗ?"

"ಮತ್ತಿನ್ನೇನು..... ತಾಯಿ ಅನ್ನೋ ಪ್ರೀತಿ ಬೇಡ? ತಮಾಷೆಗೂ ಒಂದು ಮಿತಿ ಇದೆ.... ರಾತ್ರಿ ಆಡಿದ ಮಾತು ಬೆಳಿಗ್ಗೆಗಿಲ್ಲ, ಬೆಳಿಗ್ಗೆ ಆಡಿದ ಮಾತು ಸಾಯಂಕಾಲಕ್ಕಿಲ್ಲ...... ಯಾವುದಾದ್ರೂ ಒಂದು ಮಾತಿರಬೇಕು.... ಸ್ವಾಭಿಮಾನವನ್ನು ಬಿಟ್ಟು, ರಾಧಮ್ಮನ ಮನೆಗೆ ಹೋಗಿ, ಹೇಳಿ ಬಂದದ್ದಾಯ್ತು.... ಈಗ ಮಾವನಿಗೆ ಉಪಕಾರ ಮಾಡೋಕೆ ಹೊರಟಿದಾನೆ..." ಸುಮಂತ ತೆಪ್ಪಗೆ ಎದ್ದ. ಕೈ ಎಳೆದು ಕೂರಿಸಿದಳು.

"ಈಗ ಒಂದು ತೀರ್ಮಾನವಾಗಲೇಬೇಕು. ನನ್ನ ಮರ್ಯಾದೆಯ ಪ್ರಶ್ನೆ. ನನ್ನ ಬಾಯಲ್ಲಿ ಬಂದ ಮಾತನ್ನು ನಿಜ ಮಾಡ್ತಿದೀನಿ.... ರಾಧಮ್ಮನ ಮನೇಲಿರೋ ಹುಡುಗೀನ್ನೇ ತಂದು ನಿನ್ನ ತಲೆಗೆ ಕಟ್ತೀನಿ...." ಸುಮಂತ ತಾಯಿಯ ಕೈಗಳನ್ನು

ಹಿಡಿದುಕೊಂಡ. ಅವನು ಏನಾದರೂ ಆಡಿ ಬಿಡುತ್ತಾನೆಂದು ಹೆದರಿ ವನಜ ಬಾಯಿ ಹಾಗಿದಳು.

"ಮೊದಲೇ ಅವಳು ತಲೆ ನೋವು ಅಂತ ನರಳ್ತಿದಾಳೆ.... ಮೊದಲು ಅವಳಿಗೆ ಏನಾದ್ರೂ ಒಂದು ಮಾತ್ರೆ ತಂದು ಕೊಡು...." ಎದ್ದು ಹೋಗು ಅನ್ನುವಂತೆ ಸಂಜ್ಞೆ ಮಾಡಿದಳು. ಸುಮಂತ ತಾಯಿಯ ಕೈಗಳನ್ನು ಒತ್ತಿದ. ಎದ್ದು ಹೊರಗೆ ಬಂದ.

ಇವತ್ತು ಏನಾದ್ರೂ ಒಂದು ತೀರ್ಮಾನ ಆಗುತ್ತೆ ಅಂತ ತಾರಾಳಿಗೆ ಹೇಳಿದ್ದ. ಆದರೆ, ತಾಯಿಯ ವರ್ತನೆ ಅತಿರೇಕವೆನಿಸಿತ್ತು. ಇದರಿಂದ ಸಮಸ್ಯೆ ಪರಿಹಾರವಾಗುವ ಬದಲು, ಹೆಚ್ಚಾದರೆ ಅಂತ ಚಿಂತೆಯಾಗಿತ್ತು. ಹತ್ತಿರದಲ್ಲಿದ್ದ ಮೆಡಿಕಲ್ ಸ್ಟೋರ್ಸ್‌ನಿಂದ ತಲೆನೋವಿಗೆ ಮಾತ್ರೆಯನ್ನು ತಂದ. ಶಾಂತ ನುಂಗಲಿಲ್ಲ. "ನನಗೆ ಈ ಮಾತ್ರೆ ಗೀತ್ರೆ ಏನೂ ಬೇಡ. ಇನ್ನು ಸ್ವಲ್ಪ ಹೊತ್ತಿಗೆ ತಾನೇ ಕಡಿಮೆ ಆಗತ್ತೆ..... ಅವರುಗಳೆಲ್ಲ ಬರೋ ಹೊತ್ತಾಯ್ತು.... ಅತ್ತಿಗೆ ಏನು ತಿಂಡಿ ಮಾಡೋಣ....?"

"ತಿಂಡಿ ತೀರ್ಥ ಏನೂ ಬೇಡ. ಅವರೇನು ಹೊರಗಿನವರೇ?"

"ಆಮೇಲೆ ಆಡ್ಕೋತಾರೆ ಅಷ್ಟೇ.... ಒಂದು ತಿಂಡಿ ಸಹ ಕೊಡಲಿಲ್ಲ ಅಂತ"

"ರಾಧಮ್ಮ ಏನು ಹೊಸಬರೇ..... ಒಂದು ಕಾಫಿ ಕೊಟ್ಟರಾಯ್ತು. ನಾನು ಮಾಡಿಕೊಡ್ತೀನಿ. ನಿನಗೆ ಇಷ್ಟವಿಲ್ಲದಿದ್ದರೆ ಹೊರಗೇ ಬರಬೇಡ."

"ಮೊದಲೇ ಇಷ್ಟು ರಾದ್ಧಾಂತವಾಗಿದೆ. ಇನ್ನು ಆಕ್ಷೇಪಣೆಗಳು ಬೇರೆ ಬೇಕಾಗಿದೆ. ಇನ್ನೊಂದೈದು ನಿಮಿಷ ಬಿಟ್ಟು ಎದ್ದು ಹಾಗೇ ಬರ್ತೀನಿ"

"ನೀನು ಮಲಗಿರು. ಅವರುಗಳು ಬಂದಾಗ ಕರೀತೀನಿ..." ಎನ್ನುತ್ತಾ ಅವಳು ಹೊರಬರುವುದಕ್ಕೂ ಅವರುಗಳು ಬರುವುದಕ್ಕೂ ಸರಿ ಹೋಯಿತು. ತಕ್ಷಣವೇ ಸುಮಂತ ಎದ್ದು ಬಂದು, ಅವರುಗಳನ್ನು ಮಾತನಾಡಿಸಿ, ತಾರಾಳಿಗೆ ಏನನ್ನೋ ಹೇಳಿ ಹೊರಗೆಲ್ಲೋ ಹೊರಟು ಹೋದ.

ತಾರಾ, ತನ್ನ ತಂದೆ ತಾಯಿಯರೊಂದಿಗೆ, ರಾಧಮ್ಮನೊಂದಿಗೆ ಮನೆಯೊಳಗೆ ಕಾಲಿಟ್ಟಳು. ಅವಳ ಹೃದಯ ಸಣ್ಣಗೆ ಬಡಿದುಕೊಳ್ಳುತ್ತಿತ್ತು. ಸುಮಂತನ ತಾಯಿ ಒಪ್ಪುತ್ತಾರೋ ಇಲ್ಲವೋ..... ಒಪ್ಪದಿದ್ದರೆ ಮುಂದೇನು ಎಂಬ ದಿಗಿಲು ಅವಳ ಕಣ್ಣುಗಳಲ್ಲಿ ತೋರುತ್ತಿತ್ತು. ಸುಜಾತ ಮುಜುಗರದಿಂದ ಮುದುರಿ ಹೋಗಿದ್ದಳು. ಅತ್ತೆಗೆ, ಈ ತಾರಾ ನನ್ನ ಮಗಳು ಅಂತ ತಿಳಿದರೆ ಏನು ರಂಪ ಮಾಡಿ ಬಿಡುವಳೋ ಎಂಬ ಆತಂಕ ಕ್ಷಣ ಕ್ಷಣಕ್ಕೂ ಹೆಚ್ಚಾಗುತ್ತಿತ್ತು. ಎಲ್ಲರೂ ಕುಳಿತರು. ರಾಮಸ್ವಾಮಿಯೇ ಲೋಕಾಭಿರಾಮದ ಮಾತುಗಳನ್ನಾಡಿದ. ಆಗಾಗ್ಗೆ ಒಳಗಿನ ರೂಮಿನ ಕಡೆ ನೋಡುತ್ತಿದ್ದ. ತನ್ನ ಗಂಡನಿಗೆ ಎಲ್ಲಾ ತಿಳಿದದ್ದೇ.... ಆದರೂ ಅತ್ತೆಯ ಮಾತುಗಳು ಹೇಗೋ ಏನೋ ಎಂದುಕೊಂಡರೂ, "ಅತ್ತೆ ಎಲ್ಲಿ ಕಾಣುತ್ತಿಲ್ಲ" ಎಂದು ಕೇಳಿದಳು.

"ನೆನ್ನೆಯಿಂದ ತಲೆನೋವು ಅಂತ ಮಲಗಿದಾಳೆ. ಆಗಾಗ್ಗೆ ಈ ಅರೆತಲೆನೋವು ಅವಳನ್ನು ಕಾಡಿಸುತ್ತೆ" ವನಜ ಮತ್ತಷ್ಟು ಸೇರಿಸಿ ನುಡಿದಳು.

"ಹೌದಾ? ಶಾಂತಮ್ಮ ನನಗೆ ಹೇಳಿರಲಿಲ್ಲ.... ನಮ್ಮ ಸುಜಾತಾ ಇಂತಹ ತಲೆನೋವಿಗೆ ಫಸ್ಟ್‌ಕ್ಲಾಸ್ ಕಷಾಯ ಮಾಡಿಕೊಡ್ತಾಳೆ...." ರಾಧಮ್ಮ ನುಡಿದಳು.

"ನಾನು ಮಾಡಿಕೊಂಡು ಬಂದ್ರೆ, ಅತ್ತೆ ಕುಡೀತಾರಾ....?" ಸುಜಾತ ಅನುಮಾನ ದಿಂದ ಪ್ರಶ್ನಿಸಿದಳು.

"ಕುಡೀದೇ ಏನು ಮಾಡ್ತಾರೆ? ನಿಮ್ಮಪ್ಪ ಫಂಡಿತರು ಕೊಟ್ಟ ಔಷಧದಿಂದಲೇ,

ಶಾಂತಮ್ಮನಿಗೆ ಮಕ್ಕಳಾಗಿದ್ದು... ಶಾಂತಮ್ಮನೇ ಹೇಳಿದ್ರು...."

"ಹಾಗಾದ್ರೆ ಇನ್ನು ಹತ್ತು ನಿಮಿಷದಲ್ಲಿ ನಾನು ಕಷಾಯ ಮಾಡಿಕೊಂಡು ಬರ್ತೀನಿ" ಸುಜಾತ ಎದ್ದಳು.

"ಬೇಕಾದ್ದೆಲ್ಲಾ ಇಲ್ಲೇ ಇದೆ. ಇಲ್ಲೇ ಮಾಡಬಹುದಲ್ಲ...."

"ಪರವಾಗಿಲ್ಲ ಈಗ ಮಾಡಿಕೊಂಡು ಬಂದು ಬಿಡ್ತೀನಿ....." ಎನ್ನುತ್ತಾ ಸುಜಾತಾ ಮನೆಗೆ ಹೋಗಿದ್ದಳು. ರಾಧಮ್ಮ ಎದ್ದು ಒಳಗೆ ಬಂದಳು. ರಾಮಸ್ವಾಮಿ ಸುಜಾತಳ ಗಂಡನೊಡನೆ ಮಾತನಾಡುತ್ತಿದ್ದ, ತಾರಾ ಸುಮ್ಮನೇ ಕುಳಿತಿದ್ದಳು.

"ನಿನ್ನನ್ನ ಎಲ್ಲರೂ ತಾರಾ ಅಂತ ಕರೀತಾರೆ.... ಆದರೆ ಜಾತಕದ ಪ್ರತಿಯಲ್ಲಿ ರೂಪ ಅಂತ ಇದೆ...." ರಾಮಸ್ವಾಮಿ ಅನುಮಾನವನ್ನು ಪರಿಹರಿಸಿಕೊಳ್ಳಲು ಪ್ರಶ್ನಿಸಿದ.

"ರೂಪಾ ಅಂತ ನನ್ನ 'ತಾತಾ' ಕರೆಯುತ್ತಿದ್ದರು..... ಆದರೆ ನನಗಿಟ್ಟ ಹೆಸರು 'ರೂಪತಾರಾ' ಅಂತ. ರೂಪತಾರಾ ಅಂತ ಒಂದು ಸಿನಿಮಾ ವಾರಪತ್ರಿಕೆ ಬರುತ್ತಲ್ಲ.... ಹುಡುಗ ಹುಡುಗಿಯರು ಚುಡಾಯಿಸುತ್ತಿದ್ದರು. ಆಮೇಲೆ ನಾನು ಹೈಸ್ಕೂಲಿಗೆ ಸೇರುವಾಗ, ಹೆಸರನ್ನು ಬರೀ ತಾರಾ ಅಂತ ಮಾಡಿಕೊಂಡೆ.

"ರೂಪಾ, ತಾರಾ..... ಎರಡೂ ಹೆಸರುಗಳು ಚೆನ್ನಾಗಿವೆ.... ರೂಪಾ ಅಂತ ಯಾಕೆ ಮಾಡಿಕೊಳ್ಳಲಿಲ್ಲ...."

"ರೂಪಾ ಅನ್ನೋ ಹೆಸರು ಬಹಳ ಕಾಮನ್... ತಾರಾ ಅನ್ನೋ ಹೆಸರು ಪತಿವ್ರತೆಯರಲ್ಲಿ ಒಬ್ಬಳ ಹೆಸರು. ಅದೇ ಚೆನ್ನಾಗಿದೆ ಅಂತ ಅಮ್ಮ ಹೇಳಿದಳು. ಅದಕ್ಕೇ ಅದನ್ನೇ ಇಟ್ಟುಕೊಂಡೆ."

"ಸುಜಾತಾ.... ತಾರಾ.... ಒಂಥರ ಚೆನ್ನಾಗಿದೆ."

"ಹೆಸರಿನಲ್ಲೇನಿದೆ ಬಿಡಿ.... ಗುರುತಿಸೋಕೆ ಒಂದು ಹೆಸರು ಬೇಕು ಅಷ್ಟೆ...." ತಾರಾಳ ತಂದೆ ನುಡಿದ.

"ಹಾಗೆನ್ನಬೇಡಿ. ಎಷ್ಟೋ ಸಲ ಹೆಸರಿನಿಂದ ಅವಾಂತರಗಳಾಗಿವೆ. ಹಾಗೇ ಹೆಸರಿನಿಂದ ಜೀವನದ ದಿಕ್ಕೇ ಬದಲಾಗುತ್ತದೆ. ಎಷ್ಟೋ ಕಡೆ, ಅದೃಷ್ಟಕ್ಕಾಗಿ ಹೆಸರುಗಳನ್ನು ಬದಲಾಯಿಸಿ ಕೊಳ್ತಾರಂತೆ... ಅಂದ್ಹಾಗೇ ನಿಮ್ಮ ಹೆಸರು....?"

"ನನ್ನ ಹೆಸರು ಗುಂಡೂರಾವ್ ಅಂತ... ಅಪ್ಪನ ಕಾಲದ ಹೆಸರು. ನಾನು ಬದಲಾಯಿಸಿಕೊಳ್ಳಲಿಲ್ಲ....." ಆತ ನಕ್ಕ.

"ನಿಮ್ಮ ಮಗ ಏನು ಮಾಡ್ತಿದಾನೆ?"

"ನಮ್ಮ ಮಾವ ಪಂಡಿತರದ್ದೇ ಒಂದು ಔಷಧಾಲಯವಿದೆ. ಅದನ್ನೇ ನೋಡಿಕೊಳ್ತಿದಾನೆ. ಹಾಗೇ ತೋಟ ಗದ್ದೆಯ ಉಸ್ತುವಾರಿ ಎಲ್ಲಾ ಅವನದೇ...."

"ಒಳ್ಳೇದು ಬಿಡಿ. ಅದನ್ನೆಲ್ಲ ಮುಂದುವರೆಸುಕ್ಕೆ ಒಬ್ಬರು ಬೇಕಲ್ಲ."

"ನಿಮಗೆ ಗೊತ್ತಿರಬೇಕಲ್ಲ.... ನಮ್ಮ ಭಾಮೈದ ನನ್ನ ಮಗನ್ನ ದತ್ತು ತಗೊಂಡಿದಾರೆ ಅನ್ನೋ ವಿಷಯ....."

"ಹೌದಾ?..... ಅಣ್ಣನ ಮನೇಲಿ ನನ್ನ ಮಗ ಇದಾನೆ ಅಂತ ಸುಜಾತಾ ಹೇಳಿದ್ದಳು..... ಸುಜಾತ ಮಗಳ ಕೈಗೆ ಕಷಾಯವನ್ನು ಕೊಟ್ಟು, ಹೊರಟು ಹೋಗಿದ್ದಳು.

ಸುಜಾತ ಮಾಡಿಕೊಟ್ಟ. ಬಿಸಿ ಬಿಸಿ ಕಷಾಯ ತುಂಬ ಹಿತವಾಗಿತ್ತು. ಕುಡಿಯುತ್ತಿದ್ದಂತೆ ಯೇ ನರಗಳು ಸಡಿಲಗೊಂಡವು.... ಬೆವರನ್ನು ಒರೆಸಿಕೊಳ್ಳುತ್ತಾ ಶಾಂತ ಕಷಾಯವನ್ನು ಹೀರಿದಳು. ಒಂದೆರಡು ಗಳಿಗೆಯ ನಂತರ, ಶಾಂತಾ ಎದ್ದು ಸೀರೆ ನೆರಿಗೆಗಳನ್ನು

ಸರಿಮಾಡಿಕೊಂಡು, ಕನ್ನಡಿಯ ಮುಂದೆ ನಿಂತು ಮುಂಗೂದಲನ್ನು ಸವರಿಕೊಂಡಳು.

"ರಾಧಮ್ಮ..... ಈಗ ಎಷ್ಟೋ ಹಗುರವಾಯ್ತು. ನಾನು ಹೊರಗೆ ಬರ್ತೀನಿ"

"ಬೇಡ ಸುಧಾರಿಸಿಕೊಳ್ಳಿ..... ಮತ್ತೊಂದು ದಿನ ಬರ್ತಾರೆ ಬಿಡಿ."

"ಅಲ್ಲ ರಾಧಮ್ಮ ಎಷ್ಟು ಬೇಗ ಈ ಕಷಾಯನ ಯಾರು ಮಾಡಿ ತಂದ್ರು? ನೀವು ಇಲ್ಲೇ ಇದ್ರಲ್ಲಾ...." ಈಗ ಶಾಂತಳ ಮೆದುಳು ಚುರುಕಾಗಿತ್ತು.

"ತಾರಾಳ ತಾಯಿ..... ಆಕೆ ಪಂಡಿತರ ಮಗಳು..... ಸಣ್ಣಪುಟ್ಟ ವೈದ್ಯವೆಲ್ಲಾ ಗೊತ್ತು. ಊರ್‍ನಲ್ಲಿ ಅವರದ್ದೇ ಒಂದು ಮೆಡಿಕಲ್ ಷಾಪ್ ಸಹ ಇದೆ...."

"ಅವರನ್ನು ಇಲ್ಲಿಗೇ ಕರೀರಿ...."

"ತಾರಾ..... ತಾರಾ..... ನಿಮ್ಮ ತಾಯೀನ ಕರೆದುಕೊಂಡು ಇಲ್ಲೇ ಬಾ...."

"ಅಮ್ಮ ಮನೆಗೆ ಹೋಗಿದಾಳೆ. ಕರೆದುಕೊಂಡು ಬರ್ತೀನಿ" ಎಂದು ತಾರಾ ಹೊರಟಳು. ಅವಳನ್ನು ತಡೆದಳು.

"ಪರವಾಗಿಲ್ಲ ಬಿಡಮ್ಮ.... ನಾನೇ ಆಮೇಲೆ ಬರ್ತೀನಿ. ನಮ್ಮ ಮನೆ ಲಕ್ಷಣ ನೋಡಿ ನೀವುಗಳು ಏನಂದುಕೊಂಡರೋ.....?"

"ನಮ್ಮ ತಾರಾ ಅಂತ ಹುಡುಗಿಯಲ್ಲ. ತುಂಬಾ ಒಳ್ಳೆಯ ಸ್ವಭಾವ. ಅವಳ ಅದೃಷ್ಟ ತುಂಬಾ ಚೆನ್ನಾಗಿದೆ.... ನಿಮ್ಮಂಥೋರ ಮನೆಯ ಸೊಸೆಯಾಗವುದು ಅವಳ ಪುಣ್ಯ......"

"ಸುಮಂತ ಎಲ್ಲಿ ಕರೀರಿ.... ಒಪ್ಪಿಗೇನಾ ಅಂತ ನಾನು ಈಗ್ಲೇ ಕೇಳಿ ಬಿಡ್ತೀನಿ.... ಏನಮ್ಮಾ..... ಸುಮಂತನ್ನ ಕರೀತೀಯಾ.....?" ತಾರಾ ನಾಚಿದಳು.

"ಹೋಗಲಿ, ನಮ್ಮ ಅತ್ತಿಗೇನ ಕರಿ..... ಕಾಫೀನಾದ್ರೂ ಮಾಡಿಕೊಡಲಿ. ನನ್ನ ಈ ಹಾಳು ತಲೆನೋವಿನಿಂದ ಬಂದವರಿಗೆ ಸರಿಯಾಗಿ ಉಪಚಾರ ಸಹ ಮಾಡದ ಹಾಗಾಯ್ತು."

"ಪರವಾಗಿಲ್ಲ ಬಿಡಿ. ನೀವ್ಯಾಕೆ ಒದ್ದಾಡ್ತೀರಿ.... ನಾವೇನು ಹೊಸಬರಾ?"

"ಹೊಸಬರಲ್ಲ. ಅದಕ್ಕೇ ಇಷ್ಟು ಸಲೀಸು..... ನಮ್ಮ ಮನೆಯ ವಿಷಯ ಅದೇನೇನೋ ಎಲ್ಲಾ ಹೇಳಿದೀರಿ ತಾನೇ...."

"ಆಗಲಿ....... ನಿಧಾನವಾಗಿ ಮಾತನಾಡಿದರಾಯ್ತು. ಈಗ ನೀವು ಸುಧಾರಿಸಿಕೊಳ್ಳಿ. ಇನ್ನು ಎರಡು ಹೊತ್ತಿಗಾಗುವಷ್ಟು ಕಷಾಯ ಇದೆ. ಬಿಸಿ ಮಾಡಿಕೊಂಡು ಕುಡಿಯಿರಿ. ನಾವಿನ್ನು ಬರ್ತೀವಿ......"

"ಅತ್ತಿಗೇ..... ಅತ್ತಿಗೆ....." ವನಜ ಒಳಗೆ ಬಂದಳು.

"ಅರಿಶಿನ ಕುಂಕುಮ, ಹೂವು, ಹಣ್ಣು, ಎಲೆ, ಅಡಿಕೆ ಎಲ್ಲಾ ಇದೆ. ನೀವೇ ಕೊಟ್ಟು ಬಿಡಿ......"

"ಈಗ ಹೇಗಿದೀಯ? ಸ್ವಲ್ಪ ಗೆಲುವಾಗಿರುವಂತಿದೆ."

"ಎಲ್ಲಾ ಕಷಾಯದ ಪ್ರಭಾವ. ಏನೇನು ಹಾಕಿದಾರೆ, ಹೇಗೆ ಮಾಡಿದಾರೆ ಅಂತ ಕೇಳಿ ತಿಳಿದುಕೊಳ್ಳಬೇಕು" ಎನ್ನುತ್ತಾ ಹೊರಬಂದಳು. ಹೊರಗೆ ಗಂಡನೊಡನೆ ಮಾತನಾಡುತ್ತಾ ಕುಳಿತಿದ್ದ ತಾರಾಳ ತಂದೆ ಎದ್ದು ಕೈ ಮುಗಿದು ನಮಸ್ಕಾರ ಅಂತಂದ.....

"ಏನಂದುಕೊಂಡರೋ ಏನೋ....... ನಿಮ್ಮಗಳನ್ನು ಬರಹೇಳಿ, ನಾನು ಮಲಗಿಬಿಟ್ಟೆ.... ಈಗ ಎಷ್ಟೋ ವಾಸಿ....."

"ಪರವಾಗಿಲ್ಲ....... ಏನು ಮಾಡೋಕಾಗುತ್ತೆ......"

"ಹಾಗೆಲ್ಲ ಏನೂ ತಿಳಿದುಕೊಳ್ಳುವ ಜನ ಇವರಲ್ಲ" ರಾಮಸ್ವಾಮಿ ಅವರ ಪರವಹಿಸಿ ಮಾತನಾಡಿದಾಗ, ಶಾಂತ ದುರು ದುರು ನೋಡಿದಳು.

"ನಾವಿನ್ನು ಬರೋಣ್ವೇ..... ಅಪ್ಪಣೆಯಾಗಲಿ..... ಎಲ್ಲಾ ನಿಮ್ಮ ದೊಡ್ಡ ಮನಸ್ಸು. ರಾಧಮ್ಮ ಹೇಳಿದಾಗ ನನಗೆ ನಂಬೋಕೇ ಆಗಲಿಲ್ಲ. ಇಷ್ಟು ಸುಲಭವಾಗಿ ನಮ್ಮ ಮಗಳಿಗೆ ಸಂಬಂಧ ಕುದುರುತ್ತದೆ ಅಂತ ನಾವು ಅಂದುಕೊಂಡಿರಲಿಲ್ಲ."

"ನಾವೂ ಅಂದುಕೊಂಡಿರಲಿಲ್ಲ. ಇದ್ದಕ್ಕಿದ್ದಂತೆ ಆದ ಪ್ರೇರಣೆ.... ಎಲ್ಲಾ ದೈವೇಚ್ಛೆ ನಮ್ಮ ಕೈಲಿ ಏನಿದೆ ಹೇಳಿ.... ಸುಮಂತ ಎಲ್ಲಿ ಹೋದ ಈ ಸಮಯದಲ್ಲಿ.... ನೀವು ಅವನನ್ನು ನೋಡಿದ್ರಾ......?"

"ಹೂಂ. ನಾವು ಬಂದಾಗ ಮನೇಲೇ ಇದ್ರು. ಈಗ ಬರ್ತೀನಿ ಅಂತ ಹೇಳಿ ಹೊರಗೆಲ್ಲೋ ಹೋದ್ರು....." ಶಾಂತ ನಕ್ಕಂತೆ ಮಾಡಿದಳು.

"ಬೇಕೂಂತ ಹೊರಗೆಲ್ಲೋ ಹೋಗಿದಾನೆ. ತನ್ನ ವರ್ತನೆ ತನಗೇ ಅಸಹ್ಯವಾಗಿರಬೇಕು. ಬರಲಿ ಚೆನ್ನಾಗಿ ಬುದ್ಧಿ ಕಲಿಸ್ತೀನಿ ಅಂತಂದುಕೊಂಡು"

"ಹೋಗಮ್ಮ ತಾರಾ...... ನಿಮ್ಮ ತಾಯೀನ ಕರೆದುಕೊಂಡು ಬಾ..... ಎಷ್ಟೋ ಹೊತ್ತಾಯ್ತು ಬರಲೇ ಇಲ್ಲ....." ಎಂದಳು.

ತಾರಾ ಅನುಮಾನಿಸುತ್ತಾ ಎಲ್ಲರ ಕಡೆ ನೋಡಿದಳು. ರಾಮಸ್ವಾಮಿ ಹೆದರಬೇಡ ಧೈರ್ಯವಾಗಿರು ಎನ್ನುವಂತೆ ಸಂಜ್ಞೆ ಮಾಡಿದ. ಅವಳು ಹೊರಟಳು. ಕೆಲವೇ ಕ್ಷಣಗಳಲ್ಲಿ ಏದುಸಿರು ಬಿಡುತ್ತಾ ಓಡಿ ಬಂದಳು. ಗಾಬರಿಯಿಂದ ಕಷ್ಟ ಪಟ್ಟು ಹೇಳಿದಳು.....

"ಅಪ್ಪಾ..... ಅಪ್ಪಾ....... ಅಮ್ಮಾ.... ಬೆಂಕಿ....."

"ಏನಾಯ್ತು....." ಎನ್ನುತ್ತಾ ಗಾಬರಿಯಿಂದ ಆತ ಓಡಿದ. ರಾಮಸ್ವಾಮಿ ಗಾಬರಿಯಿಂದ ನಿಂತಿದ್ದವಳನ್ನು ಅಲುಗಾಡಿಸಿ ಕೇಳಿದ.

"ಏನಾಯ್ತು? ಏನು ಬೆಂಕಿ....."

"ಅಮ್ಮನ ಸೀರೆಗೆ ಬೆಂಕಿ... ಹತ್ತಿದೆ....." ಇಷ್ಟೇ ಕೇಳಿಸಿದ್ದು ರಾಮಸ್ವಾಮಿಯೂ ಬೇಗನೇ ರಾಧಮ್ಮನ ಮನೆ ಕಡೆ ನಡೆದ. ರಾಧಮ್ಮನೂ,

"ಅಯ್ಯೋ ದೇವರೇ ಇದೇನಪ್ಪಾ ಅನಾಹುತ......" ಅನ್ನುತ್ತ ತಮ್ಮ ಮನೆಯ ಕಡೆ ಓಡಿದರು. ಶಾಂತಾ ವನಜಾ ಇಬ್ಬರೂ ಬೆಪ್ಪಾಗಿ ನಿಂತಿದ್ದರು.

"ನಡೀ ನಾವೂ ಹೋಗೋಣ. ಏನಾಗಿದೆ ಅಂತ ನೋಡೋಣ...." ಇಬ್ಬರೂ ಮುಂಬಾಗಿಲನ್ನು ಎಳೆದುಕೊಂಡು ಆ ಮನೆಯ ಕಡೆ ಓಡಿದರು. ಅಕ್ಕಪಕ್ಕದ ಮನೆಯವರಾಗಲೇ ಬಂದು ಸೇರಿದ್ದರು. "ಏನಾಯ್ತು? ಯಾಕಾಯ್ತು?" ಎಲ್ಲರೂ ಕೇಳುವವರೇ.

"ಅಡಿಗೆಯಾಕೆಯ ಸೀರೆಗೆ ಮೊದಲು ಬೆಂಕಿ ಹತ್ತಿದ್ದು..... ಅದನ್ನು ಆರಿಸಲು ಹೋಗಿ ಸುಜಾತಳ ಸೀರೆಗೂ ಬೆಂಕಿ ಹತ್ತಿತು ಎಂದು ತಿಳಿಯಿತು. ಕೆಲವೇ ಕ್ಷಣಗಳಲ್ಲಿ ಇಬ್ಬರನ್ನು ಸಮೀಪದ ನರ್ಸಿಂಗ್ ಹೋಮ್‌ಗೆ ಕರೆದುಕೊಂಡು ಹೋಗಿದ್ದರು. ಅಡಿಗೆಯವರಿಗಿಂತ ಹೆಚ್ಚಿನ ಸುಟ್ಟಗಾಯ ಸುಜಾತಳಿಗಾಗಿತ್ತು. ಶಾಂತ ಪೆಚ್ಚಾದಳು. ಇವತ್ತೇ ಹೀಗಾಗಬೇಕೆ?.... ವನಜಳಿಗಂತೂ ತುಂಬಾ ವ್ಯಥೆಯಾಗಿತ್ತು. ಆದರೆ ವಿಪರೀತವಾಗಿ ಸುಟ್ಟಗಾಯಗಳಾಗಿರಲಿಲ್ಲ.

ಈ ಸುಟ್ಟ ಗಾಯಗಳು ಮಾಯುವುದು ಎಂದಿಗೋ.... ಅಲ್ಲಿಯವರೆಗೂ ಮದುವೆಯ ಮಾತನ್ನಂತೂ ಆಡುವಂತಿಲ್ಲ. ಅಷ್ಟರೊಳಗೆ ಈ ಶಾಂತನ ಮನಸ್ಸು

ಬದಲಾಗಿ ಹೋಗಿ ಇನ್ನೇನೇನು ಮಾತುಕತೆಗಳು ನಡೆಯಬೇಕೋ?

ಅವರುಗಳ ಜೊತೆಯಲ್ಲಿ ಹೋಗಿದ್ದ ರಾಮಸ್ವಾಮಿ ಹಿಂತಿರುಗಿದ್ದ. ಅಷ್ಟರಲ್ಲಿ ಸುಮಂತನೂ ವಾಪಸ್ಸಾಗಿದ್ದ. ಅವನಿಗೂ ವಿಷಯ ತಿಳಿಯಿತು.

"ಸಧ್ಯ ಹೆಚ್ಚಿಗೆ ಸುಟ್ಟಿಲ್ಲ. ಯಾರಿಗೂ ಪ್ರಾಣಕ್ಕೆ ಅಪಾಯವಿಲ್ಲ. ಆದರೆ ಪೂರ್ಣ ವಾಸಿಯಾಗುವವರೆಗೆ, ವಿಪರೀತ ಹುಶಾರಾಗಿರಬೇಕು ಅಂತ ಡಾಕ್ಟರು ಹೇಳಿದಾರೆ. ಒಂದು ವಾರ ನರ್ಸಿಂಗ್ ಹೋಮ್‌ನಲ್ಲಿರಬೇಕಂತೆ"

"ನಾನು ಈಗಲೇ ಹೋಗಿ ನೋಡಿಕೊಂಡು ಬರ್ತೀನಿ" ಸುಮಂತ ಹೊರಟ.

"ಏನೂ ಬೇಡ..... ಈಗ್ತಾನೇ ಬರ್ತಿದೀಯ. ಎಲ್ಲಿ ಹೋಗಿದ್ದೆ ನೀನು....?"

"ಸಶೀಶನ ಮನೆಗೆ ಹೋಗಿದ್ದೆ. ಒಂದು ಪಾರ್ಟಿ ಇತ್ತು....... ನೀನು ತಲೆನೋವು ಅಂತ ಮಲಗಿದ್ಯೆಲ್ಲ ಅದಕ್ಕೇ ಹೇಳಲಿಲ್ಲ."

"ಅತ್ತೆಗಾದ್ರೂ ಹೇಳಬಹುದಾಗಿತ್ತಲ್ಲ."

"ಅವರೆಲ್ಲ ಇದ್ರು.... ಅದಕ್ಕೇ ಹಾಗೇ ಹೊರಟು ಹೋದೆ...."

"ಬಂದವರಿಗೆ ಅವಮಾನ ಮಾಡಿದ ಹಾಗಲ್ವೇನೋ..... ನಿನ್ನ ಮಾತಿಗೆ ಒಪ್ಪಿ ನಾನು ಅವರನ್ನೆಲ್ಲ ಕರೆಸಿದೆ."

"ಒಳ್ಳೇದಾಯ್ತು ಬಿಡು. ಅವರುಗಳೇನಾದ್ರು?"

"ಏನಾದ್ರೂ ಮಾತಾಡುವ ಮೊದಲೇ ಈ ಬೆಂಕಿಯ ಅನಾಹುತ..... ಇನ್ನು ಈ ಮಾತು ಮುಂದುವರೆಯುತ್ತೋ ಇಲ್ಲವೋ...."

"ಹೀಗೇನಾದ್ರೂ ಆಗಲಿ ಅಂತ ನೀನು ಹರಕೆ ಹೊತ್ತಿದ್ದೆಯಾ?"

"ನಾನು ಅಷ್ಟು ಕೆಟ್ಟೋಳಲ್ಲ. ಆಕೆಗೆ ಅಪಾಯ ಆಗಲಿ ಅಂತ ನಾನೇಕೆ ಹರಕೆ ಹೊರಲಿ... ಏನೋ ಅಚಾತುರ್ಯದಿಂದ ಆದ್ದಕ್ಕೆ ನನ್ನ ತಲೆ ಮೇಲೆ ಗೂಬೇನ ಕೂರಿಸಬೇಡಿ.....?"

"ಮನಸ್ಸಿನಂತೆ ಮಹಾದೇವ...... ಈಗ ನಿನ್ನ ಮನಸ್ಸಿಗೆ ಸಮಾಧಾನವಾಗಿರಬೆಕು." ತಂದೆಯ ಮಾತಿಗೆ, ಸುಮಂತ ಪ್ರತಿಧ್ವನಿಸಿದ್ದ.

"ಸಾಕು ಸುಮ್ಮನಿರು. ಅವರು ಆಡಿದ್ರು ಅಂತ ನೀನೂ ಆಡಬೇಡ... ಒಂದ ವೇಳೆ ನಿನ್ನ ಮದುವೆ ಆದ ಮೇಲೆ, ಆಕೆಗೆ ಹೀಗಾಗಿದ್ದರೆ ನೀನು ಹೀಗೆ ಮಾತಾಡ್ತಿದ್ದೆಯಾ.....? ಒಟ್ಟಿನಲ್ಲಿ ಕಾಯ್ತಾ ಇರ್ತೀರಿ ನನ್ನನ್ನ ಅನ್ನೋಕೆ....."

"ನಿನಗೆ ಇಷ್ಟವಿರಲಿಲ್ಲವಲ್ಲ ಅದಕ್ಕೇ ಹಾಗೆ ಹೇಳಿದಾರೆ.... ಹೋಗಲಿ ಬಿಡು.... ಮತ್ತೆ ತಲೆನೋವು ಪ್ರಾರಂಭವಾಗುತ್ತೆ. ಹೆಚ್ಚು ಮಾತನಾಡಬೇಡ"

"ನೀವು ನನಗೇ ಹೇಳಬೇಡಿ ಅತ್ತಿಗೆ....."

"ಈಗೇನು ಎಲ್ಲರೂ ಒಳಗೆ ಹೋಗೋಣವೋ.....? ಹೀಗೇ ಬೀದಿಲಿ ನಿಂತು ವಾದ ವಿವಾದ ಮಾಡ್ತಾ ಇರೋಣವೋ......?" ಸುಮಂತ ಒಳ ನಡೆದ ಅವನ ಹಿಂದೆಯೇ ಎಲ್ಲರೂ ಒಳಗೆ ಬಂದರು.

"ಸಧ್ಯ ಪುಣ್ಯಾತ್ಗಿತ್ತಿ ಬಚಾವಾದಳು. ಇಲ್ಲದಿದ್ದರೆ, ಅಪಶಕುನ ಅಂತ ನನ್ನ ತಲೇ ಮೇಲೆ ಬರ್ತಿತ್ತು." ಶಾಂತ ಗೊಣಗಿದಾಗ ವನಜ ನಕ್ಕಳು.

"ಬೇಡಾಂತಂದ್ರೂ ಎಷ್ಟು ಮಾತಾಡ್ತೀಯಲ್ಲ. ಇನ್ನೊಂದು ಲೋಟ ಕಷಾಯ ಕುಡಿದು ಮಲಕ್ಕೋ.... ಉಳಿದ ಕೆಲಸಗಳನ್ನು ನಾನು ನೋಡಿಕೊಳ್ತೀನಿ." ತಾಯಿ ಅತ್ತ ಮಲಗಿದ ಕೂಡಲೇ, ಸುಮಂತ ತಂದೆಯೊಡನೆ ನರ್ಸಿಂಗ್ ಹೋಮ್‌ಗೆ ಬಂದ.

ತಾರಾ ಅವಳ ತಂದೆಯೊಡನೆ ಕಾರಿಡಾರಿನಲ್ಲಿ ನಿಂತಿದ್ದಳು.
"ಈಗ ಹೇಗಿದಾರೆ?" ರಾಮಸ್ವಾಮಿ ವಿಚಾರಿಸಿದರು.
"ಏನನ್ನೂ ಹೇಳಿಲ್ಲ. ಆಕ್ಸಿಡೆಂಟ್ ಕೇಸು..... ಪೋಲಿಸರಿಗೆ ತಿಳಿಸಬೇಕಂತೆ."
"ಬನ್ನಿ. ಇಲ್ಲೆ ಹತ್ತಿರದಲ್ಲೇ ಪೋಲೀಸ್ ಸ್ಟೇಷನ್ ಇದೆ. ಸುಮಂತ ತಾರಾಳನ್ನು ಮನೆಗೆ ಕರೆದುಕೊಂಡು ಹೋಗು. ಇಲ್ಲಿ ನಿಂತು ಏನು ಮಾಡ್ತೀರಿ?"
"ಇಲ್ಲಿ ರಾಧಮ್ಮ ಜತೆಗಿದಾರೆ... ನೀವುಗಳು ಹೋಗಿ ಪರವಾಗಿಲ್ಲ" ಎಂದು ತಂದೆ ನುಡಿದಾಗ, ತಾರಾ ಸುಮಂತನೊಡನೆ ಹೆಜ್ಜೆ ಹಾಕಿದಳು. ದಾರಿಯಲ್ಲಿ ಸುಮಂತ ತಾರಾಳ ಕೈಯೊಳಗೆ ತನ್ನ ಕೈ ತೂರಿಸಿ ಒತ್ತಿದ.
"ಇದೆಲ್ಲ ಯಾಕಾಯ್ತು ತಾರಾ....." ಅವನು ಅಷ್ಟು ಕೇಳಿದ್ದೇ ಸಾಕು ಎಂಬಂತೆ ತಾರಾ ಅವನ ಭುಜಕ್ಕೊರಗಿದಳು.
"ಅಮ್ಮಂಗೆ ಎಷ್ಟು ಹಿಂಸೆ ಆಗ್ತಾ ಇರಬಹುದು ಅಲ್ವಾ? ಪೂರಾ ವಾಸಿಯಾಗುಕ್ಕೆ ಎಷ್ಟು ದಿನಗಳಾಗುತ್ತವೋ.... ನಾನು ನಾಳೆಯಿಂದ ಆಫೀಸಿಗೆ ಬರುಲ್ಲ. ಅವಳಿಗೆ ವಾಸಿಯಾಗುವವರೆಗೆ ನಾನು ಇಲ್ಲೇ ಅಮ್ಮನ ಜತೇಲಿರ್ತೀನಿ...."
"ಹಾಗೇ ಮಾಡು. ಆದರೆ ಕೊರಗಬೇಡ. ಎಲ್ಲಾ ಸರಿ ಹೋಗುತ್ತೆ. ನಿನಗೇನಾದ್ರೂ ಬೇಕಾದ್ರೆ ನನಗೆ ಹೇಳು... ನಾನು ನಿನ್ನ ಜತೆಗಿದೀನಿ.... ಧೈರ್ಯವಾಗಿರು."
"ನೀವು ಇಷ್ಟು ಹೇಳಿದ ಮೆಲೆ ನನಗೆ ಎಷ್ಟೋ ನೆಮ್ಮದಿ ಆಯಿತು. ನಾವೆಲ್ಲಾ ನಿಮ್ಮ ಮನೆಗೆ ಬಂದಾಗ, ನೀವು ಎಲ್ಲಿಗೆ ಹೊರಟು ಹೋಗಿದ್ರಿ...."
"ಸತೀಶನ ಮನೆಗೆ.... ಸ್ವಲ್ಪ ಕೆಲಸವಿತ್ತು"
"ಏನು ಕೆಲಸ ನನಗೆ ಗೊತ್ತಿಲ್ಲದ್ದು?"
"ನಿಧಾನವಾಗಿ ನಿನಗೆ ಇನ್ನೊಂದು ದಿನ ಹೇಳ್ತೀನಿ. ಈಗ ನಮ್ಮ ಮನೆಗೆ ಬರ್ತೀಯೋ ನಿಮ್ಮ ಮನೆಗೆ ಹೋಗ್ತೀಯೋ......?"
"ಇಲ್ಲಿ ಮಾವ ಒಬ್ಬರೇ ಇದಾರೆ.... ನೀವೇ ಬರೋದಾದ್ರೆ ಬನ್ನಿ."
"ಹಾಗಾದ್ರೆ ನೀನೇ ನಮ್ಮ ಮನೆಗೆ ಬಂದು ಬಿಡು.... ಅಲ್ಲಿ ಅತ್ತೇನೂ ಇದಾರೆ..."
"ನಿಮ್ಮ ತಾಯೀ.... ಏನಾದರೂ ಅಂದ್ರೆ...."
"ತಲೆನೋವು ಅಂತ ಕಷಾಯ ಕುಡಿದು ಮಲಗಿದಾಳೆ... ಏನು ಪರವಾಗಿಲ್ಲ. ನಿಮ್ಮ ತಂದೆ ಬಂದ ಮೇಲೆ ಹೋಗುವಂತೆ."
ತಾರಾ ಸುಮಂತನೊಡನೆ ಅವನ ಮನೆಗೆ ಬಂದಳು. ವನಜ ಹುಬ್ಬೇರಿಸಿದಳು.
ಸುಮಂತ ಪಿಸುದನಿಯಲ್ಲಿ ಅತ್ತೆಯೊಡನೆ ಮಾತಾಡಿದ. "ನನಗೆ ಹಸಿವಾಗ್ತಿದೆ. ಇಬ್ಬರಿಗೂ ಬಡಿಸ್ತೀರಾ" ಕೇಳಿದ. ವನಜ ಸರಸರನೆ ಬಡಿಸಿದಳು.
"ಅತ್ತಿಗೇ ಯಾರ ಹತ್ತಿರ ಮಾತಾಡ್ತಿದೀರಿ...." ಶಾಂತಾ ಅಲ್ಲಿಂದಲೇ ಕೇಳಿದಳು.
"ಸುಮಂತನ ಹತ್ತಿರ..... ಬಡಿಸ್ತಾ ಇದೀನಿ"
"ಊಟ ಆದಮೇಲೆ ಅವನನ್ನು ಇಲ್ಲಿಗೆ ಕಳಿಸಿ....." ಯಾಕಂತೆ ಅನ್ನುವ ರೀತಿಯಲ್ಲಿ ಸುಮಂತ ಮುಖ ಮಾಡಿದ. ಅಷ್ಟು ಹೊತ್ತಿಗೆ ರಾಧಮ್ಮ ಬಂದಳು.
"ತಾರಾ ಇಲ್ಲಿದಾಳಾ? ಮನೇಲಿ ಇಲ್ಲದ್ದನ್ನು ಕಂಡು ಗಾಬರಿಯಾಯ್ತು. ಇವರನ್ನು ಕೇಳಿದರೆ ಬಂದೇ ಇಲ್ಲ ಅಂತ ಅಂದು ಬಿಟ್ರು......."
"ನಾನೇ ಇಲ್ಲಿಗೆ ಕರೆದುಕೊಂಡು ಬಂದೆ.... ಅಲ್ಲಿ ಒಬ್ಬಳೇ ಸುಮ್ಮನೆ ಚಿಂತೆ ಮಾಡ್ತಾ ಕೂತಿರುತ್ತಾಳೆ ಅಂತ."

"ಒಳ್ಳೇದಾಯ್ತು.... ನಾನು ಮತ್ತೆ ಆಸ್ಪತ್ರೆಗೆ ಹೋಗಬೇಕು. ರಾತ್ರಿ ಒಬ್ಬರು ಜತೆಗಿರಬೇಕಲ್ಲ. ಇವಳಪ್ಪ ಬರೋವರೆಗೆ ಬೇಕಾದ್ರೆ ಇವಳು ಇಲ್ಲೇ ಇರಲಿ. ಶಾಂತಮ್ಮ ಎಲ್ಲಿ ಕಾಣಿಸ್ತಿಲ್ಲ"

"ಮಲಗಿದಾಳೆ. ಮತ್ತೆ ತಲೆನೋವಂತೆ."

"ಹಾಳಾದ ಅರೆ ತಲೆನೋವು ಹಾಗೇನೇ. ಒಂದು ಸಾರಿ ಬಂದರೆ, ಮೂರು ಮೂರು ದಿನ ಸತಾಯಿಸುತ್ತೆ."

"ಈ ಮುಂಚೆ ಅಮ್ಮನಿಗೆ ತಲೆನೋವು ಬಂದರೆ ಒಂದೇ ದಿನದಲ್ಲಿ ವಾಸಿಯಾಗುತ್ತಿತ್ತಲ್ಲ....."

"ಅದು ಬರೀ ತಲೆನೋವು. ಇದು ಅರೆ ತಲೆನೋವು.... ಇವಳ ಅಮ್ಮ ಕಷಾಯ ಮಾಡಿಕೊಟ್ಟಿದಾಳೆ. ಅದರಿಂದ ಎಷ್ಟೋ ಆರಾಮ.... ಇಲ್ಲದಿದ್ದರೆ, ಹೊಟ್ಟೆ ತೊಳೆಸಿ ವಾಂತಿಯಾಗುತ್ತೆ" ಊಟ ಮಾಡುತ್ತಿದ್ದ ಸುಮಂತ ಕೆಟ್ಟ ಮುಖ ಮಾಡಿದ.

"ಯಾರು? ರಾಧಮ್ಮನಾ?" ಎನ್ನುತ್ತಾ ಶಾಂತ ಹೊರಗೆದ್ದು ಬಂದಳು. ತಾರಾ ಕತ್ತು ಬಗ್ಗಿಸಿ ಕೂತಳು. "ಇನ್ನು ಊಟ ಮುಗಿದಲ್ವೇನೋ... ಈ ಹುಡುಗಿ ಯಾರು?"

"ತಾರಾ....."

"ಇದೇನೋ ಮದುವೆಗೆ ಮುಂಚೇನೇ ನಿನ್ನ ಪಕ್ಕ ಊಟಕ್ಕೆ ಕೂರಿಸಿಕೊಂಡಿದೀಯ?" ಅವಳ ತಮಾಷೆ ಅವನಿಗೆ ಬೇಕಿರಲಿಲ್ಲ. ಮುಖ ಕೆಂಪಾಗಿತ್ತು. ಕೈ ತೊಳೆದು ಎದ್ದ.

"ನಮ್ಮ ಮನೆ ಅಡಿಗೆ ನಿನಗೆ ರುಚಿಸುತ್ತೋ ಇಲ್ಲವೋ..... ನಿಮ್ಮ ತಾಯಿ ತುಂಬಾ ಚೆನ್ನಾಗಿ ಅಡಿಗೆ ಕೆಲಸ ಮಾಡ್ತಾರೆ ಅಂತ ರಾಧಮ್ಮ ಹೊಗಳ್ತಾನೇ ಇರ್ತಾರೆ. ನಿನಗೂ ಎಲ್ಲಾ ಬರುತ್ತಂತೆ."

"ಹೂಂ. ಸುಮಾರಾಗಿ ಕಲಿತಿದೀನಿ....."

"ನಮ್ಮ ಸುಮಂತ ತಿಂಡಿಪೋತ.. ಅವನ ಅಪ್ಪನೋ ಅವನನ್ನು ಮೀರಿಸಿದವರು. ನನಗೆ ಇಷ್ಟು ವರ್ಷದ ಅನುಭವವಾಗಿದೆ. ಸದಾ ಏನಾದ್ರೂ ಕುಂದು ಕೊರತೇನ ಹುಡುಕ್ತಾನೇ ಇರ್ತಾರೆ"

"ತಾರಾ, ಊಟ ಆಗಿದ್ರೆ ಕೈ ತೊಳಕೋ....." ರಾಧಮ್ಮ ನುಡಿದಾಗ ತಾರಾ ಎದ್ದಳು. ತಟ್ಟೆಗಳನ್ನು ತೊಳೆದಿಟ್ಟು ಗೋಮೆ ಹಚ್ಚಿದಳು. ನೆಲ ಒರಸಿದಳು.

"ಪರವಾಗಿಲ್ಲ ಅಚ್ಚುಕಟ್ಟಾಗಿ ಕೆಲಸ ಮಾಡ್ತೀಯ...." ಶಾಂತ ಶಹಭಾಸ್‌ಗಿರಿ ಕೊಟ್ಟಳು. ಸುಮಂತ ಹೊರಬಾಗಿಲಲ್ಲಿ ನಿಂತು ತಾಯಿಯ ಮಾತುಗಳನ್ನೇ ಆಲಿಸುತ್ತಿದ್ದ. ವನಜ ಅವರಿಬ್ಬರಿಗೂ ಕುಂಕುಮ ಕೊಟ್ಟಳು. ಇಬ್ಬರೂ ಹೊರಟರು. ಸುಮಂತ ರಾಧಮ್ಮಳಿಗೆ ಕಾಣದಂತೆ, ತಾರಾಳ ಕೈ ಹಿಡಿದು ಮೆಲ್ಲಗೆ ಒತ್ತಿ ಬಿಟ್ಟ. ತಾರಾ ಬೆವತು ಹೋಗಿದ್ದಳು.

* * *

- - 28 - -

ಒಂದು ವಾರ ಆಸ್ಪತ್ರೆಯಲ್ಲಿದ್ದು ಡಿಸ್ಚಾರ್ಜ್ ಆಗಿ ಬಂದವರನ್ನು ನೋಡಲೆಂದು ವನಜ ಹಾಗೂ ಶಾಂತ ರಾಧಮ್ಮನ ಮನೆಗೆ ಬಂದರು.

"ಸಧ್ಯ ಹುಶಾರಾಗಿ ಮನೆಗೆ ಬಂದ್ರಲ್ಲ..... ನಂಗಂತೂ ಜೀವದಲ್ಲಿ ಜೀವವಿರಲಿಲ್ಲ" ಸುಜಾತಳನ್ನೇ ನೋಡುತ್ತಾ ಹೇಳಿದಳು. ಮುಖದಲ್ಲಿ ಆದ ಸಣ್ಣ ಪುಟ್ಟ ಸುಟ್ಟ ಗಾಯಗಳ ಕರೆ, ಅವಳ ನಿಜರೂಪವನ್ನು ಮರೆಸಿತ್ತು. ಶಾಂತಳಿಗೆ ಅವಳ ಗುರುತು ಸಿಕ್ಕಿರಲಿಲ್ಲ.

ಕತ್ತಿನಲ್ಲಿ ಆದ ಗಾಯದಲ್ಲಿ ಬ್ಯಾಂಡೇಜ್ ಇತ್ತು. ಹಾಗಾಗಿ ಅವಳು ಹೆಚ್ಚಿಗೆ ಮಾತನಾಡುವಂತಿರಲಿಲ್ಲ. ಇದೆಲ್ಲ ತನ್ನ ಭಾಗಕ್ಕೆ ವರವೆಂದೇ ಬಗೆದಳು ಸುಜಾತ.

"ಬೇಗ ಹುಶಾರಾಗಿ ಎದ್ದು ಓಡಾಡುವಂತೆ ಆಗಿ..... ನಾನು ಊರಿಗೆ ಹೋಗಿ ಬರ್ತೀನಿ. ಮದುವೆಯ ದಿನಗಳನ್ನು ಗೊತ್ತು ಮಾಡಬೇಕು..." ವನಜ ನುಡಿದಾಗ, ಶಾಂತ ಎದ್ದು ನಿಂತಳು....

"ಸುಮಂತ, ಬರೋ ಹೊತ್ತಾಯ್ತು. ನಾವಿನ್ನು ಬರ್ತೀವಿ" ಅಲ್ಲಿಯೇ ನಿಂತಿದ್ದ ತಾರಾ ಇಬ್ಬರಿಗೂ ಕುಂಕುಮ ಕೊಟ್ಟಳು.

"ಪಾಪ, ಹುಡುಗಿ ಮನಸ್ಸಿಗೆ ತುಂಬಾ ಹಚ್ಚಿಕೊಂಡು ಬಿಟ್ಟಿದೆ. ಹೇಗಿದ್ದ ಮುಖ ಹೇಗಾಗಿದೆ" ಶಾಂತ ಲೊಚಗುಟ್ಟಿದಳು. ತಾರಾ ಸುಮ್ಮನೆ ಮುಗುಳ್ನಕ್ಕಳು. ಅವರಿಬ್ಬರೂ ಹೊರಗೆ ಬರುವುದಕ್ಕೂ, ಸುಮಂತನ ಬೈಕ್ ಆ ಮನೆಯ ಮುಂದೆ ನಿಲ್ಲುವುದಕ್ಕೂ ಸರಿ ಹೋಯಿತು.

"ಇದೇನೋ ನನ್ನನ್ನ ಹುಡುಕಿಕೊಂಡು ಬಂದ್ಯಾ? ಮನೆಗೇ ಹೊರಟಿದೀವಿ.... ನಡೀ ಮನೆಗೆ."

"ಈಗ ಬಂದು ಬಿಡ್ತೀನಮ್ಮ. ಆಂಟಿ ಹೇಗಿದಾರೇಂತ ನೋಡಿ ಬರ್ತೀನಿ."

ಅವನು ಏನು ಹೇಳ್ತಿದಾನೆ ಅಂತ ಅರ್ಥವಾಗುವಷ್ಟರಲ್ಲಿ ಸುಮಂತ ಆ ಮನೆಯೊಳಗೆ ಹೋಗಿ ಆಗಿತ್ತು. ಇದೇನು ಅತಿರೇಕ ಅಂತ ಅನ್ನಿಸದೇ ಇರಲಿಲ್ಲ.

"ಬರ್ತಾನೆ ಬಾ...." ವನಜ ಶಾಂತಳಿಗೆ ಹೇಳಿ ಮುಂದೆ ಮುಂದೆ ನಡೆದಳು. ಶಾಂತ ಹಿಂತಿರುಗಿ ನೋಡುತ್ತಾ ನಡೆದಳು. ಹತ್ತು ಹದಿನೈದು ನಿಮಿಷಗಳ ನಂತರ ಬಂದ ಮಗನನ್ನು ವಿಚಿತ್ರವಾಗಿ ನೋಡಿದಳು.

"ಪರವಾಗಿಲ್ಲ ಆಂಟಿ ಎಷ್ಟು ಬೇಗ ಇಂಪ್ರೂವ್ ಆಗಿದಾರೆ. ಮೊದಲನೇ ದಿನ ನೋಡಿದಾಗ ಅಬ್ಬಾ......! ಆದರೆ ಗುರುತೇ ಸಿಗುಲ್ಲ. ಮುಖವೇ ಬದಲಾಗಿ ಹೋಗಿದೆ."

"ಮುಂಚೆ ನೀನೆಲ್ಲಿ ನೋಡಿದ್ದೆ ಅವರನ್ನ?" ತಕ್ಷಣ ಕೇಳಿದಳು. ತಬ್ಬಿಬ್ಬಾದ ವನಜ ಸಹಾಯಕ್ಕೆ ಬಂದಳು.

"ಅವತ್ತು ಅವರುಗಳು ಬಂದಾಗ ನೋಡಿದ್ನಲ್ಲ...." ಅಬ್ಬ ಎಂದುಕೊಂಡು ಕಣ್ಣಲ್ಲೇ ಅತ್ತೆಗೆ ಥ್ಯಾಂಕ್ಸ್ ಹೇಳಿದ.

"ಅವರುಗಳು ಬಂದಾಗ ನಾನು ಮಲಗಿದ್ದೆ. ನಾನು ಎದ್ದಾಗ, ಆಕೆ ಮನೆಗೆ ಹೊರಟು ಹೋಗಿದ್ದಳು. ನಾನು ಆಕೆಯ ಮುಖವನ್ನು ನೋಡಿಯೇ ಇಲ್ಲ...."

"ವಯಸ್ಸಾಗಿತ್ತು. ಒಂಥರಾ ಚೆನ್ನಾಗಿದ್ದರು. ಮುಖದಲ್ಲಿ ಕಳೆ ಇತ್ತು."

"ನೀವೆಲ್ಲಿ ನೋಡಿದ್ರಿ" ಎಂದು ಕೇಳ ಹೊರಟವಳು ಸುಮ್ಮನಾದಳು.

"ಚೆನ್ನಾಗಿದ್ದಾಗ ಆಕೇನ ನಾನು ನೋಡಲಿಲ್ಲ. ಈಗ ಆಕೆಯ ಮುಖದ ಸ್ವರೂಪವೇ ಬದಲಾಗಿದೆ. ಎಷ್ಟು ತಿಂಗಳುಗಳಾಗುತ್ತೋ ಸರಿ ಹೋಗುಕ್ಕೆ....."

"ಸಧ್ಯಕ್ಕಂತೂ ಸರಿ ಹೋಗುಲ್ಲ. ಈಗೆಲ್ಲ ಪ್ಲಾಸ್ಟಿಕ್ ಸರ್ಜರಿ ಮಾಡಿ ಸರಿ ಮಾಡ್ತಾರೆ...."

"ಏನೋ ಹಾಗಂದ್ರೆ....."

"ನಿಂಗೆ ಗೊತ್ತಾಗುಲ್ಲ ಬಿಡು..... ಆದರೂ ಈಗಿನಂತೆ ಮಾತ್ರ ಕಾಣುಲ್ಲ."

"ಅಯ್ಯೋ ಪಾಪ... ತಮ್ಮ ಪಾಡಿಗೆ ತಮ್ಮ ಊರಿನಲ್ಲಿಯೇ ಇದ್ದಿದ್ದರೆ

ಹೀಗಾಗುತ್ತಿರಲಿಲ್ಲವೇನೋ.... ನಮಗೋಸ್ಕರ ಮಧ್ಯಾಹ್ನ ಬಂದರು... ರಾತ್ರಿಯೇ ಹೀಗಾಯ್ತು..." ಶಾಂತ ಲೊಚಗುಟ್ಟಿದಳು. ವನಜ ತಲೆದೂಗಿದಳು. ಸುಮಂತ ಬೆಬ್ಬರಗಾಗಿ ಅಮ್ಮನನ್ನೇ ನೋಡುತ್ತಿದ್ದ. ವ್ಯಂಗ್ಯವಾಗಿ ಆಡುತ್ತಿರಬಹುದೇ ಎಂಬ ಅನುಮಾನ ಇಣುಕಿತ್ತು.

"ಒಂದು ವಾರ ಇಲ್ಲಿದ್ದು ಊರಿಗೆ ಹೊರಟು ಹೋಗ್ತಾರಂತೆ..... ತಾರಾ ಹೇಳಿದಳು."

"ತಾರಾ ಇನ್ನು ಏನೇನು ಹೇಳಿದಳು.....?"

"ಅವಳೇನೂ ಹೇಳಿಲ್ಲ. ನಾನೂ ಕೇಳಿಲ್ಲ....."

"ಮದುವೆ ವಿಚಾರ......"

"ಮದುವೆ ವಿಚಾರ ಬಂದ್."

"ನಾನೂ ಅದನ್ನೇ ಹೇಳೋಣ ಅಂತಿದ್ದೆ... ಪಾಪ ಅವರ ಕಷ್ಟ ಅವರಿಗೆ. ಅದೆಂಥದೋ ಹೇಳಿದ್ಯಲ್ಲ.... ಪ್ಲಾಸ್ಟಿಕ್ ಆಪರೇಷನ್ ಅಂತ.... ಅದಕ್ಕೆ ಎಷ್ಟು ಸಾವಿರ ಖರ್ಚಾಗುತ್ತೋ...... ಮದುವೆ ಖರ್ಚಿಗೆ ಎಲ್ಲಿಂದ ದುಡ್ಡು ತರ್ತಾರೆ.... ಈ ವಿಚಾರಾನ ಇಲ್ಲಿಗೇ ನಿಲ್ಲಿಸಿ ಬಿಡೋಣ....." ತಾಯಿಯ ಅಂತರಂಗ ಅರ್ಥವಾಗಿತ್ತು.

"ಮುಂಚಿನಂತೆ, ಆ ಹುಡುಗಿಯ ಹತ್ತಿರ ಮಾತನಾಡಬೇಡ. ನಮಗೇನಾಗಬೇಕಾಗಿದೆ? ಆಮೇಲೆ ಆ ಹುಡುಗಿಯ ಮದುವೆಗೆ ಕಷ್ಟವಾದೀತು...."

"ಏನಮ್ಮ ಏನು ಹೇಳ್ತಿದೀಯ... ನಂಗಂತೂ ಅರ್ಥವಾಗ್ತಿಲ್ಲ...."

"ತಾರನ್ನ ನೋಡಿದ್ದೆ... ಒಪ್ಪಿದ್ದೆ ಅನ್ನೋ ವಿಚಾರಾನ ಮರೆತುಬಿಡು."

"ಯಾಕಮ್ಮ ಹೀಗೆ ಮಾತ್ನಾಡ್ತೀಯ.... ಒಂದು ಆಕಸ್ಮಿಕ ಘಟನೆಯಿಂದ ಸಂಬಂಧವೇ ಮರೆತು ಹೋಗುತ್ತಾ. ನಾನು ಅವಳನ್ನು ಪ್ರೀತಿಸ್ತಿದೀನಿ."

ಚಪ್ಪಾಳೆ ತಟ್ಟಿ ತನ್ನ ಸಂತೋಷವನ್ನು ವ್ಯಕ್ತಪಡಿಸಬೇಕೆನ್ನಿಸಿತ್ತು ವನಜಳಿಗೆ. ಆದರೆ ಶಾಂತಾ ಎದುರಿಗಿದ್ದಳಾದ್ದರಿಂದ ತಡೆದುಕೊಂಡಳು.

"ಇಷ್ಟು ಬೇಗ? ಪ್ರೀತಿ? ಅದು ಹೇಗಾಯ್ತು?"

"ಪ್ರೀತಿ ಹುಟ್ಟೋಕ್ಕೆ ಒಂದು ನಿಮಿಷ ಸಾಕಮ್ಮ....."

"ಅದನ್ನೆಲ್ಲ ನಂಬುಲ್ಲ"

"ಒಬ್ಬರ ಮುಖ ಒಬ್ಬರು ನೋಡಿರುಲ್ಲ... ಮದುವೆಯಾದ ಮೇಲೆ ಗಂಡ ಹೆಂಡತಿ ಒಬ್ಬರನ್ನೊಬ್ಬರು ಎಷ್ಟು ಪ್ರೀತಿಸ್ತೀರಿ? ಆಗ ಹೇಗೆ ಪ್ರೀತಿ ಹುಟ್ಟುತ್ತೆ....?"

"ಆ ಪ್ರೀತೀನೇ ನಿಜವಾದ ಪ್ರೀತಿ....."

"ಈ ಪ್ರೀತೀನ ನಿಜ ಅಲ್ಲ ಅಂತ ಯಾರು ಹೇಳಿದ್ರು?"

"ನಾನು ಹೇಳ್ತೀನಿ ನಾನು.... ಈಚೀಚೆಗೆ ಯದ್ವಾ ತದ್ವಾ ಮಾತನ್ನಾಡ್ತೀಯ. ನಾನು ಈ ಮದುವೆಗೆ ಒಪ್ಪಲ್ಲ."

"ಬಿಡಮ್ಮ.. ಈ ಹುಡುಗಿಯ ಜೊತೆ ಮದುವೆ ಮಾಡಿಸ್ತೀನಿ ಅಂತ ಹೇಳಿದೋಳೇ ನೀನು. ಆಕೆಯನ್ನು ಕರೆಸಿದವಳು ನೀನು..... ನನ್ನ ಪಾಡಿಗೆ ನಾನು ಹಾಯಾಗಿದ್ದೆ. ಈಗ ಆಕೆಯಮ ಮುಖ ಸುಟ್ಟು ಹೋಗಿದ್ದಕ್ಕೆ, ಈ ಸಂಬಂಧಾನೇ ಮರೆತು ಬಿಡು ಅಂತೀಯಲ್ಲ. ನನ್ನ ಹೃದಯಲ್ಲಿ ಒಂದು ಹುಡುಗಿಯ ಪ್ರೀತಿಯನ್ನು ಹುಟ್ಟಿಸಿ, ಈಗ ಸುಟ್ಟು ಹಾಕ್ತಿದೀಯಲ್ಲ.... ಇದು ನ್ಯಾಯಾನಾ? ತಾಯಿಯಾದೋಳೇ ಮಗನಿಗೆ ಹೀಗೆ ಅನ್ಯಾಯ ಮಾಡಬಹುದಾ?" ಮಗನನ್ನೇ ವಿಚಿತ್ರವಾಗಿ ನೋಡಿದಳು. ಇಷ್ಟೊಂದು ಮಾತನ್ನು ಇವನೆಲ್ಲಿ ಕಲಿತ? ನಾನು ಅಂದುಕೊಂಡಂತೆ ಇವನು ಮುಗ್ಧನಲ್ಲ. ತಾಯಿ

ಸುಮ್ಮನಿದ್ದುದನ್ನು ಕಂಡು ತನ್ನ ಪಾಡಿಗೆ ತನ್ನ ರೂಮಿಗೆ ಬಂದ.

"ಏನೇ ಶಾಂತಾ..... ನಿನ್ನ ಮಗ ವಿಪರೀತ ಮಾತಾಡ್ತಾನೆ. ಈಗ ಏನು ಮಾಡ್ತೀಯ?"

"ನಂಗೇನು ಮಾಡಬೇಕು ಅಂತ ಗೊತ್ತಾಗ್ತಿಲ್ಲ. ನೀವೇ ಹೇಳಿ."

"ಪ್ರೀತಿ ಗೀತಿ ಅಂತ ಪ್ರಾರಂಭವಾದ ಮೇಲೆ, ಅವರುಗಳ ಇಷ್ಟದಂತೆ, ಮದುವೆ ಮಾಡಿಬಿಟ್ಟರೆ ನಘುಗೇ ನೆಮ್ಮದಿ. ಇಲ್ಲದಿದ್ದರೆ, ನಿಮ್ಮಣ್ಣನ ಸಂಸಾರದ ಗತಿ ಬರುತ್ತೆ ಅಷ್ಟೆ."

"ಥೂ ಹಾಗೆಲ್ಲ ಮಾತನಾಡಬೇಡಿ. ನಮ್ಮ ಅನಂತನಂತೆ ಈ ಸುಮಂತನಾಗಬಾರದು. ಅವನ ಸಂಸಾರ ಸದಾ ಚೆನ್ನಾಗಿರಬೇಕು. ಅದೇ ನನ್ನ ಆಸೆ.

"ಹಾಗಾದರೆ ಅವನ ಆಸೆಗೆ ಒಪ್ಪಿದ್ರಾ?" ನೆಮ್ಮದಿ ತುಳುಕಿತ್ತು.

"ಹೂಂ. ಅತ್ತಿಗೆ ಮತ್ತೇನು ಮಾಡಲಿ? ಅಣ್ಣ ಮಾಡಿದ ತಪ್ಪನ್ನು ನಾನೆಂದೂ ಕ್ಷಮಿಸುಲ್ಲ...... ಸುಮಂತ ಅಂಥಾ ತಪ್ಪು ಮಾಡಲು ಬಿಡುವುದಿಲ್ಲ."

"ನಿಜಕ್ಕೂ ನನಗೆಷ್ಟು ಸಂತೋಷವಾಗ್ತಿದೆ ಗೊತ್ತಾ ಶಾಂತಾ.... ಭಾವ ಬಂದೇ ಇಲ್ಲ. ಅವರಿಗೆಷ್ಟು ಸಂತೋಷವಾಗುತ್ತೋ..... ನಾನೀಗಲೇ ಸುಮಂತನಿಗೆ ಹೇಳ್ತೀನಿ...."

"ನಾನು ದೇವರಿಗೆ ತುಪ್ಪದ ದೀಪ ಹಚ್ಚಿ ಬಿಟ್ಟು ನಮಸ್ಕಾರ ಮಾಡಿ ಬರ್ತೀನಿ.... ದೇವರೇ ನನಗೆ ಈ ಪ್ರೇರಣೆ ನೀಡಿದ್ದು....."

"ಹೌದು ಶಾಂತಾ..... ದೇವರೇ ನಮಗೆ ದಾರಿ ತೋರಿಸುವವನು. ಅವನ ಅಪ್ಪಣೆ ಇಲ್ಲದೇ ನಾವು ಒಂದು ಹೆಜ್ಜೆ ಇಡುವಂತಿಲ್ಲ" ಇಬ್ಬರೂ ದೇವರ ಮುಂದೆ ಕುಳಿತು ಭಕ್ತಿ ಗೀತೆಗಳನ್ನು ಹಾಡಿದರು. ಸುಮಂತನಿಗೆ ಆಶ್ಚರ್ಯವಾಗಿತ್ತು.

ಅಮ್ಮನಿಗೆ ಈ ಮದುವೆ ನಿಲ್ಲಿಸುವ ವಿಷಯದಲ್ಲಿ ಎಷ್ಟು ಖುಷಿ? ಈ ತಾರಾಳಿಗೋಸ್ಕರ, ನಾನು ಎಷ್ಟೆಷ್ಟು ಮಾತಾಡಿದೆ? ಏನೇನು ನಾಟಕ ಆಡಿದೆ? ಒಂದೇ ಮಾತಿನಲ್ಲಿ ಎಲ್ಲವನ್ನು ಮರೆತು ಬಿಡು ಅಂತಂದಳಲ್ಲ.... ಈ ಜನ್ಮದಲ್ಲಿ ನಾನು ತಾರಾಳನ್ನು ಮರೆಯಲು ಸಾಧ್ಯವೇ? ಅವಳನ್ನೇ ಮದುವೆಯಾಗ್ತೀನಿ..... ನಾನು ಬೇಗ ಒಂದು ತೀರ್ಮಾನಕ್ಕೆ ಬರದಿದ್ದರೆ, ಅಮ್ಮನ ಮಾತು ನಿಜವಾಗಿ ಬಿಟ್ಟರೇ..... ಹಾಗಾಗಬಾರದು. ಅಮ್ಮ ಏನಾದರೂ ಯೋಚನೆ ಮಾಡಲು ಅವಳಿಗೆ ಅವಕಾಶವನ್ನೇ ಕೊಡಬಾರದು. ಈಗಲೇ ಹೇಳಿಬಿಡ್ತೀನಿ ಅಂತ ಹೊರಗೆ ಬಂದ.

ತಾಯಿ ಹೊರಗೆಲ್ಲೂ ಕಾಣಲಿಲ್ಲ. ಅತ್ತೆ ದೇವರ ಮುಂದೆ ಕುಳಿತು ಏನೋ ಗುಣುಗುಣಿಸುತ್ತಿದ್ದುದನ್ನು ಕಂಡ. ತಂದೆಯೂ ಬಂದಿಲ್ಲ. ಅಮ್ಮ ರಾಧಮ್ಮನ ಮನೆಗೇ ಹೋಗಿರಬಹುದು. ಅಲ್ಲಿ ಏನೇನು ಮಾತಾಡಿ ಬಿಡುವಳೋ..... ತಾನು ಹೋಗಿ ತಡೆಯಬೇಕು ಎಂದುಕೊಂಡು ರಾಧಮ್ಮನ ಮನೆಗೆ ಬಂದ.

ಮುಂಬಾಗಿಲಿನಲ್ಲಿ ತಾರಾ ನಿಂತಿದ್ದಳು. ಗೇಟಿನ ಬಳಿ ಇವನನ್ನು ಕಂಡೊಡನೆ ಇವನ ಬಳಿಗೆ ಓಡಿ ಬಂದಳು. "ಕಂಗ್ರಾಟ್ಸ್" ಎಂದಳು ಇವನ ಕೈ ಕುಲುಕಿ. "ನಮ್ಮಮ್ಮ ಇಲ್ಲಿ ಬಂದಿದಾಳಾ?"

"ಹೂಂ ಬಂದಿದಾರೆ....."

"ಮತ್ತೆ ಈ ಕಂಗ್ರಾಟ್ಸ್ ಯಾಕೆ? ಅವಳು ಏನು ಹೇಳುಕ್ಕೆ ಬಂದಿದಾಳೆ ಅಂತ ನನಗೆ ಚೆನ್ನಾಗಿ ಗೊತ್ತು.... ನಾನು ಹೋಗಿ ತಡೀ ಬೇಕು....."

"ಯಾಕೆ ಹೀಗೆ ಎಕ್ಸೈಟ್ ಆಗಿದೀರಿ.....? ನಿಮ್ಮ ತಂದೆ ತಾಯಿ ಮುಖ್ಯವಾದ ವಿಚಾರವನ್ನು ಮಾತನಾಡಲು ಬಂದಿದಾರೆ."

"ಅಪ್ಪನೂ ಬಂದಿದಾರಾ? ಯಾಕೆ?"

"ಯಾಕೆ ಹೀಗಾಡ್ತಿದೀರಿ? ನಮ್ಮ ಎಂಗೇಜ್‌ಮೆಂಟ್ ವಿಚಾರಾನ ಮಾತನಾಡುಕ್ಕೆ ಬಂದಿದಾರೆ....."

"ಏನಂದೆ? ಎಂಗೇಜ್‌ಮೆಂಟ್.... ಯಾರದ್ದು?" ನಂಬದವನಂತೆ ಕೇಳಿದ್ದ.

"ನಮ್ಮದೇ......" ನಾಚಿಕೆಯಿಂದ ತಲೆ ತಗ್ಗಿಸಿದಳು.

"ನಿಜಾನಾ? ನಾನು ಅಮ್ಮನ್ನ ತಪ್ಪು ತಿಳಿದುಕೊಂಡಿದ್ದೆ....."

"ಇದ್ದಕ್ಕಿದ್ದಂತೆ ಅವರುಗಳು ಬಂದಾಗ, ನನಗೂ ಆತಂಕವಾಗಿತ್ತು. ಅಮ್ಮನಿಗೆ ಹುಶಾರಿಲ್ಲ.... ಏನು ಮಾತುಗಳು ಬರುತ್ತೋ ಅಂತ ಗಾಬರಿಯಾಗಿತ್ತು."

"ನನಗೆ ಏನೇನೋ ಆಗ್ತಿದೆ..... ನಾನು ಮನೆಗೆ ಹೋಗ್ತೀನಿ. ನಾನು ಬಂದಿದ್ದೆ ಅಂತ ಯಾರಿಗೂ ಹೇಳಬೇಡ. ಅಂತೂ ನಮ್ಮ ಪ್ರೇಮ ಪ್ರಕರಣಕ್ಕೆ ನಾಂದಿಯ ಸಮಯ ಬಂತು....."

"ಈ ನಡುವೆ ತುಂಬಾ ಆತಂಕವಾಗಿತ್ತು... ನಿಮ್ಮ ನಾಟಕ ನೋಡಿ, ನಮ್ಮ ರಹಸ್ಯ ಎಲ್ಲಿ ಹೊರಬೀಳುತ್ತೋ ಅಂತ ಗಾಬರಿಯಾಗ್ತಿತ್ತು."

"ಏನೇ ಆಗಿದ್ರೂ ನಾನು ನಿನ್ನ ಕೈ ಬಿಡುತ್ತಿರಲಿಲ್ಲ..... ಆದರೆ ಅಮ್ಮನೇ ಮುಂದಾಗಿ ನಿಂತು ನಮ್ಮ ಮದುವೆ ನಡೆಸಲಿ ಅಂತ ಅನಿಸ್ತಿತ್ತು. ತಂದೆ ತಾಯಿಗಳ ಆಶೀರ್ವಾದ ಬೇಕೇ ಬೇಕು ಅಲ್ವಾ?"

"ನಾಟಕ ಆಡ್ತಾ ಆಡ್ತಾ ವಿಪರೀತ ಡೈಲಾಗ್ ಹೊಡೆಯುವುದನ್ನು ಅಭ್ಯಾಸ ಮಾಡಿಕೊಂಡಿದೀರಿ. ನೀವು ಮುಂಚಿನ ಸುಮಂತ್ ಅಂತ ಅನ್ನಿಸ್ತಾನೇ ಇಲ್ಲ."

"ಮುಂಚಿನ ಸುಮಂತ್ ಹೇಗಿದ್ದ......? ಸ್ವಲ್ಪ ಹೇಳ್ತೀಯಾ?"

"ನನ್ನ ನಿಮ್ಮ ಸ್ನೇಹವಾದ ಹೊಸದರಲ್ಲಿ ಸತೀಶನೇ ಎಲ್ಲಾ ಮಾತಾಡ್ತಿದ್ದ. ನಾವುಗಳು ಎಂಜಾಯ್ ಮಾಡ್ತಿದ್ದೆವು."

"ಹೌದಲ್ವಾ?..... ಸತೀಶನಿಗೆ ಈ ನ್ಯೂಸ್ ಮೊದಲು ತಿಳಿಸಬೇಕು. ನಾನೂ ಈಗಲೇ ಹೋಗಿ ಬರ್ತೀನಿ. ನಾನು ಬಂದಿದ್ದೆ ಅಂತ ಮಾತ್ರ ಯಾರಿಗೂ ಹೇಳಬೇಡ..... ಗುಡ್‌ನೈಟ್" ಎಂದು ಹೇಳಿ, "ನಿಮಗೂ ಕಂಗ್ರಾಟ್ಸ್ ರೂಪತಾರಾ" ಎಂದ ಗೇಲಿ ಮಾಡುತ್ತಾ.

"ಅರೇ! ನಿಮಗೆ ಹೇಗೆ ತಿಳೀತು......?"

"ಒಂದು ಹುಡುಗಿಯನ್ನು ಮದುವೆಯಾಗುವಾಗ, ಹೆಸರು, ಕುಲ, ಗೋತ್ರ, ಜಾತಕ ಎಲ್ಲಾ ಮುಖ್ಯ..... ರೂಪಾರಪರೇ....." ಎನ್ನುತ್ತಾ ಅವಳೆಡೆಗೆ ಬಾಗಿದ. ಅವಳು ಗಾಬರಿಯಿಂದ ದೂರ ತಳ್ಳಿದಳು.

"ಶ್..... ಯಾರಾದ್ರೂ ನೋಡಿದರೆ..... ಈಗ ಹೋಗಿ, ನಾಳೆ ಆಫೀಸ್ನಲ್ಲಿ ಮಾತನಾಡೋಣ..... ಗುಡ್‌ನೈಟ್ ಸೋಮು...." ಎಂದು ಹೇಳಿ ಕಿಲಕಿಲನೆ ನಕ್ಕು ಅವನ ಕೈಗೆ ಸಿಗದಂತೆ ಓಡಿ ಒಳಗೆ ಹೊರಟು ಹೋದಳು.

"ನಾಳೆ ಸಿಗು..... ಮಾಡ್ತೀನಿ" ಎಂದು ತನಗೆ ತಾನೇ ಹೇಳಿಕೊಂಡು, ಮನೆಗೆ ಬಂದ.

"ಎಲ್ಲಿಗೆ ಹೋಗಿದ್ದೋ ಸೋಮು..... ರೂಮಿನಲ್ಲಿರಲಿಲ್ಲ. ಎಲ್ಲಿ ಹೋದ್ನೋ ಅಂತ ಅಂದುಕೊಂಡೆ."

"ಎಲ್ಲಿಗೂ ಹೋಗಿರಲಿಲ್ಲ. ಈಗ ಹೋಗ್ತಾ ಇದೀನಿ.... ಸತೀಶನ ಮನೆಗೆ" ಎಂದು

ಹೇಳಿ ಬೈಕ್ ಬಳಿಗೆ ಬಂದ....

"ನಿಮ್ಮಪ್ಪ ನಿಮ್ಮಮ್ಮ ಇಬ್ಬರೂ, ನಿನ್ನ ಮದುವೆ ವಿಚಾರ ಮಾತಾಡುಕ್ಕೆ ರಾಧಮ್ಮನ ಮನೆಗೆ ಹೋಗಿದಾರೆ. ಅದನ್ನೇ ಹೇಳೋಣ ಅಂತ ಹುಡುಕ್ದೆ ನಿನ್ನನ್ನ" ಆ ಮಾತಿಗೆ ಏನೂ ಹೇಳದೇ ತನ್ನ ಪಾಡಿಗೆ ತಾನು ಹೊರಟು ಹೋದ.

ಎಷ್ಟೋ ಹೊತ್ತಿಗೆ ಗಂಡ ಹೆಂಡತಿ ವಾಪಸ್ಸಾದರು. ಆದರೆ ಶಾಂತಳ ಮುಖದಲ್ಲಿ ಮಂದಹಾಸವಿರಲಿಲ್ಲ. ಏನೋ ಅತೃಪ್ತಿಯ ಕಳೆ. ಮಗನಿಗಾಗಿ ತಾನು ತನ್ನತನವನ್ನೇ ತ್ಯಾಗ ಮಾಡಿಬಿಟ್ಟಿರುವೆನೆಂಬ ಉದಾಸೀನ, ಮುಖದಲ್ಲಿ ಎದ್ದು ಕಾಣುತ್ತಿತ್ತು.

"ನಾಡಿದ್ದೇ ಸರಳವಾಗಿ ಲಗ್ನಪತ್ರಿಕೆ ಶಾಸ್ತ್ರ ಮಾಡಿಬಿಡುವುದೆಂದು ನಿರ್ಧರಿಸಿದ್ದೇವೆ. ಸುಮಂತ ಎಲ್ಲಿ?" ರಾಮಸ್ವಾಮಿ ಕೇಳಿದ.

"ಎಲ್ಲೋ ಹೊರಗೆ ಹೊರಟು ಹೋದ. ಬರಬಹುದು ಬೇಗನೇ...."

"ಅವನಿಗೆ ಈ ವಿಷಯ ಗೊತ್ತಾಯ್ತಾ?"

"ಇಲ್ಲ.... ನಾನು ಹೇಳುಕ್ಕಾಗಲಿಲ್ಲ....."

"ಸಮಯದಲ್ಲಿ ಎಲ್ಲೋ ಹೊರಟು ಹೋದ್ನಲ್ಲ...." ರಾಮಸ್ವಾಮಿ ಅತ್ತಿಂದಿತ್ತ ಪರದಾಡಿದ.

"ಬಂದ ಮೇಲೆ ತಿಳಿಸಿದರಾಯ್ತು. ಅದಕ್ಕೇಕೆ ಹೀಗೆ ಚಡಪಡಾಯಿಸ್ತಿದೀರಿ....." ಶಾಂತ ತನ್ನ ಅಸಹನೆಯನ್ನು ಹೊರಗೆಡಹಿದಳು.

"ಅವನ ಮದುವೆ ವಿಷಯ, ಅವನಿಗೆ ತಿಳಿಸಬೇಡವೇ......"

"ಅದ್ಯಾಕೆ ಹೀಗೆ ಪುನುಗಿನ ಬೆಕ್ಕಿನ ತರಹ ಆಡ್ತೀರೋ..... ಅವನಿಗೆ ತಿಳಿಸದೇ ಮದುವೆ ಮಾಡೋಕೆ ಆಗುತ್ತಾ?"

"ಹಾಗಲ್ಲ. ನಿನಗದು ಅರ್ಥವಾಗುಲ್ಲ. ಈ ಗಳಿಗೆಗಾಗಿ ಅವನು ಕಾದುಕೊಂಡಿದ್ದ. ಈಗ ಒಂದು ವಾರದಿಂದ ಮನೆಯ ವಾತಾವರಣವೇ ಸರಿಯಿರಲಿಲ್ಲ. ಈಗಲಾದರೂ ಬದಲಾಗಲಿ ಅಂತ...." ಬೈಕ್ ಬಂದು ನಿಂತ ಸದ್ದು ಕೇಳಿಸಿತ್ತು.

"ನೋಡಿ.... ಬಂದ..... ಅದೇನು ಹೇಳಬೇಕೋ.... ಹೇಳಿ.... ನನಗೆ ಒಳಗೆ ಬೇಕಾದಷ್ಟು ಕೆಲಸಗಳಿವೆ...." ಈ ವಿಷಯವನ್ನು ಮಗನೊಡನೆ ಹಂಚಿಕೊಳ್ಳಲು ತನಗೆ ಇಷ್ಟವಿಲ್ಲವೆನ್ನುವಂತೆ ಒಳಗೆ ಹೊರಟು ಹೋದಳು.

"ನೋಡಿದ್ಯಾ ವನಜ..... ಎಲ್ಲಾ ಹೇಗೋ ಆಗುತ್ತೆ.... ಇವಳ ಬುದ್ಧೀನೇ ನನಗೆ ಅರ್ಥವಾಗುಲ್ಲ"

"ಹೋಗಲಿ ಬಿಡಿ ಭಾವ...... ಸಧ್ಯ ಸುಮಂತನ ಆಸೆ ನೆರವೇರಿತಲ್ಲ..... ಶಾಂತ ಪಟ್ಟು ಹಿಡಿದು ಕೂತಿದ್ರೆ ಏನು ಮಾಡಬೇಕಾಗಿತ್ತು."

"ಅವನು ಪಟ್ಟು ಹಿಡಿದು ಕೂತಿದ್ರೆ, ನಾನೇ ನಿಂತು ಸುಮಂತನ ಮದುವೆ ಮಾಡಿಸುತ್ತಿದ್ದೆ... ಆಗ ಶಾಂತ ಏನು ಮಾಡುತ್ತಿದ್ದಳು? ಎಲ್ಲರ ಮನಸ್ಸನ್ನು ಕೆಡಿಸಿ, ಎಲ್ಲರಿಂದ ದೂರವಾಗಿರುತ್ತಿದ್ದಳು ಅಷ್ಟೇ..... ಹಾಗಾಗಬಾರದು ಅಂತ ನಾನು, ಸುಮಂತ ಬಯಸಿದ್ದು......"

"ಸಧ್ಯ ಒಂದು ಘಟ್ಟಕ್ಕೆ ಬಂತಲ್ಲ. ಆಕೆ ಮೈ ಕೈ ಸುಟ್ಟುಕೊಂಡರಲ್ಲ.... ಶಕುನ ಸರಿ ಹೋಗಲಿಲ್ಲ ಅಂತ ಅನ್ನಾಳೇನೋ ಅಂತ ಅಂದ್ಕೊಂಡಿದ್ದೆ."

"ನಂಗೂ ಆ ಭಯವಿತ್ತು. ಹೀಗಾಗಬಾರದಾಗಿತ್ತು ನಿಜ.... ಆದರೆ, ಸುಜಾತಳ ಮುಖದ ಚಹರೆಯೇ ಬದಲಾಗಿ ಹೋಗಿದೆ. ದನಿಯೂ ದಪ್ಪಗಾಗಿದೆ. ಶಾಂತಳಿಗೆ ಅವಳ

ಗುರುತೇ ಸಿಗುವುದಿಲ್ಲ."

"ಒಂದಲ್ಲ ಒಂದು ದಿನ ತಿಳಿದೇ ತಿಳಿಯುತ್ತೆ ಭಾವ..... ಆಗ ಛೀಮಾರಿ ಹಾಕುವುದೇ ನಿಮಗೇ....."

"ಹಾಕಲಿ ಬಿಡು.... ಆಗಲೂ ಹೇಗೋ ಎಲ್ಲಾ ಸರಿಹೋಗುತ್ತೆ......" ಮಗ ಎಷ್ಟು ಹೊತ್ತಾದರೂ ಬರದಿದ್ದಾಗ, ಶಾಂತಳಿಗೂ ಚಡಪಡಿಕೆ ಪ್ರಾರಂಭವಾಗಿತ್ತು. ನಾಲ್ಕಾರು ಸಾರಿ ಮುಂಬಾಗಿಲಿಗೆ ಬಂದು, ರಸ್ತೆಯ ಕಡೆ ನೋಡಿದ್ದಳು.

ತನ್ನ ಮುಖಕ್ಕೆ ಮಸಿ ಬಳಿಯುಕ್ಕೆ, ತಾರಾಳ ಜೊತೆ ಓಡಿಹೋಗಿರಬಹುದೇ ಎಂಬ ಅನುಮಾನ ಸಹ ಕಾಡಿತ್ತು. ರಾಧಮ್ಮನ ಮನೆಗೆ ಹೋಗಿ ತಾರಾ ಮನೇಲಿ ಇದಾಳೋ ಇಲ್ಲವೋ ಎಂದು ನೋಡಿ ಬರಲೇ ಅಂತ ಸಹ ಅಂದುಕೊಂಡಳು.

ಆದರೆ, ಹತ್ತು ಗಂಟೆಯ ಹೊತ್ತಿಗೆ ಮನೆಗೆ ಬಂದ ಮಗನನ್ನು ಕಂಡ ಸಂಭ್ರಮವನ್ನೇನೂ ಸೂಸಲಿಲ್ಲ. ಆದರೆ ನೆಮ್ಮದಿಯಾಗಿತ್ತು. ಅವನ ಹಿಂದೆಯೇ ತಾರಾ ಕಂಡುಬಂದಿರಲಿಲ್ಲ.....

"ಎಲ್ಲಿ ಹೋಗಿದ್ದ್ಯೋ....." ರಾಮಸ್ವಾಮಿ ಕೇಳಿದ.

"ಸತೀಶನ ಮನೆಗೆ ಹೋಗಿದ್ದೆ... ಅವರ ಮನೇಲಿ ವಿ.ಸಿ.ಆರ್. ಇದೆ. ಯಾವುದೋ ಇಂಗ್ಲಿಷ್ ಪಿಕ್ಚರ್‌ನ ಕ್ಯಾಸೆಟ್ ತಂದಿದೀನಿ ಅಂತ ಹೇಳಿದ್ದ. ಹೋಗಿದ್ದೆ."

"ಹೇಳಿದ್ದರೆ ನಾನೂ ಬರುತ್ತಿದ್ದೆ....."

"ಇಂಗ್ಲಿಷ್ ಸಿನಿಮಾ ನಿಮಗೆ ಇಷ್ಟವಾಗುತ್ತೇನಪ್ಪಾ..... ಬೇಕಾದ್ರೆ ನಾವು ಒಂದು ವಿ.ಸಿ.ಆರ್. ತಗಳ್ಳೋಣ....."

"ಏನೂ ಬೇಡ. ಸಿನಿಮಾ ನಾಟಕ ಎಲ್ಲಾ ನಮ್ಮ ಮನೇಲೇ ನಡೀತಾ ಇದೆ....." ಶಾಂತ ಗೊಣಗಿದಳು. ತಂದೆ ಮಗ ಇಬ್ಬರೂ ನಕ್ಕರು.

"ನನಗೆ ಅರ್ಥವಾಗಲಿಲ್ಲ....."

"ನಿಮ್ಮ ಮಗನಿಗೋಸ್ಕರ ಕಾಯ್ತಾ ಇದ್ರಲ್ಲ. ಎಲ್ಲಾ ಹೇಳಿ" ಶಾಂತ ದಪ್ಪ ದನಿಯಲ್ಲಿ ಹೇಳಿದಳು.

"ನೀನೇ ಯಾಕೆ ಹೇಳಬಾರದು? ನೀನೇ ಈ ನಾಟಕದ ಸೂತ್ರಧಾರಿ"

"ಏನಪ್ಪಾ ಇದೆಲ್ಲ...... ಈ ಮನೇಲಿ ಈಚೀಚೆಗೆ, ಮಾತುಗಳು ಸುಲಭವಾಗಿ ಅರ್ಥವೇ ಆಗುವುದಿಲ್ಲ....."

"ಚಿಕ್ಕ ಮಕ್ಕಳಾಗಿದ್ದಾಗ ಎಲ್ಲಾ ಅರ್ಥವಾಗುತ್ತಿತ್ತು... ಈಗ ನನ್ನ ಮಾತುಗಳು ಅಂದ್ರೆ ಹಾಗೇ... ನಿನಗೆ ಬೇಕಿದ್ದರೆ ತಾನೇ....?"

"ಅದಕ್ಕೇ ನಾನು ಅಲ್ಲಿ ಇಲ್ಲಿ ಹೋಗೋದು... ಈ ಮನೇಲಿ ಈ ತರಹದ ಮಾತುಗಳನ್ನು ಬಿಟ್ಟರೆ ಬೇರೆ ಏನಿದೆ....?"

"ಬೇರೆ ಮಾತುಗಳನ್ನು ಆಡುವ ಕಾಲಾನೂ ಬಂದಿದೆ...."

"ಅತ್ತೆ.... ನೀವೂ ಹೀಗೇ ಮಾತಾಡ್ತೀರಾ?" ಬೇಸರಿಸಿದ.

"ಏಳು. ಮೊದಲು ಊಟ ಮಾಡೋಣ. ಎಲ್ಲರಿಗೂ ಹಸಿವಾಗಿದೆ."

"ಅದೇನು ಅಂತ ಹೇಳಿದ್ರೆ ನಾನು ಊಟ ಮಾಡೋದು...."

"ನಿನಗೆ ಸತೀಶನ ಮನೇಲಿ, ಪಗಡದಸ್ತಾಗಿ ತಿಂಡಿಯಾಗಿರಬಹುದು. ನಮಗೆ...." ತಲೆ ಕೆಳಗೆ ಮಾಡಿದ.

"ಯಾಕೆ ರಾಧಮ್ಮನ ಮನೇಲಿ ತಿಂಡಿ ಕೊಡಲಿಲ್ವೇ?" ಕೇಳಿಬಿಟ್ಟ, ಸುಮಂತ ನಾಲಿಗೆ

ಕಚ್ಚಿಕೊಂಡ.

"ಹೂಂ. ನಿನಗೂ ಕಳಿಸಿದಾರೆ... ಬಾ ತಿನ್ನುವಂತೆ" ಅತ್ತೆ ನಗುತ್ತಾ ನುಡಿದಳು.

* * *

ಸರಳವಾಗಿ ಲಗ್ನಪತ್ರಿಕೆಯ ಸಮಾರಂಭ ನೆರವೇರಿತು. ರಾಧಮ್ಮನದೇ ಎಲ್ಲಾ ಓಡಾಟ. ಸತೀಶ ತನ್ನ ಕುಟುಂಬದವರೊಂದಿಗೆ ಬಂದಿದ್ದ. ಸುಜಾತಳಿಗೆ ಹೆಚ್ಚು ಎದ್ದು ಓಡಾಡಲು ಆಗುತ್ತಿರಲಿಲ್ಲವಾದ್ದರಿಂದ, ಅವಳ ಗಂಡನೇ ಎಲ್ಲಾ ಕೆಲಸಗಳಲ್ಲೂ ಮುಂದಾಗಿದ್ದ. ಅವನ ಸಜ್ಜನಿಕೆ, ಸೌಹಾರ್ದತೆ, ನಯ, ವಿನಯ, ಶಾಂತಳಿಗೆ ಹಿಡಿಸಿತ್ತು.

"ಏನೇ ಇರಲಿ, ಆತ ಮಾತ್ರ ತುಂಬಾ ಒಳ್ಳೆಯ ಮನುಷ್ಯ......" ಅಂತ ಹೆಮ್ಮೆಯಿಂದ, ಅತ್ತಿಗೆಯೊಡನೆ ಹೇಳಿಕೊಂಡಿದ್ದಳು.

"ಇದೇ ಮಾತನ್ನು ಭಾವನ ಎದುರಿಗೆ ಆಡೀಯ.... ಯಾವ ಗಂಡನೂ ಇನ್ನೊಬ್ಬ ಗಂಡಸಿನ ಹೊಗಳಿಕೆಯನ್ನು ಸಹಿಸುವುದಿಲ್ಲ."

"ನನ್ನ ಗಂಡನಿಗೆ ಅದೆಲ್ಲಾ ತಿಳಿಯುವುದೇ ಇಲ್ಲ. ತುಂಬಾ ಸಾಧು ಮನುಷ್ಯ. ನನಗಿಂತ ಹೆಚ್ಚಾಗಿ ಅವರೇ ಹೊಗಳುತ್ತಾರೆ. ನೋಡ್ತಿರಿ....."

"ಆದರೆಯ ಅವರು ಯಾವುದಾದ್ರೂ ಹೆಂಗಸನ್ನು ಹೊಗಳಿದರೆ.....?"

"ನನಗೆ ಸಹಿಸುವುದಿಲ್ಲ.... ಅವರನ್ನು ಹೊಗಳಿ, ನನ್ನನ್ನು ತೆಗಳುತ್ತಾರೆ. ಸೊಸೆಯ ಮುಂದೆ ನಾನೆಷ್ಟು ತೆಗಳಿಗೆ ಕೇಳಬೇಕಾಗಿದೆಯೋ?"

"ತೆಗಳಿಕೆ ಅಲ್ಲ ಶಾಂತ.... ಅದೊಂದು ತರಹದ ತಮಾಷೆ.... ನಿನ್ನ ಗಂಡ ಮೊದಲ್ನಿಂದ ರಸಿಕರು, ಹಾಸ್ಯಪ್ರಿಯರು... ಅಂತ ನೀನೇ ಹೇಳ್ತೀಯಾ...."

"ನನಗೆ ಅದೇ ಭಯ. ಸೊಸೆಯ ಎದುರಿಗೂ ಹೀಗೇ ಆಡಿದರೆ?"

"ಸೊಸೆ ಏನು ಹೊರಗಿನವಳೇ.......? ಅಂದ್ರೆ ಈ ಮನೆ ಸೇರಿದ ಮೇಲೆ ಈ ಮನೆಯ ಮಗಳ ತರಹವೇ ತಾನೇ....."

"ಮಗಳು ಅನ್ನುತ್ಲೂ ನೆನಪಿಗೆ ಬಂತು.... ಟೆಲಿಗ್ರಾಂ ಕೊಟ್ಟಿದ್ದರೂ ಆಚಿ ಬರಲೇ ಇಲ್ಲ. ಯಾಕೇಂತ.....? ಅಥವಾ ಇವರು ಟೆಲಿಗ್ರಾಂ ಕೊಡೋದನ್ನೇ ಮರೆದು ಬಿಟ್ಟರೋ....?"

"ಎಂದಾದ್ರೂ ಹಾಗೆ ಮಾಡಿದಾರಾ ಭಾವ..... ಮನೆ ಮಗಳನ್ನ ಮರೀತಾರಾ? ಮಕ್ಕಳಿಗೆ ರಜವಿಲ್ಲದಿರಬಹುದು. ನಾಳೆ ನಾಡಿದ್ದರಲ್ಲಿ ಕಾಗದ ಬರುತ್ತೆ ಬಿಡು."

"ಅತೀ ಸರಳವಾದ ಸಮಾರಂಭ.... ನಾವೇ ನಾಲ್ಕು ಜನ..... ಅವಳು ಮಕ್ಕಳ ಜೊತೆ ಬಂದಿದ್ದರೆ ಮನೆ ತುಂಬಿದ ಹಾಗಾಗಿರುತ್ತಿತ್ತು...."

"ಹೋಗಲಿ ಬಿಡು. ಆಗೋ ಕಾರ್ಯ ಮುಖ್ಯ..... ಅವಸರದಲ್ಲಿ ಆಯಿತಲ್ಲ."

"ಹೆಣ್ಣಿನವರಿಗೆ ಅನುಕೂಲವೇ ಆಯಿತು. ಹೀಗೇ ಮದುವೇನೂ ಅವಸರದಲ್ಲಿ ಮುಗಿಸಿಬಿಡ್ತಾರೋ ಏನೋ.... ಅಂತೂ ನಮ್ಮ ಸುಮಂತನ ಮದುವೆ ಬಗ್ಗೆ ನಾನು ಅಂದುಕೊಂಡಿದ್ದೆಲ್ಲಾ ಸುಳ್ಳಾಯಿತು...." ಶಾಂತ ತನ್ನ ಮನಸ್ಸಿನ ಅಸಮಾಧಾನವನ್ನು ಹೊರಗೆಡಹಿದಳು.

ಮದುವೆ ತಮ್ಮ ಊರಿನಲ್ಲೇ ನಡೆಯಬೇಕೆಂದು, ತಾರಾಳ ತಂದೆ ಕೇಳಿಕೊಂಡಿದ್ದರು. ಇವರುಗಳು ಒಪ್ಪಿದ್ದರು. ಆಚಿ ದೀರ್ಘವಾದ ಪತ್ರವನ್ನು ಬರೆದಿದ್ದಳು. ಸುಮಂತನಿಗೆ ಪ್ರತ್ಯೇಕವಾಗಿ ಬರೆದಿದ್ದಳು.

ಹದಿನೈದು ದಿನ ಮುಂಚಿತವಾಗಿ ಬಂದು ಓಡಾಡುವುದಾಗಿ ತಿಳಿಸಿದ್ದಳು. ನಾನು

ಊರಿಗೆ ಹೋಗಿ, ಮದುವೆಯ ಹೊತ್ತಿಗೆ ವಾಪಸ್ಸು ಬರ್ತೀನಿ ಎಂದು ವನಜ ಹೊರಟಳು. ಆಗ ತಾಯಿ ತಂದೆಯರ ನೆನಪಾಗಿತ್ತು.

"ಅಪ್ಪ ಅಮ್ಮನಿಗೂ ಸಹ ಕರೆಯಲಿಲ್ಲ. ನನಗೆ ಏನು ಮಂಕುತನ ಬಡೀತೋ.. ನೀವಾದ್ರೂ ಹೇಳಬಾರದಾಗಿತ್ತಾ ಅತ್ತಿಗೆ... ಅಮ್ಮ ಏನಂದುಕೊಳ್ತಾಳೋ?"

"ನಾನು ಎಲ್ಲಾ ಹೇಳ್ತೀನಿ. ನೀನು ಯಾಕೆ ಒದ್ದಾಡ್ತೀಯ..... ಮದುವೆಗೆ ಒಂದು ವಾರವಿರುವಾಗಲೇ ನಾವುಗಳು ಖಂಡಿತಾ ಬರ್ತೀವಿ"

"ಅತ್ತೆ ನಾನು ನಿಮಗೆ ಎಷ್ಟು ಥ್ಯಾಂಕ್ಸ್ ಹೇಳಬೇಕೋ ತಿಳೀದು. ಅಂತೂ ಅಮ್ಮನನ್ನು ಒಪ್ಪಿಸುವಲ್ಲಿ ಸಫಲವಾದಿರಿ."

"ಥ್ಯಾಂಕ್ಸ್ ಎಲ್ಲಾ ಯಾಕಪ್ಪಾ.... ನೀನು ನನ್ನ ಮಗ.... ನೀನು ಖುಷಿಯಾಗಿರಲಿ ಅಂತ, ನಾನೂ ನಿನಗೆ ಸಹಾಯಕಳಾದೆ... ನಿಮ್ಮಮ್ಮನಿಗೆ ಗೊತ್ತಾದರೆ ಚೆನ್ನಾಗಿ ಛೀಮಾರಿ ಹಾಕ್ತಾಳೆ. ಯಾರನ್ನು ಬಿಡುಲ್ಲ."

"ಮದುವೆ ಮುಗಿಯುವವರೆಗೂ, ಹೀಗೇ ಇರಲಿ.... ಆಮೇಲೆ ನಿಧಾನವಾಗಿ ತಿಳಿದರೆ ಏನೂ ಪರವಾಗಿಲ್ಲ.... ನನಗೇನೂ ಭಯವಿಲ್ಲ."

"ಅದಕ್ಕೇ ಮದುವೆ ಕಾರ್ಯವೂ ಬೇಗ ನಡೆಯಲಿ ಅಂತ ನಾನು ಹೇಳೋದು..... ಜಾಸ್ತಿ ದಿನ ಅಂತರವಿದ್ದರೆ, ಏನಾದರೂ ಮಾತು ಕಿವಿಯ ಮೇಲೆ ಬೀಳಬಹುದು...."

"ಅಮ್ಮನ್ನೂ ನಿಮ್ಮೂರಿಗೆ ಕರೆದುಕೊಂಡು ಹೋಗಿ ಅತ್ತೆ....."

"ಅವಳು ಅಲ್ಲಿಗೆ ಬಂದರೆ ಇಲ್ಲಿ ಸಿದ್ಧತೆ ಮಾಡೋರು ಯಾರು?"

"ಹಾಗಾದ್ರೆ ನೀವು ಹೋಗಬೇಡಿ....."

"ಹಾಗಾದ್ರೆ ಒಂದು ಕೆಲಸ ಮಾಡ್ತೀನಿ" ಎನ್ನುತ್ತಾ ಶಾಂತಳನ್ನು ಹೊರಡಿಸಿದಳು. ನೀನೂ ತುಂಬಾ ದಿನಗಳಾಯ್ತು ತವರಿಗೆ ಬಂದು... ತಂದೆ ತಾಯಿಯರನ್ನು ನೋಡಿದ ಹಾಗಾಗುತ್ತೆ, ಮುಂದಿನ ವಾರವೇ ಬಂದು ಬಿಡೋಣ ಅಂತ ಹೊರಡಿಸಿದಳು.

"ನಾನು ಊರಲ್ಲಿಲ್ಲ ಅಂತ ಅಪ್ಪ ಮಗ ಇಬ್ಬರೂ ಯದ್ವಾ ತದ್ವಾ ತಿರುಗಾಡಬೇಡಿ.... ಅದೂ ಇದೂ ಹಾಳೂ ಮೂಳೂ ತಿನ್ನಬೇಡಿ.... ನಾನು ಬೇಗ ಬಂದ್ಬಿಡ್ತೀನಿ." ಮನಸ್ಸಿಲ್ಲದ ಮನಸ್ಸಿನಿಂದ ಶಾಂತ ಅತ್ತಿಗೆಯೊಡನೆ ಹೊರಟಳು.

ತಾರಾಳ ತಂದೆ ತಾಯಿ, ತಮ್ಮ ಊರಿಗೆ ಹೊರಟಿದ್ದರು. ತಾರಾ ಮದುವೆಗೆ ಒಂದು ವಾರಕ್ಕೆ ಮುಂಚೆ ರಜ ತೆಗೆದುಕೊಂಡು ಊರಿಗೆ ಹೋಗುವುದಾಗಿ ನಿರ್ಧರಿಸಿದ್ದಳು.

ಹೇಗೂ ಲಗ್ನ ಪತ್ರಿಕೆಯ ಶಾಸ್ತ್ರ ಮುಗಿದಿದೆ. ಇಬ್ಬರೂ ಒಟ್ಟಿಗೇ ತಿರುಗಾಡಿ ಬರಲು ಯಾವ ಬಾಧಕವೂ ಇಲ್ಲವಾದ್ದರಿಂದ, ಪ್ರತಿ ದಿನ ಸಾಯಂಕಾಲ ಆಫೀಸಿನ ಅವಧಿಯ ನಂತರ, ಹೊರಗಡೆ ತಿರುಗಾಡಿ ಬರಲು ಹೋಗಿ ಬರುತ್ತಿದ್ದರು. ಈ ಬಗ್ಗೆ ರಾಮಸ್ವಾಮಿಯದು ಯಾವ ಅಡ್ಡಿಯಿರಲಿಲ್ಲ.

"ಕಾಲ ಬದಲಾಗಿದೆ. ನಮ್ಮ ಕಾಲದಲ್ಲಿ ಮದುವೆಗೆ ಮುಂಚೆ ಒಬ್ಬರ ಮುಖ ನೋಡಲು ಸಹ ಹಿರಿಯರು ಒಪ್ಪುತ್ತಿರಲಿಲ್ಲ. ನಿಮ್ಮದು ಪ್ರೇಮ ವಿವಾಹ. ನಿಮ್ಮ ಪಾಡಿಗೆ ನೀವು ಎಲ್ಲಾದರೂ ಸುತ್ತಾಡಿ ಬನ್ನಿ..... ಚಿಕ್ಕ ವಯಸ್ಸಿನಲ್ಲಿ ನಾನಾ ಆಸೆಗಳಿರುತ್ತವೆ. ಸಣ್ಣ ಸಣ್ಣ ಆಸೆಗಳಿರುತ್ತವೆ. ಅದನ್ನೆಲ್ಲ ಸಮಯ ಸಿಕ್ಕಾಗ ಪೂರೈಸಿಕೊಳ್ಳಬೇಕು. ನಮ್ಮ ಹಾಗೆ ಮುದುಕರಾದ ಮೇಲೆ, ಹಾಗೆ ಮಾಡಲಿಲ್ಲ. ಹೀಗೆ ಮಾಡಲಿಲ್ಲ ಅಂತ ಕೊರಗಬಾರದು."

"ನಂಗೊತ್ತಿತ್ತು. ನೀವು ಹೀಗೇ ಹೇಳ್ತೀರಿ ಅಂತ. ಇದಕ್ಕೇ ಅಮ್ಮನ್ನ ಊರಿಗೆ

ಕಳಿಸಿದ್ರಾ?"

"ಇದಕ್ಕಲ್ಲ. ಆದರೆ ಅವಳು ಸುಮ್ಮನೇ ಇರೋಳಲ್ಲ. ಏನಾದ್ರೂ ವಟಗುಟ್ತಾನೇ ಇರ್ತಾಳೆ. ನಾವುಗಳೂ ಸುಮ್ಮನಿರುಲ್ಲ. ಅದಕ್ಕೇ ನಾಲ್ಕುದಿನ ಅವಳೂ ಹಾಯಾಗಿರಲಿ, ನಾವೂ ಹಾಯಾಗಿರೋಣ ಅಂತ ಕಳಿಸಿಕೊಟ್ಟೆ."

"ನಿಮ್ಮ ಹಾಗೆ ಅಮ್ಮ ನಮ್ಮನ್ನು ಅರ್ಥಾನೇ ಮಾಡಿಕೊಂಡಿಲ್ಲ."

"ಅರ್ಥ ಆಗದೇ ಏನಿಲ್ಲ. ಎಲ್ಲಾ ಅರ್ಥವಾಗುತ್ತೆ..... ಆದರೆ ಏನೋ ಒಂದು ರೀತಿಯ ಪಟ್ಟು ಹಿಡಿದವಳ ಹಾಗೆ ಆಡ್ತಾಳೆ. ಮೊದಲ್ನಿಂದ ನಾನು ತುಂಬಾ ಸ್ವತಂತ್ರ ಕೊಟ್ಟು ಬಿಟ್ಟೆ...." ರಾಮಸ್ವಾಮಿ ನಕ್ಕ.

"ಏನಪ್ಪಾ ಇದರ ಅರ್ಥ..... ನನಗೆ ಸೂಚ್ಯವಾಗಿ ಹೇಳ್ತಿದೀರಾ?"

"ಹಾಗೇನಿಲ್ಲಪ್ಪಾ..... ನಿಮ್ಮಮ್ಮ ಮದುವೆಯಾಗಿ ಬಂದಾಗ, ಅವಳಿಗೆ ಅತ್ತೆ ಮಾವ, ಅತ್ತಿಗೆ ನಾದಿನಿ ಯಾರೂ ಇರಲಿಲ್ಲ.... ಅವಳದ್ದೇ ದರ್ಬಾರು...."

"ಏನಪ್ಪಾ.... ಈಗ ಹೆದರಿಸ್ತಿದೀರಾ...."

"ಹೆದರಿಕೆ ಏಕೆ? ನನ್ನ ಹಾಗೆ ನೀನು ಇರಬೇಕೂಂತ ಏನಿಲ್ಲ. ನಿನ್ನ ಇಚ್ಛೆಗೆ ತಕ್ಕಂತೆ, ನಿನ್ನ ಜೀವನ ನಡೆಸು.... ಒಟ್ಟಿನಲ್ಲಿ ನೀವುಗಳು ಅನ್ಯೋನ್ಯವಾಗಿದ್ದರೆ ಸಾಕು......" ತಂದೆ ಮಗನಿಗೆ ತಿಳುವಳಿಕೆ ಹೇಳಿದ.

* * *

## - - 29 - -

ತವರಿಗೆ ಹೋಗಿದ್ದ ಶಾಂತಳ ಚಡಪಡಿಕೆ ಜಾಸ್ತಿಯಾಗಿತ್ತು. ಅಲ್ಲಿ ಗಂಡ ಮಗ ಹೇಗಿದ್ದಾರೋ ಅಂತ ಪದೇ ಪದೇ ಆಡಿ, ಕಡೆಗೂ ಮೂರೇ ದಿನಗಳಿಗೆ ಅಲ್ಲಿಂದ ಹೊರಟು ಬಂದಿದ್ದಳು.

"ಇದೇನೇ ಇಷ್ಟು ಬೇಗ ಬಂದು ಬಿಟ್ಟೆ..... ತವರು ಮನೇನೂ ಬೇಡವಾಯ್ತಾ ನಿನಗೆ....."

"ನಿಮಗೇನು ಗೊತ್ತಾಗುತ್ತೆ ನನ್ನ ಕಷ್ಟ. ಇಲ್ಲಿ ನಾನಿಲ್ಲದೇ ಏನು ನಡೆಯುತ್ತೆ?"

"ಎಲ್ಲಾ ನಡೆದಿತ್ತು..... ನಲ್ಲೀಲಿ ನೀರು ಬರುತ್ತಿತ್ತು..... ಕರೆಂಟು ಸದಾ ಇರುತ್ತಿತ್ತು..... ರಸ್ತೇಲಿ ವಾಹನಗಳು ಓಡಾಡುತ್ತಿದ್ದವು....." ಗಂಡ ನಕ್ಕ.

"ಸಾಕು..... ಸಾಕು..... ನಿಮಗೆ ಎಲ್ಲಾ ತಮಾಷೆ..... ಮದುವೆ ಮನೆ ಅಂದರೆ ಎಷ್ಟೋ ಕೆಲಸವಿರುತ್ತೆ.... ಅದನ್ನ ನಾನು ಹೇಳಿದ್ದು...."

"ನಾವು ಗಂಡಿನವರು ಕಣೇ...... ನಮಗೇನು ಕೆಲಸವಿರುತ್ತೆ?"

"ಎಷ್ಟೋ ವರ್ಷಗಳಾಗಿ ಹೋಯ್ತು. ಮನೆಗೆ ಸುಣ್ಣ ಬಣ್ಣ ಆಗಬೇಡವೆ?"

"ಮನೆ ಕೊಳಕೇನೂ ಆಗಿಲ್ಲ. ಗೋಡೆ ಮೇಲೆ ಬರೆದು ಕೊಳೆ ಮಾಡುವ ಚಿಕ್ಕ ಮಕ್ಕಳೇನೂ ಇಲ್ಲ. ಬೇಡ....."

"ಒಂದಿಷ್ಟು ಒಡವೆಗಳನ್ನು ಮಾಡಿಸಬೇಕು..."

"ಯಾರಿಗೆ? ಸೊಸೆಗಾ?"

"ಸೊಸೆಗೆ ಅವರು ಬೇಕಾದ ಒಡವೆಗಳನ್ನು ಹಾಕಲಿ...... ನಾನು ಮಾಂಗಲ್ಯದ ಸರ, ಒಂದು ಹರಳಿನ ಉಂಗುರ, ಕಾಲುಂಗುರ ಇಷ್ಟೇ ಹಾಕೋದು."

"ಒಂದು ಜೊತೆ ಬಳೆ ಬೇಡವೇನೆ? ನಾನು ಸುಮಂತನಿಗೆ ಹೇಳ್ತೀನಿ ರೆಡಿಮೇಡ್

ತಂದರೂ ಆಯಿತು......"

"ಇಷ್ಟು ವರ್ಷ ಆದರೂ ನನ್ನ ಕೈಲಿ ಒಂದೇ ಜೊತೆ ಚಿನ್ನದ ಬಳೆ ಇರೋದು... ಆಚಿಗೆ ನಾವು ಒಂದು ಎಳೆ ಚಿನ್ನದ ಸರ ಮಾತ್ರ ಹಾಕಿದ್ವೆವು. ಅವರೇನೂ ಹಾಕಲೇ ಇಲ್ಲ.... ಬಡತನ ತೋರಿಸಿಕೊಂಡರು."

"ಅದಕ್ಕೇ ಹೇಳಿದ್ದು, ನಾವೂ ಬಡತನ ತೋರಿಸಿಕೊಂಡೆವು ಅಂತ ಯಾರೂ ಆಡಬಾರದು..... ನಮಗೆ ಬೇರೆ ಹೆಣ್ಣು ಮಕ್ಕಳಿಲ್ಲ.... ಈಗ ಆಚಿಗೂ ಒಂದು ಜೊತೆ ಮಾಡಿಸಿ ಬಿಡೋಣ... ಹೇಗೂ ಮನೆ ಹೆಣ್ಣು ಮಗಳಿಗೆ ಏನಾದರೂ ಭಾರಿ ಉಡುಗೊರೆ ಕೊಡಬೇಡವೇ?"

"ಅದೇನೋ ನಿಮ್ಮಿಷ್ಟ... ಜವುಳಿಯ ಖರ್ಚು ಸಾಕಷ್ಟಿದೆ. ರೇಶಿಮೆ ಸೀರೆಗಳೆಲ್ಲ ದುಬಾರಿ ಆಗಿವೆ.... ಅಮ್ಮಂಗೆ, ಅತ್ತಿಗೆಗೆ, ಬೀಗಿತ್ತಿಗೆ, ಆಚಿಗೆ, ಹಾಗೇ ನನಗೊಂದು ಭಾರಿ ಸೀರೆ.... ನನ್ನ ಹತ್ತಿರ ಇರೋವೆಲ್ಲಾ ಹಳೇದಾಗಿವೆ."

"ಸರಿಯಪ್ಪಾ.... ಅದೇನೇನು ಮಾಡ್ತೀಯೋ ಮಾಡ್ಕೋಪ್ಪಾ.....?"

"ಏನು ಹಾಗಂದ್ರೆ... ನನಗೇನು ಚಿನ್ನದ ಬಳೆ ಕೇಳಿದೆನೆ? ಅಬ್ಬಬ್ಬಾ ಅಂದರೆ ಸಾವಿರ ರೂಪಾಯಿನ ಒಂದು ಸೀರೆ ಬೇಕೂಂತ ಆಸೆ ಪಟ್ಟೆ."

"ತಗೋ ಬೇಡ ಅಂದ್ನೆ.... ಖರ್ಚು ವೆಚ್ಚದ ಒಂದು ಪಟ್ಟಿ ಮಾಡು... ಏನೇನು ಬೇಕೋ ತಗೋ....... ಇವನ ಮದುವೆ ಆದ ಮೇಲೆ ಸಧ್ಯಕ್ಕೆ ಯಾವ ಸಮಾರಂಭವಿದೆ.....? ಬೀಗಿತ್ತಿಗೆ ಒಂದು ಭಾರಿ ಸೀರೆ ತರೋಣ......"

"ಅದೇನು ಬೀಗಿತ್ತಿಯ ಮೇಲೆ ಮುಚ್ಚಟೆ..... ಆಕೆ ಹಸೆಮಣೆ ಮೇಲೆ ಕೂತ್ಕೋತಾಳೋ ಇಲ್ಲವೋ?"

"ಕೂತ್ಕೊಳ್ಳದಿದ್ದರೆ, ಸೀರೆ ಕೊಡಬಾರದೆ? ತಮಾಷೆಯಾಗಿದೆ ಮಾತು? ಸೊಸೆಗೆ ಎಂಥಾ ಸೀರೆ ತರ್ತೀಯಾ?"

"ಎರಡೇ ಸೀರೆ, ಒಂದು ಭಾರೀದು..... ಇನ್ನೊಂದು ಸುಮಾರಾದ್ದು.... ಬೀರುವಿನಲ್ಲಿ ಮಡಿಸಿಡೋಕೆ, ಸಾಕು......." ರಾಮಸ್ವಾಮಿ ಮುಕ್ತವಾಗಿ ನಕ್ಕ. ಇವಳ ಆಲೋಚನೆಗಳು ನನ್ನ ಆಲೋಚನೆಗಳಿಗಿಂತ ಎಷ್ಟು ಭಿನ್ನ?

ಲಗ್ನ ಪತ್ರಿಕೆಗಳನ್ನು ಹಂಚಿದ್ದಾಗಿತ್ತು.... ಬಸ್ಸು ಮಾಡಿಕೊಂಡು ಹೋಗ್ತೀನಿ. ಎಲ್ಲರೂ ಖಂಡಿತಾ ಬರಬೇಕು ಅಂತ ನೆಂಟರಿಷ್ಟರಿಗೆಲ್ಲ ಆಹ್ವಾನ ಕೊಟ್ಟಾಗಿತ್ತು. ಒಡವೆ, ಜವುಳಿಯನ್ನು ಖರೀದಿಸುವ ಸಮಯಕ್ಕೆ ವನಜ ಊರಿಗೆ ಬಂದಿದ್ದಳು. ಅವಳ ಜೊತೆ ಅನಂತನೂ ಬಂದಿದ್ದ.

"ಅಂತೂ ಹೊಡೆದೆ ಛಾನ್ಸು...... ಲಕ್ಷಾಂತರ ರೂಪಾಯಿಗಳ ಆಸ್ತಿ ಇರುವ ಕುಳವನ್ನೇ ಹಿಡಿದೆ....." ಅಣ್ಣನ ಮಾತು ಆಶ್ಚರ್ಯವನ್ನುಂಟು ಮಾಡಿತ್ತು.

"ನಿನಗ್ಯಾರು ಹೇಳಿದರು?"

"ನನಗೆ ತೋಟ ತುಡಿಕೆ ಇರೋರ ವಿಚಾರವೆಲ್ಲಾ ತಿಳಿದೇ ತಿಳಿಯುತ್ತೆ. ಹುಡುಗೀನೂ ಕೆಲಸದಲ್ಲಿದಾಳಂತೆ..... ಅವಳಿಗೂ ಸಂಬಳ ಬರುತ್ತೆ...."

"ಮದುವೆ ಆದ ಮೇಲೆ, ಕೆಲಸ ಬಿಟ್ಟು ಬಿಡ್ತಾಳೆ. ಅವಳೇನೂ ದುಡಿದು ಹಾಕಬೇಕಾಗಿಲ್ಲ."

"ಸುಮಂತ ಏನಂತಾನೆ?"

"ನನ್ನ ಮಾತಿಗೆ ಬೇಡಾಂತ ಯಾಕಂತಾನೆ? ಹೆಂಡತಿ ಕೆಲಸಕ್ಕೆ ಹೋಗಿ ಸಂಪಾದಿಸಲಿ

ಅನ್ನೋ ಆಸೆ ಅವನಿಗೂ ಇಲ್ಲ."

"ನನ್ನಿಂದ ಏನಾದ್ರೂ ಸಹಾಯವಾಗಬೇಕಾಗಿದ್ದರೆ ಹೇಳು....."

"ನಿಜವಾಗಿಯೂ ನಿನಗೆ ಸಹಾಯ ಮಾಡಬೇಕೂಂತ ಆಸೆ ಇದ್ದರೆ.... ಒಂದು ಮಾತು. ಮದುವೆಗೆ ನೀನೊಬ್ಬನೇ ಬಾ.... ನಿನ್ನ ಪರಿವಾರವನ್ನು ಕರೆದುಕೊಂಡು ಬರಬೇಡ....." ಛಾಟಿಯಿಂದ ಹೊಡೆದಂತಾಗಿತ್ತು ಅವನಿಗೆ..... ಕೆಂಪಾದ ಕಣ್ಣುಗಳನ್ನು ಅರಳಿಸಿ ಅವಳನ್ನೇ ನೋಡಿದ. ಅವನೇನು ಆಡಿ ಬಿಡುವನೋ ಅನ್ನುವಂತೆ, ವನಜ ಅವನೆದುರಿಗೆ ಬಂದಳು.

"ದಯವಿಟ್ಟು ನೀವು ಈಗ ಇಲ್ಲಿಂದ ಹೊರಟು ಹೋಗಿ. ಏನೂ ಮಾತನಾಡಬೇಡಿ....."

"ಶಾಂತಾ....... ಹೀಗಾ ಮಾತಾಡೋದು. ಪ್ರಜ್ಞೆ ಬೇಡವಾ ನಿನಗೆ?" ರಾಮಸ್ವಾಮಿ ರೇಗಿದ.

"ಇದು ನನ್ನ ಅವನ ವಿಷಯ. ನೀವ್ಯಾರೂ ಮಧ್ಯೆ ಬರಬೇಡಿ.... ನಾನು ಹೇಳಿದ್ದರಲ್ಲಿ ತಪ್ಪೇನಿದೆ......?"

"ತಪ್ಪೇನಿಲ್ಲ. ತಪ್ಪೆಲ್ಲಾ ನನ್ನದೇ.... ತಂಗಿ ಎಂಬ ಪ್ರೀತಿಯಿಂದ ಬಂದೆ... ನನಗೆ ಅವಮಾನ ಮಾಡೋವಷ್ಟು ದೊಡ್ಡ ಮನುಷ್ಯಳಾಗಿ ಬಿಟ್ಟಿದಾಳೆ. ಈಗ ಹೋಗ್ತೀನಿ. ಆದರೆ ಮತ್ತೆ ಬಂದೇ ಬರ್ತೀನಿ.... ನಿನಗೆ ಬುದ್ಧಿ ಕಲಿಸಲೇ ಬೇಕು ನಾನು....." ಎನ್ನುತ್ತಾ ದುರ್ದಾನ ತೆಗೆದುಕೊಂಡವನಂತೆ ನಡೆದು ಬಿಟ್ಟ.

"ಇವನಿಗೆ ಬಾ..... ಅಂತ ಯಾರು ಹೇಳಿದ್ರು......? ಮನಸ್ಸನ್ನೇ ಕೆಡಿಸಿ ಬಿಟ್ಟ....." ವನಜ ಹೊರಬಾಗಿಲಲ್ಲಿ ನಿಂತಿದ್ದಳು. ಅವಳಿಗೂ ಅವಮಾನವಾದಂತಾಗಿತ್ತು. ಗಂಡನ ಎರಡನೇ ಸಂಸಾರದ ಬಗ್ಗೆ ತಾನು ಇವಳಿಗೆ ಹೇಳಲೇ ಬಾರದಾಗಿತ್ತು. ಗುಟ್ಟಾಗಿಯೇ ಇದ್ದಿದ್ದರೆ, ಮರ್ಯಾದೆ ಉಳಿಯುತ್ತಿತ್ತು. ನಾನೇ ನನ್ನ ಗಂಡನ ಅವಮಾನಕ್ಕೆ ಕಾರಣಳಾದೆ ಅಂತೆನ್ನಿಸಿತ್ತು.

"ಅದೇನತ್ತೆ..... ಇಲ್ಲಿ ಒಬ್ಬರೇ ನಿಂತಿದೀರಿ?" ಸುಮಂತ ಕೇಳಿದ. ಅವನ ಜೊತೆಯಲ್ಲಿ ತಾರಾ ಸಹ ಇದ್ದಳು.

"ಏನಿಲ್ಲಪ್ಪಾ..... ನಿನಗೇ ಕಾಯ್ತಿದ್ದೆ..... ಎಲ್ಲಿಗೆ ಹೋಗಿದ್ರಿ......?"

"ಇನ್ನು ಎಲ್ಲಿಗೂ ಹೋಗಿಲ್ಲ. ಇವಳು ನಾಳೆ ಊರಿಗೆ ಹೋಗ್ತಾಳಂತೆ.... ಸ್ವಲ್ಪ ಷಾಪಿಂಗ್ ಮಾಡಬೇಕೂಂತ ಅಂದಳು. ಆಮೇಲೆ ಹೋಗ್ತೀವಿ...."

"ಹೇಗಿದೀರಿ ಅತ್ತೆ.......?" ತಾರಾ ವಿಚಾರಿಸಿದಳು.

"ನಾನೂ ನಿನಗೆ ಅತ್ತೇನಾ?" ವನಜ ನಕ್ಕಳು. ಅವಳ ಮನಸ್ಸು ತಿಳಿಯಾಗಿತ್ತು. ತಾರಾ ಅನುಮಾನಿಸುತ್ತಾ ಒಳಗೆ ಬಂದಳು. ಶಾಂತಾ ಹುಬ್ಬುಗಂಟಿಕ್ಕಿದಳು. ಇಬ್ಬರಿಗೂ ತಿಂಡಿ ಕಾಫಿ ಕೊಟ್ಟು ಕೇಳಿದ್ದಳು.

"ಕೆಲಸಕ್ಕೆ ರಾಜೀನಾಮೆ ಕೊಟ್ಟು, ಊರಿಗೆ ಯಾವಾಗ ಹೋಗ್ತಿದೀಯ?"

"ನಾಳೇನೇ ಹೋಗ್ತಿದೀನಿ.... ಸಧ್ಯಕ್ಕೆ ರಜ ಹಾಕಿದೀನಿ"

"ಈಗಲೇ ಯಾಕಮ್ಮ ರಾಜೀನಾಮೆ ಕೊಡಬೇಕು...... ನಿಧಾನವಾಗಿ ಕೊಟ್ಟರಾಯ್ತು......"

"ಮದುವೆಗೆ ಮುಂಚೇನೇ ಯಾಕೆ ಕೊಡಬಾರದು?"

ಇನ್ನೇನು ಕೇಳಿ ಬಿಡುವಳೋ ತಾಯಿ ಅಂತಂದುಕೊಂಡು, "ನಡೀ ತಾರಾ

ಹೊತ್ತಾಯ್ತು...." ಎಂದು ಎಬ್ಬಿಸಿಕೊಂಡು ಹೊರಟೇಬಿಟ್ಟ. ಶಾಂತ ಬೆಪ್ಪಾಗಿ ಅವರಿಬ್ಬರನ್ನೇ ನೋಡಿದಳು.

ಹದಿನೈದು ದಿನಗಳ ಕೆಳಗೆ, ಏನೂ ತಿಳಿಯದವನಾಗಿದ್ದ. ಈಗ ಹೆಂಡತಿಯಾಗುವವಳ ಜತೆ ಸುತ್ತಾಟ..... ಮದುವೆ ಆದ ಮೇಲೆ, ನಮ್ಮನ್ನೆಲ್ಲ ಮರತೇ ಬಿಡ್ತಾನೋ ಏನೋ..... ಏನೋ ಕಳೆದುಕೊಳ್ಳುತ್ತಿರುವ ಅನುಭವ. ಅತ್ತಿಗೆಯ ಕಡೆ ನೋಡಿದ್ದಳು. ಅವಳ ಮುಖವೂ ಸಪ್ಪಗಾಗಿದೆ. ತನ್ನಿಂದ ಏನೋ ತಪ್ಪಾಗಿರುವಂತೆ, ಗಂಡ ತನ್ನನ್ನೇ ನೋಡುತ್ತಿದಾನೆ. ಸುಮಂತನ ಮದುವೆ ಮಾತುಕತೆ ಪ್ರಾರಂಭವಾದಾಗಿನಿಂದ ಇದೇ ಆಗಿದೆ..... ಹಾಗಾದ್ರೆ ಯಾರೂ ಮಕ್ಕಳ ಮದುವೇನ ಸುಲಭವಾಗಿ ಸದ್ದಿಲ್ಲದೆ ಖುಷಿಯಾಗಿ ಮಾಡುವುದಿಲ್ಲವೆ? ಮದುವೆಯ ಕಾರ್ಯ ಮುಗಿಯುವವರೆಗೂ ತಾನು ಯಾರೊಂದಿಗೂ ಹೆಚ್ಚಿಗೆ ಮಾತಾಡುವುದಿಲ್ಲ ಎಂದು ತನ್ನಲ್ಲೇ ನಿರ್ಧರಿಸಿದಳು.

ಅಗತ್ಯಕ್ಕಿಂತ ಹೆಚ್ಚಿನ ಮೌನವನ್ನು ರಾಮಸ್ವಾಮಿ ಗುರುತಿಸಿದ. ವನಜಳೂ ಗಮನಿಸಿದ್ದಳು. ಆದರೆ ಈಗ ಇವರ ಹೆಚ್ಚಿನ ಗಮನವೆಲ್ಲ ಮದುವೆಯ ಕಾರ್ಯಕ್ರಮ ಸುಗಮವಾಗಿ ನೆರವೇರುವುದರ ಕಡೆಗೆ.

ಎಲ್ಲಾ ಸಿದ್ಧತೆಗಳೂ ಶಾಂತಳ ಇಚ್ಛೆಯಂತೆಯೇ ಆದವು. ಆದಷ್ಟು ಅವಳಿಗೆ ಮಾತಿಗೆ ಅವಕಾಶ ಕೊಡಬಾರದೆಂದು, ರಾಮಸ್ವಾಮಿ, ಸುಮಂತ ತಮ್ಮ ತಮ್ಮಲ್ಲೇ ನಿರ್ಧರಿಸಿಕೊಂಡಿದ್ದರು.

ಆಚಿ ತನ್ನ ಪರಿವಾರದೊಂದಿಗೆ ಬಂದಿಳಿದಳು. ಅವಳ ಅತ್ತೆ ಮಾವ, ಹಾಗೂ ಗಂಡ ಮದುವೆಯ ಹಿಂದಿನ ದಿನ ಬರುವವರಿದ್ದರು. ಶಾಂತಳ ತಂದೆ ತಾಯಿ ಬಂದಿದ್ದರು. ಮನೆಯಲ್ಲಿ ಸಂಭ್ರಮದ ವಾತಾವರಣ ತುಂಬಿತ್ತು. ವನಜ ಮಾತ್ರ ತನ್ನಲ್ಲೇ ಅಧೀರಳಾಗಿದ್ದಳು. ಗಂಡ ತನ್ನ ಪರಿವಾರದೊಂದಿಗೆ ಬಂದು, ಮದುವೆ ಮನೆಯಲ್ಲಿ ಏನೂ ಗಲಾಟೆ ಮಾಡದಿರಲಿ ಎಂದು ದೇವರಲ್ಲಿ ಬೇಡುತ್ತಿದ್ದಳು.

ಹಸಿರು ತೋರಣ, ಚಪ್ಪರ ಮನೆಯ ಮುಂದೆ ಅಲಂಕೃತಗೊಂಡಿತು. ಆಚಿಗೆ ತನ್ನ ಮದುವೆಯ ದಿನಗಳು ನೆನಪಾಗಿದ್ದವು. ಅವಳ ಮಕ್ಕಳಿಗೆ ಸಂಭ್ರಮವೋ ಸಂಭ್ರಮ. ಮಾವನ ಹಿಂದೆ ಮುಂದೆ ಸುತ್ತುತ್ತಿದ್ದವು. ಶಾಂತ, ತಾನು ಖರೀದಿಸಿದ್ದ ವಸ್ತುಗಳನ್ನೆಲ್ಲ ಮಗಳಿಗೆ ತೋರಿಸಿದ್ದಳು.

"ಎಲ್ಲಾ ಸಿದ್ಧತೆ ಆಗಿದೆ. ಆದರೆ ಮನಸ್ಸು ಮಾತ್ರ ಸರಿಯಾಗಿಲ್ಲ"

"ಇನ್ನು ಏನಮ್ಮ ಕಮ್ಮಿ ನಿನಗೆ?"

"ನಂಗೊತ್ತಿಲ್ಲ ಆಚಿ...... ಸುಮಂತನಿಗೆ ಹೆಣ್ಣು ನೋಡೋದು ಅಂತ ಪ್ರಾರಂಭಿಸಿದ ದಿನದಿಂದ ನಮ್ಮ ಮನೇಲಿ, ವಾದ ವಿವಾದವೇ ಜಾಸ್ತಿ..... ನಾನು ರೋಷದಿಂದ ಆಡಿದ್ದನ್ನೇ ಸುಮಂತ ತನ್ನ ಆಯ್ಕೆ ಮಾಡಿಕೊಂಡ. ಇದೆಲ್ಲ ಏನು ಅಂತ ಅರ್ಥವೇ ಆಗುಲ್ಲ."

"ಎಷ್ಟಕ್ಕೆ ಅಂತ ಅರ್ಥ ಹುಡುಕ್ತಿ ಬಿಡು ಅತ್ಲಾಗೆ...."

"ನಾನೂ ಪ್ರಯತ್ನ ಪಡ್ತಿದೀನಿ..... ಮೊನ್ನೆ ನಿಮ್ಮ ಮಾವ ಬೇರೆ ಬಂದು ಹೆದರಿಸಿ ಹೋಗಿದಾನೆ. ನನಗೇನೋ ಬುದ್ಧಿ ಕಲಿಸ್ತಾನಂತೆ...."

"ಏನಂತೆ ಮಾವನಿಗೆ.....?"

"ಬಿಡು.... ಅವನದ್ದೇ ಒಂದು ದೊಡ್ಡ ಕತೆ. ತನ್ನ ಹುಳುಕನ್ನು ಮುಚ್ಚಿಟ್ಟುಕೊಳ್ಳೋಕೆ ಹೆದರಿಸ್ತಿದಾನೆ.... ಆದರೆ ಮದುವೆ ಮಂಟಪದಲ್ಲಿ ರಂಪ ರಾದ್ಧಾಂತ ಮಾಡಿದರೆ ನಮ್ಮ

ಮರ್ಯಾದೆ ಏನಾಗಬೇಕು?"

"ಹಾಗೆಲ್ಲ ಏನೂ ಆಗುಲ್ಲ ಬಿಡಮ್ಮ....."

"ನಿನ್ನ ಬಾಯಿ ಹರಕೆಯಿಂದ ಹಾಗೇ ಆಗಲಿ. ನಾನು ಮನೆ ದೇವರಿಗೆ ಕಾಣಿಕೆ ಕಟ್ಟಿ ಇಡ್ತೀನಿ."

"ಅತ್ತೆ ಯಾಕೋ ಸಪ್ಪಗಿದಾರಲ್ಲ"

"ಅಣ್ಣ ಬಂದು ಏನೇನೋ ಆಡಿದ ಅಂತ ನಾನು ಬೈದೆ. ಅದಕ್ಕೇ ಅತ್ತಿಗೆಗೆ ಬೇಜಾರಾಗಿರಬಹುದು."

"ಯಾಕಮ್ಮ ಅನ್ನೋಕೆ ಹೋದೆ? ಗಂಡನ್ನ ಅಂದರೆ ಅತ್ತೆಗೆ ಬೇಜಾರಾಗುಲ್ವೆ?"

"ಅವನು ನನ್ನ ಅಣ್ಣ...... ಅವನಿಗೆ ತಂಗಿ ಅನ್ನೋ ಪ್ರೇಮ ಬೇಡ್ವಾ?"

"ಅಕ್ಕ ತಂಗಿ ಅಣ್ಣ ತಮ್ಮ. ಇವರುಗಳೇ ವಿಪರೀತ ಕಚ್ಚಾಡೋದು....."

"ಅದಕ್ಕೇ ನಿಮ್ಮಪ್ಪನ ಹಾಗೇ ಒಬ್ಬರೇ ಹುಟ್ಟಬೇಕು..... ಕಚ್ಚಾಡೋಕೆ ಯಾರೂ ಇರುಲ್ಲ. ವಿಪರೀತ ಒಳ್ಳೆಯವರಾಗಿರುತ್ತಾರೆ...." ವನಜ ಬೇಕಂತ ನುಡಿದಳು.

"ಏನಿಲ್ಲ. ಅವರಿಗೂ ಒಬ್ಬಳು ಅಕ್ಕ ಇದ್ದಳಂತೆ...." ಬಾಯಿಂದ ಮಾತು ಹೊರ ಬಿದ್ದಿತ್ತು. ತಕ್ಷಣ ನಾಲಿಗೆ ಕಚ್ಚಿಕೊಂಡು ಸುಮ್ಮನಾದಳು.

"ಹೌದೇನಮ್ಮಾ......" ಎನ್ನುತ್ತಾ ಆಚಿ ಹತ್ತಿರಕ್ಕೆ ಸರಿದಳು.

"ಬಿಡು ನಂಗೊತ್ತಿಲ್ಲ....." ಮುಖ ಅತ್ತ ತಿರುಗಿಸಿದಳು.

"ಇಲ್ಲ. ನೀನು ಏನನ್ನೋ ಮುಚ್ಚಿಡ್ತಿದೀಯ..... ಅವರೆಲ್ಲಿದಾರೆ....... ನೀನು ಹೇಳದಿದ್ದರೆ ಅಪ್ಪನ್ನ ಕೇಳ್ತೀನಿ ಅಷ್ಟೇ....."

"ಅಪ್ಪನ್ನ ನೀನು ಏನೂ ಕೇಳಕೂಡದು....."

"ಯಾಕಮ್ಮಾ ಹೀಗಾಡ್ತೀಯ.... ಅಪ್ಪಂಗೆ ಒಬ್ಬರು ಅಕ್ಕ ಅಂತ ಇದ್ದ್ರೆ, ಅವರು ನಮ್ಮ ಸೋದರತ್ತೆ ಆಗ್ತಾರೆ ಅಲ್ವೇನಮ್ಮ.... ಅವರ ವಿಚಾರವನ್ನೆಲ್ಲ ನೀನು ನಮಗೆಲ್ಲ ಯಾಕೆ ಹೇಳಲಿಲ್ಲ....?"

"ಅದೆಲ್ಲ ಮಕ್ಕಳಿಗೆ ಹೇಳುಕ್ಕಾಗದ ವಿಚಾರ.... ಮರೆತುಬಿಡು."

"ಹೇಗಮ್ಮ ಮರೆಯೋಕೆ ಆಗುತ್ತೆ? ನಮಗಂತೂ, ಅಪ್ಪನ ಕಡೆ ಯಾರೂ ಇರಲಿಲ್ಲ. ಇದ್ದರು, ಅಂತ ನೀವ್ಯಾರೂ ಹೇಳಲಿಲ್ಲ. ಅಪ್ಪ ಕೂಡಾ ಹೇಳಲಿಲ್ಲ ಏಕೆ?"

"ನನಗೆ ಆ ಮಾತನ್ನೆಲ್ಲ ಆಡೋಕೆ ಇಷ್ಟವಿರಲಿಲ್ಲ ಅಂತ ಅಂದ್ನಲ್ಲ."

"ಈಗ ನನಗೆ ತಿಳಿದುಕೊಳ್ಳೋಕೆ ಇಷ್ಟವಾಗುತ್ತಿದೆ. ನೀನು ಹೇಳಲೇ ಬೇಕು...." ಒತ್ತಾಯ ಮಾಡಿದಳು.

"ಈಗ ಬೇಡ, ಊಟ ಆಗಲಿ, ಮೊದಲು ನಿನ್ನ ಮಕ್ಕಳನ್ನು ಮಲಗಿಸು. ಆಮೇಲೆ ಮಾತನಾಡೋಣ....."

ಆಚಿ ಆ ಗಳಿಗೆಗಾಗಿ ಸಿದ್ಧಳಾಗಿ ಕಾದಳು. ಮಕ್ಕಳು ಮಲಗಿದ್ದರು. ತಂದೆ ಸಹ ಮಲಗಿದ್ದರು. ಸುಮಂತ ಮಾತ್ರ ಏನೋ ಬರೆಯುತ್ತಿದ್ದ. ಆಚಿ ಅವನಿಗೆ, ಈಗಲೇ ತಿಳಿಸುವುದು ಬೇಡ ಅಂತಂದುಕೊಂಡಳು. ಅತ್ತೆ, ತಾಯಿ, ಒಳಗಿನ ಕೆಲಸಗಳನ್ನು ಮುಗಿಸಿ, ಮಲಗಲು ಬರುವುದನ್ನೇ ಎದುರು ನೋಡುತಿದ್ದು ಮತ್ತೆ ಪೀಡಿಸಿದಳು.

"ನೀನಿನ್ನು ಮರೆತಿಲ್ವಾ.....? ಈಗ ಬೇಡ ಬಿಡೇ. ಇನ್ನೊಂದು ದಿನ ಹೇಳ್ತೀನಿ."

"ಅಂತಹ ರಹಸ್ಯ ಏನಿದೆ ಹೇಳಬಾರದಾ?" ವನಜ ಕೆಣಕಿದಳು.

ಶಾಂತ ಸಂಕ್ಷಿಪ್ತವಾಗಿ ಹೇಳಿ ಮುಗಿಸಿದಳು. ಆಚಿಯಂತೂ ಆಗಾಗ್ಗೆ ಅಮ್ಮನ ಕಡೆ

ನೋಡುತ್ತಿದ್ದಳು. ಈ ವಿಷಯ ಅವಳಿಗೆ ಹೊಸದು. ಅಪ್ಪ ಸಹ ಹೇಳಿರಲಿಲ್ಲ. ಆದರೆ ಸುಜಾತ ಅನ್ನೋ ಹೆಸರು ಕೇಳಿದ ಕೂಡಲೇ ಏನೋ ಜ್ಞಾನೋದಯವಾದಂತಾಯಿತು. ತಾರಾಳ ತಾಯಿಯ ಹೆಸರು, ಸುಜಾತ..... ಆಕೆಯೇ ಇರಬಹುದೇ? ಈ ವಿಷಯ ಸುಮಂತನಿಗೆ ಗೊತ್ತೆ?

"ಅಮ್ಮ ಆ ಸುಜಾತ ಎಲ್ಲಿದಾರೆ ಈಗ? ಅವರನ್ನು ಮದುವೆಗೆ ಕರೆಯೋಣ....."

"ಎಲ್ಲಿದಾರೋ ನಂಗೊತ್ತಿಲ್ಲ, ಅಂಥೋರೆಲ್ಲ ನಮ್ಮ ಮನೆಗೆ ಬರುವುದು ನನಗಿಷ್ಟವಿಲ್ಲ."

"ಹಾಗ್ಯಾಕಮ್ಮ ಆಡ್ತೀಯ? ಅದರಲ್ಲಿ ಅವರ ತಪ್ಪೇನು?"

"ತಪ್ಪು ನಿಮ್ಮಪ್ಪನದು. ಅವರೇಕೆ ಇದನ್ನೆಲ್ಲ ನನಗೆ ಈ ಮುಂಚೇನೇ ಹೇಳಲಿಲ್ಲ.... ಹೇಳಿದ್ದರೆ ನಾನು ಅವರನ್ನ ಮದುವೇನೇ ಆಗ್ತಿರಲಿಲ್ಲ."

"ಆಗ ನಾವುಗಳೂ ಹುಟ್ಟುತ್ತಿರಲಿಲ್ಲ. ನಮಗೆ ಈ ವಿಷಯವೇ ಗೊತ್ತಾಗುತ್ತಿರಲಿಲ್ಲ. ಅದಕ್ಕೇ ಅಪ್ಪ ನಿನಗೆ ಹೇಳಲಿಲ್ಲವೇನೋ....."

"ನನಗೆ ಮೋಸ ಮಾಡಿದರು....."

"ನಿಮ್ಮಣ್ಣ ಮೋಸಗಾರ, ಶಾಂತಾ.... ಭಾವ ನಿನಗೆ ನೋವಾಗದಿರಲಿ ಅಂತ ಹೇಳದೇ ಇರಬಹುದು...."

"ಗಂಡಹೆಂಡಿರಲ್ಲಿ ಯಾವ ಮುಚ್ಚು ಮರೆ ಇರಬಾರದು ಅತ್ತಿಗೆ....."

"ನಿಮ್ಮಣ್ಣ ಮುಚ್ಚು ಮರೆ ಮಾಡದೇ ನನಗೆ ಎಲ್ಲಾ ಹೇಳಿದ್ರಲ್ಲ ನನಗೆ ಗೊತ್ತಿಲ್ಲದೇ ಇದ್ದಿದ್ರೆ ಚೆನ್ನಾಗಿತ್ತೇನೋ ಅಂತ ಈಗ ಅನ್ನಿಸ್ತಿದೆ. ಎಲ್ಲರಿಗೂ ಹೇಳಿಕೊಂಡು ಬಂದು..... ಎಲ್ಲರ ಹತ್ತಿರ ಉಗಿಸಿಕೊಂಡು..... ಥೂ ಅದೂ ಒಂದು ಬಾಳಾ.....?" ಶಾಂತ ತೆಪ್ಪಗಾದಳು. ಆಚಿ ಅತ್ತೆಯ ಕಡೆ ನೋಡಿದಳು.

"ಮಾವಂಗೂ ಒಂದು ಕತೆ ಇದೆಯಾ.....?"

"ಅದ್ನೆಲ್ಲಾ ತಿಳಿದುಕೊಂಡು ಏನು ಮಾಡ್ತೀ..... ಬಿಡು ಆಚಿ"

"ನಿನಗೂ ತಿಳಿದಿರಲಿ ಆಚಿ....." ಎಂದು ವನಜ ತನ್ನ ಗಂಡನ ವಿಷಯವನ್ನೆಲ್ಲ ಹೇಳಿದಳು. "ನೀನೇ ಹೇಳು, ಆಚಿ ನಿಮ್ಮ ಅಪ್ಪ ಒಳ್ಳೆಯವರೋ ನಿಮ್ಮ ಮಾವ ಒಳ್ಳೆಯವರೋ....."

"ಅಪ್ಪಂದೇನೂ ತಪ್ಪಿಲ್ಲ....."

"ನಿನಗೆ ಹಾಗನ್ನಿಸುತ್ತೆ. ಒಂದು ವೇಳೆ ನಿನ್ನ ಗಂಡ ನಿನಗೆ ಏನೂ ಹೇಳದೇ ಮರೆ ಮಾಚಿದರೆ ನಿನಗೆ ಏನೂ ಅನ್ನಿಸೋಲ್ವಾ?"

"ಅನ್ನಿಸುತ್ತೆ. ಆದರೆ ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ದ್ವೇಷಿಸುಲ್ಲ. ನೀನೂ ಅದನ್ನೆಲ್ಲ ಮರೆತು ಬಿಡು... ಅಪ್ಪನಿಗೆ ಹೇಳಿ, ಅವರುಗಳನ್ನೆಲ್ಲ ಹುಡುಕಿಸಿ ಮದುವೆಗೆ ಕರೆತರಲಿ.... ಬೇಕಾದ್ರೆ ನಾನೇ ಹೇಳ್ತೀನಿ."

"ಬೇಡ. ಆ ಹಳೇ ಸಂಬಂಧಾನ ಹುಡುಕಿ ತರುವುದೇನೂ ಬೇಡ."

"ಸಂಬಂಧಕ್ಕೆ ಹಳೆ ಏನು ಹೊಸ ಏನು? ಸಂಬಂಧ ಸಂಬಂಧವೇ..... ನಾನು ನಿಮ್ಮಣ್ಣನ್ನ ಬಿಟ್ಟು ಹೋಗಿದ್ದರೂ, ನಾನು ಅತ್ತಿಗೇನೇ ಆಗ್ತಿದ್ದೆ.... ಅಲ್ವಾ?" ವನಜ ಹೇಳಿದಳು.

"ಏನೋಪ್ಪ.... ನೀವುಗಳು ಆಡೋ ಮಾತಿನ ರೀತೀನೇ ಬೇರೆ......"

"ಹಳೆಯದನ್ನೆಲ್ಲಾ ಮರೆತು ಬಿಡಮ್ಮ.... ನಾವೂ ಬೆಳೆದು ದೊಡ್ಡವರಾಗಿದೀವಿ.....

ನಮ್ಮ ಮಾತಿಗೂ ಬೆಲೆ ಕೊಡು.... ಒಂದು ವೇಳೆ, ನಾನೋ, ಸುಮಂತನೋ ಹೀಗೆ ತಪ್ಪು ಮಾಡಿದ್ದರೆ, ನಮ್ಮ ಸಂಬಂಧವನ್ನು ಬಿಟ್ಟು ಬಿಡುತ್ತಿದ್ದೆಯಾ?"

ಶಾಂತ ಸುಮ್ಮನಿದ್ದು ಬಿಟ್ಟಳು. ಇದೇ ಸಮಯವೆಂಬಂತೆ ಮತ್ತೆ ಆಚಿ ನುಡಿದಳು. "ನಾನು ಬೆಳಿಗ್ಗೆ ಮಾಡೋ ಮೊದಲ ಕೆಲಸ ಅದು.... ಅಪ್ಪನಿಗೆ ಹೇಳಿ ಅಪ್ಪನ ಅಕ್ಕನ ಮಗಳು ಎಲ್ಲಿಯೇ ಇದ್ದರೂ, ಮದುವೆಗೆ ಬರುವಂತೆ ಮಾಡ್ತೀನಿ" ಶಾಂತ ಬೇಡ ಎನ್ನಲಿಲ್ಲ.......

ಮಾರನೇ ಬೆಳಿಗ್ಗೆ ತಂದೆಯೊಡನೆ ಈ ವಿಷಯ ಹೇಳಿದಾಗ, ಆತನಿಗೆ ಕಸಿವಿಸಿ ಯಾಗಿತ್ತು. ಆದರೂ ಗುಟ್ಟಾಗಿ ಹೇಳಿದನು. "ನಿಮ್ಮಮ್ಮನಿಗೆ ಮಾತ್ರ ಈ ವಿಷಯ ತಿಳಿಯದು. ರಾಧಮ್ಮ, ವನಜ, ಸುಮಂತ ಹಾಗೂ ತಾರಾಳಿಗೆ ಎಲ್ಲಾ ಗೊತ್ತು. ಈ ತಾರಾಳ ತಾಯಿಯೇ ನಮ್ಮ ಸುಜಾತಾ.... ನನ್ನ ಅಕ್ಕನ ಮಗಳು."

"ಆಂ" ಎಂದು ಬಾಯಿ ಬಿಡುವ ಸರದಿ ಈಗ ಆಚಿಯದಾಗಿತ್ತು.

"ನಿಮ್ಮಮ್ಮನಿಗೆ ತಿಳಿದರೆ ಸುಮ್ಮನೆ ರಾದ್ಧಾಂತವಾಗುತ್ತದೆ. ಅದಕ್ಕೆ ಹೇಳೋದೇ ಬೇಡ ಅಂತ ತೀರ್ಮಾನಿಸಿದೀನಿ."

"ಆಗಿನ ಹಾಗೆ ಈಗಲೂ ತಪ್ಪು ಮಾಡ್ತಿದೀರಿ ಅಪ್ಪ.... ಆಮೇಲೆ ತಿಳಿದರೆ ಅಮ್ಮ ಸುಮ್ಮನಿರ್ತಾಳಾ....."

"ಆಮೇಲೆ ಏನು ಬೇಕಾದರೂ ಆಡಲಿ. ಮೊದಲು ಮದುವೆ ನಡೆಯಲಿ" ಅದೂ ಸರಿಯೆಂದೆನಿಸಿತ್ತು. ಆದರೂ ತಾಯಿಯ ಬಗ್ಗೆ ಅಯ್ಯೋ ಅಂತೆನಿಸಿತ್ತು.

ಚಪ್ಪರಪೂಜೆ, ನಾಂದಿಪೂಜೆಯೊಂದಿಗೆ, ದೇವರ ಸಮಾರಾಧನೆಯ ದಿನ, ಮದುವೆಯ ಕಲಾಪಗಳು ಆರಂಭವಾದವು. ಹತ್ತಿರದ ಸಂಬಂಧಿಗಳು ಕೆಲವರು ಬಂದಿದ್ದರು. ಸುಮಂತ ಮದುಮಗನ ವೇಷದಲ್ಲಿ ಕಂಗೊಳಿಸಿದ. ತಾಯಿ ದೃಷ್ಟಿ ಬೊಟ್ಟನ್ನು ಇಟ್ಟಳು. ಭೋಜನದ ನಂತರ, ಅದೇ ಮಧ್ಯಾಹ್ನ ಕಳೆದ ಮೇಲೆ, ವಧುವಿನ ಊರಿಗೆ ದಿಬ್ಬಣ ಹೊರಟಿತು.

ಬಸ್ಸು ಊರನ್ನು ತಲುಪಿದ್ದಂತೆಯೇ ವಾಲಗದ ಸದ್ದು ಕೇಳಿಸಿತು. ಓಲಗದವರೊಂದಿಗೆ ಅವರನ್ನು ಸ್ವಾಗತಿಸಲು, ತಾರಾಳ ತಂದೆ, ಅಣ್ಣ ಹಾಗೂ ಭಾವ, ಕೆಲವು ಹೆಂಗಳೆಯರು ಕನ್ನಡಿ ಕಲಶದೊಂದಿಗೆ ಹಾಜರಾಗಿದ್ದರು. ವರನ ಕೊರಳಿಗೆ ಹೂಮಾಲೆ ಹಾಕಿ, ಫಲವನ್ನು ಕೈಗೆ ಕೊಟ್ಟು ಆರತಿ ಎತ್ತಿ ಬೀಗರನ್ನು ವಿಜೃಂಭಣೆಯಿಂದ ಸ್ವಾಗತಿಸಿದರು. ಶಾಂತ ಇಂಥ ಭರ್ಜರಿ ಸ್ವಾಗತವನ್ನು ನಿರೀಕ್ಷಿಸಿರಲಿಲ್ಲವಾದ್ದರಿಂದ ಮೂಕಳಾಗಿದ್ದಳು. ಆದರೆ ಮನ ಹಿಗ್ಗಿ ಹೋಗಿತ್ತು. ವರನ ಕಡೆಯವರಿಗೆ ಭಾರಿ ಉಪಚಾರ, ಮರ್ಯಾದೆ ನೀಡಿ ಗೌರವಿಸಿದರು. ಛತ್ರದ ಮುಂಬಾಗಿಲಿಗೆ ಕರೆತಂದರು.

"ನಾನು ಏನೋ ಅಂತ ಅಂದುಕೊಂಡಿದ್ದೆ ಅತ್ತಿಗೆ. ಪರವಾಗಿಲ್ಲ ಭಾರಿ ಸಿದ್ಧತೆಗಳನ್ನೇ ಮಾಡಿದ್ದಾರೆ" ದೀಪಾಲಂಕಾರದಿಂದ ಝಗಿಝಗಿಸುತ್ತಿದ್ದ ಛತ್ರದ ಮುಂಭಾಗವನ್ನು ನೋಡಿ ನುಡಿದಳು.

"ಭಾರೀ ಕುಳವೇ ಇರಬೇಕು. ನೋಡೋಕೆ ಮಾತ್ರ ಸರಳವಾಗಿದಾರೆ...."

"ತುಂಬಿದ ಕೊಡ ತುಳುಕಲ್ಲ ಅಂತಾರಲ್ಲ ಹಾಗೆ... ಜಂಭವೇ ಇಲ್ಲ"

"ಹೌದಮ್ಮ. ಜಂಭ ಪಡೋದ್ರಿಂದ ಏನು ಬರುತ್ತೆ ಹೇಳು..... ಅವರು ಜಂಭ ತೋರಿಸಿದ್ರೆ ನೀನು ಮೆಚ್ಚಿಕೋತಿದ್ಯಾ?"

"ಸುಮಂತ ಆ ಹುಡುಗೀನ ಮೆಚ್ಚಿದ ಅಂತ ನಾನು ಮೆಚ್ಚಿದೆ.... ಅಲ್ಲೇ ಓಡಾಡು ತಿದ್ರೂ ನಾನೆಂದೂ ಸರಿಯಾಗಿ ನೋಡಿರಲಿಲ್ಲ. ಅವಳೂ ಅಷ್ಟೆ. ತಾಯಿಗೆ ತಕ್ಕ ಮಗಳು."

"ಅಂದೂ ಸೊಸೇನ ಮೆಚ್ಚಿಕೊಂಡಿದ್ದಾಯ್ತು...." ತಾಯಿಯ ಬೆನ್ನ ಮೇಲೆ ಕೈ ಇಟ್ಟಳು. ಬಿಡದಿಯ ಮನೆಯಲ್ಲಿ ಕುಳಿತು, ಆಯಾಸವನ್ನು ಪರಿಹರಿಸಿಕೊಂಡರು. ಎಲ್ಲರಿಗೂ ಕಾಫಿಯ ಸಮಾರಾಧನೆ ನಡೆಯಿತು.

"ಆಕೆಗೆ ಮುಖದ ಮೇಲೆ ಸುಟ್ಟ ಗಾಯದ ಕಲೆಗಳಿವೆ. ಹಸೆಮಣೆಯ ಮೇಲೆ ಕೂತ್ಕೋತಾರೋ ಇಲ್ಲವೋ.... ಬೀಗರಿಗೆ ಅಂತ ತಂದಿರೋ ಉಡುಗೊರೇನ ಈಗಲೇ ಕೊಟ್ಟು ಬಿಡೋಣ....."

"ಯಾಕಮ್ಮ ಕೂತ್ಕೊಳ್ಳಲ್ಲ. ಮುಖದಲ್ಲಿ ಸುಟ್ಟ ಕಲೆ ಇದ್ದ ಮಾತ್ರಕ್ಕೆ ತಾಯಿ ಅನ್ನೋ ಸಂಬಂಧ ಕಡಿದು ಹೋಗುತ್ತಾ. ನೀನೇ ಒತ್ತಾಯ ಮಾಡಿ ಹೇಳು. ನಿನ್ನ ಮಾತಿಗೆ ಇಲ್ಲ ಅನ್ನದೇ ಕೂತ್ಕೋತಾರೆ."

"ಆಕೆಗೆ ಇಷ್ಟವಿಲ್ಲದಿದ್ದರೆ ನಾನು ಬಲವಂತ ಮಾಡುಲ್ಲ."

"ಒಂದು ವೇಳೆ ನಿನಗೇ ಹಾಗೇನಾದ್ರೂ ಆಗಿದಿದ್ರೆ.... ನಾವು ಸುಮ್ಮನಿದ್ದು ಬಿಡ್ತಿದ್ದೇವೇನಮ್ಮಾ.... ಬಲವಂತ ಮಾಡಿ ಕೂರಿಸುತ್ತಿದ್ದೆವು. ನಾನು ಆಕೆಗೆ ಹೇಳ್ತೀನಿ"

"ನೀನೇನು ಹೆಣ್ಣಿನ ಕಡೆಯವಳೋ ಗಂಡಿನ ಕಡೆಯವಳೋ....."

"ನಾನು ಎರಡೂ ಕಡೆಗೆ ಸೇರಿದವಳು. ಈಗ ಗಂಡು, ಹೆಣ್ಣು ಎಲ್ಲರಿಗೂ ಒಂದೇ ಬೆಲೆ. ಗಂಡು ಹೆಣ್ಣು ಇಬ್ಬರೂ ಇದ್ದರೇ ಮದುವೆ ನಡೆಯೋದು."

"ಸಾಕು ನಿಲ್ಲಿಸೇ ನಿನ್ನ ವೇದಾಂತಾನ?" ಅಷ್ಟರಲ್ಲಿ ಸುಜಾತ ಹಾಗೂ ಅವಳ ಪತಿ, ವಿಚಾರಿಸಿಕೊಂಡು ಹೋಗಲು ಮತ್ತೆ ಬಂದಿದ್ದರು. "ನಿಮಗೇನು ಬೇಕಾದರೂ ಸಂಕೋಚವಿಲ್ಲದೇ ಕೇಳಿ. ನಮಗೆ ಅನುಭವ ಸಾಲದು....."

"ಹಾಗೆಲ್ಲ ಏನಿಲ್ಲ. ನಾವು ಎಲ್ಲಾ ಸರಿ ಹೊಂದಿಸಿ ಕೊಳ್ತೀವಿ. ಅಲ್ವೇನಮ್ಮ....."

"ವರಪೂಜೆಯ ಶಾಸ್ತ್ರ ಯಾವಾಗ ಮಾಡೋಣ......"

"ಬೆಳಿಗ್ಗೇನೇ ಆಗಲಿ....." ಅಲ್ಲಿಯೇ ಇದ್ದ ಸುಮಂತ ನುಡಿದ. ಅಕ್ಕ ತಮ್ಮ ತಾಯಿಗೆ ಅವಕಾಶವನ್ನೇ ಕೊಡದೇ ಮಾತನಾಡಿದರು.

"ಸರಿ ಹಾಗಾದ್ರೆ ಊಟಕ್ಕೆ ಏರ್ಪಾಟು ಮಾಡ್ತೀನಿ. ಪ್ರಯಾಣ ಮಾಡಿ ಆಯಾಸ ವಾಗಿರುತ್ತೆ. ಬೇಗ ಮಲಗೋರಂತೆ..... ಹಾಸಿಗೆ ಹೊದ್ದಿಕೆಗಳನ್ನೆಲ್ಲಾ ಇಲ್ಲಿಯೇ ಇಡಿಸಿದ್ದೀವಿ....." ಅವರ ಉಪಚಾರಕ್ಕೆ ಶಾಂತ ಮನಸೋತಳು. ನಮ್ಮ ಹತ್ತಿರ ಹಣಕಾಸು ಇದ್ದಿದ್ದರೆ, ಹೀಗೇ ಖರ್ಚು ಮಾಡಿ ವಿಜೃಂಭಣೆಯಿಂದ ಆಚಿಯ ಮದುವೆ ಮಾಡ ಬಹುದಾಗಿತ್ತು ಅಂತೆನ್ನಿಸಿತ್ತು. ಅಡಿಗೆಯ ರುಚಿಯನ್ನಂತೂ ಎಲ್ಲರೂ ಹೊಗಳುವವರೇ. ಇಂಥ ಬೀಗತನ ಸಿಕ್ಕಿತಲ್ಲ ಅಂತ ಶಾಂತ ಬೀಗಿ ಹೋದಳು.

ಮಾರನೇ ದಿನವೇ ಮುಹೂರ್ತ. ಅದೆಷ್ಟು ಜನರನ್ನು ಆಮಂತ್ರಿಸಿದ್ದರೋ ಎನ್ನುವಂತೆ, ಛತ್ರ ತುಂಬಿ ಹೋಗಿತ್ತು. ಮೊದಲಿಗೆ ವರೋಪಚಾರ. ವರನಿಗೆ ಮೂರು ಜೊತೆ ಸೂಟು, ವಜ್ರದ ಉಂಗುರ.... ನಿಗಿ ನಿಗಿ ಹೊಳೆಯುವ ಬೆಳ್ಳಿ ಪಾತ್ರೆಗಳು.... ನಮ್ಮ ಸುಮಂತನ ಅದೃಷ್ಟ ಖುಲಾಯಿಸಿದೆ ಎಂದೇ ಬಗೆದಳು.

ಸುಮುಹೂರ್ತದಲ್ಲಿ ಅಂತರ ಪಟ ಸರಿದು, ವಧೂವರರು ಪರಸ್ಪರ, ಜೀರಿಗೆ ಬೆಲ್ಲವನ್ನು ಹಾಕಿದರು. ಸುಮಂತನೇ ಮೊದಲು ಹಾಕಿದನೆಂದು, ಶಾಂತನ ವಾದವಾದರೆ, ಇಲ್ಲ ತಾರಾಳೇ ಮೊದಲು ಹಾಕಿದಳೆಂದು ವನಜಳ ವಾದ. ನಂತರ ಪರಸ್ಪರ ಹೂವಿನ ಹಾರಗಳನ್ನು ಬದಲಾಯಿಸಿಕೊಂಡರು.

ಅಕ್ಕಿ ಧಾರೆ, ಕನ್ಯಾದಾನ, ಪ್ರತಿಯೊಂದನ್ನು ಸಾಂಗವಾಗಿ ನೆರವೇರಿಸಿದರು. ಮಾಂಗಲ್ಯ

ಧಾರಣೆಯ ಸಮಯದಲ್ಲಿ ಶಾಂತ ತನ್ನ ಸಮೀಪದಲ್ಲಿ ನಿಂತಿದ್ದ ಸುಜಾತಳ ಕಡೆ ಆಗಾಗ್ಗೆ ನೋಡುತ್ತಿದ್ದಳು. ಸುಜಾತಳೂ ಅದನ್ನು ಗಮನಿಸಿದ್ದಳು. ಅಲ್ಲಿ ನೆರೆದಿದ್ದ ಮುತ್ತೈದೆಯರೆಲ್ಲ ತಾರಾಳ ಮೈಮೇಲೆ ಹಾಕಿದ್ದ ಒಡವೆಯನ್ನು ಕುರಿತು ಚರ್ಚಿಸುತ್ತಿದ್ದರು. ಮದುಮಗಳ ಅಲಂಕಾರದಲ್ಲಿದ್ದ ತಾರಾ ನಿತ್ಯಕ್ಕಿಂತ ಸುಂದರವಾಗಿ ಕಂಡಳು. 'ಗಟ್ಟಿಮೇಳ, ಗಟ್ಟಿಮೇಳ' ಎಂದು ಯಾರೋ ಕೂಗಿದರು. ಪುರೋಹಿತರು ಸುಮುಹೂರ್ತೇ ಸಾವಧಾನ..... ಎಂದು ಎತ್ತರದ ಧ್ವನಿಯಲ್ಲಿ ಉಚ್ಚರಿಸುತ್ತಿದ್ದರು. ಸುಮಂತ, ಸುಮುಹೂರ್ತದಲ್ಲಿ ತಾರಾಳ ಕೊರಳಿಗೆ ಮಾಂಗಲ್ಯವನ್ನು ಕಟ್ಟಿದ. ಹಿರಿಯ ಮುತ್ತೈದೆಯರು ಬಂದು ಕುಂಕುಮ ಹಚ್ಚಿ ಆಶೀರ್ವಾದ ಮಾಡಿದರು. ನೆರೆದ ಸಮೂಹದ ಹಿರಿಯರೆಲ್ಲ ಆಶೀರ್ವಾದ ಮಾಡಿದರು. ತಮ್ಮ ಕುಟುಂಬದಲ್ಲೇ ಇಷ್ಟು ಭಾರಿ ಮದುವೆ ನೋಡಿರಲಿಲ್ಲವೆಂದು ಶಾಂತಳ ಅಕ್ಕಂದಿರು ಮಾತನಾಡಿ ಕೊಳ್ಳುತ್ತಿದ್ದರು.

ಬಂದ ಅತಿಥಿಗಳಿಗೆಲ್ಲ ಪಂಕ್ತಿ ಪಂಕ್ತಿಯಾಗಿ ಭೋಜನವಾಯಿತು. ಫಲತಾಂಬೂಲದೊಂದಿಗೆ ಉಡುಗೊರೆಯು ಆಯಿತು. ವಧೂವರರಿಗೆ ಉಡುಗೊರೆಯ ರಾಶಿಯೇ ಸಿಕ್ಕಿತ್ತು. ಸುಮಂತನಿಗೆ ಬಂದ ಉಡುಗೊರೆಯನ್ನೆಲ್ಲ ನೋಡಿಕೊಳ್ಳಲು, ಆಚಿಯ ಮಕ್ಕಳು ಕೂತಿದ್ದರು.

ಲಾಜಾ ಹೋಮ, ನಾಗೋಲಿಯ ಶಾಸ್ತ್ರದೊಂದಿಗೆ, ಸಪ್ತಪದಿ ತುಳಿದು ಸುಮಂತ ತಾರಾ ವಿಧಿವತ್ತಾಗಿ ದಂಪತಿಗಳಾದರು. ಹಿರಿಯರಿಗೆ ನಮಸ್ಕರಿಸಿ, ಹೃತ್ಪೂರ್ವಕ ಆಶೀರ್ವಾದವನ್ನು ಪಡೆದರು. "ಸಾವಿರ ಸುಳ್ಳು ಹೇಳಿ ಒಂದು ವಿವಾಹ ಮಾಡಬಹುದು" ಅಂತ ಗಾದೆಯೇ ಹೇಳುತ್ತದೆ. ಆದುದರಿಂದ, ತಾವು ನಾಟಕವಾಡಿ ಮದುವೆ ಆದುದು, ಮಹಾ ಅಪರಾಧವೇನಲ್ಲ ಅಂತ ಅವನ ಭಾವನೆ. ಇಷ್ಟಾದರೂ ಶಾಂತಳಿಗೇಕೆ ಯಾವ ಅನುಮಾನ ಬರಲಿಲ್ಲ ಎಂದು ರಾಮಸ್ವಾಮಿ ಚಿಂತಿಸುತ್ತಿದ್ದ. ಧಾರೆಯ ಸಮಯಕ್ಕೆ ಅನಂತ ತನ್ನ ಪರಿವಾರದೊಂದಿಗೆ ಹಾಜರಾದ..... ಶಾಂತ ಇದ್ದೆಡೆಗೆ ಬಂದಿರಲಿಲ್ಲ. ವನಜ ಅವನನ್ನು ಕಂಡು ಕೈ ಮುಗಿದು ಕೇಳಿಕೊಂಡಿದ್ದಳು. "ದಯವಿಟ್ಟು ಇಲ್ಲಿಂದ ಹೊರಟು ಹೋಗಿ" ಅಂತ.

"ನಾನು ಹೆಣ್ಣಿನ ಕಡೆಯವರ ಕರೆಯೋಲೆ ಸಿಕ್ಕಿ ಬಂದಿದೇನೆ. ನೀನು ಯಾರು ಹೋಗು ಅನ್ನೋಕೆ" ಎಂದು ರೇಗಿದ್ದ. ವನಜ ಸುಮ್ಮನಾದಳು. ಗಂಡಿನ ಕಡೆಯವರ ಊಟೋಪಚಾರ ಮುಗಿಯಿತು. ಅನಂತ ಶಾಂತ ಕುಳಿತಿದ್ದೆಡೆಗೆ ಬಂದ. ಅವಳು ಬಿಗುಮಾನದಿಂದ ಕೂತಿದ್ದಳು. "ನೀನು ಬೇಡಾಂತ ಅಂದ್ರೂ ನಾನು ನನ್ನ ಪರಿವಾರ ನಿನ್ನ ಮಗನ ಮದುವೆಗೆ ಬಂದಿದೇವೆ. ಈಗೇನು ಮಾಡ್ತೀಯ?" ನಕ್ಕ.

ಶಾಂತ ಅವನ ನಗುವಿಗೆ ಅಸಹ್ಯಗೊಂಡಳು. ರಾಮಸ್ವಾಮಿ ಎದ್ದು ಬಂದು ಅನಂತನ ಕೈ ಹಿಡಿದ. "ನೀನು ಬಂದದ್ದು ತುಂಬಾ ಸಂತೋಷವಾಯ್ತಪ್ಪ. ಊಟ ಆಯ್ತಾ.... ತಾಂಬೂಲ ಆಯ್ತಾ" ವಿಚಾರಿಸಿದ. ಆಚಿ ಬಂದು, "ಮಾವ ಹೇಗಿದೀರಿ?" ಅಂತ ವಿಚಾರಿಸಿದಾಗ ಅವನು ಅವಳ ತಲೆ ಸವರಿದ.

"ಸೋದರ ಮಾವ ಅಂತಂದ್ರೆ, ಈಗ ನೆನಪಿಗೆ ಬಂತಾ?" ಆಕ್ಷೇಪಣೆ ಮಾಡಿದ. ಸುಮಂತ ಬಂದು ನಮಸ್ಕರಿಸಿ, ತಾರಾಳಿಗೂ ನಮಸ್ಕರಿಸುವಂತೆ ಹೇಳಿದ. ಅನಂತ ಹೃದಯ ಪೂರ್ವಕವಾಗಿ ಆಶೀರ್ವಾದ ಮಾಡಿದ.

"ಭೂಮದ ಊಟ"ದ ಸಮಯದಲ್ಲಿ ಅನಂತನದೇ ಸಡಗರ.... ಚಿರೋಟಿ ತಿನ್ನಿಸು..... ಲಾಡು ತಿನ್ನಿಸು ಅಂತ ಸುಮಂತನನ್ನು ಹುರಿದುಂಬಿಸುತ್ತಿದ್ದ. ಶಾಂತಳಿಗೆ

ಅವನನ್ನು ಕಂಡು ಸಂಭ್ರಮ ಉತ್ಸಾಹವೆಲ್ಲಾ ಆರಿ ಹೋಗಿತ್ತು. ಬರಬೇಡ ಅಂತ ಬಾಯಿ ಬಿಟ್ಟು ಹೇಳಿದ್ದರೂ ಬಂದಿದ್ದಾನೆ. ಅದೇನು ಹಗರಣ ಮಾಡ್ತಾನೋ ಅಂತ. ಸೊಗಸಾದ ಚಿರೋಟಿಯ ಊಟ ಅವಳ ಗಂಟಲಲ್ಲಿ ಇಳಿಯಲಿಲ್ಲ. ಪದೇ ಪದೇ ಅವನನ್ನು ನೋಡುತ್ತಿದ್ದಳು. ಶಾಂತಳ ತಾಯಿ ನುಡಿದಳು.

"ಉರುಟಣೆ ಉಯ್ಯಾಲೆ" ಎಲ್ಲಾ ಮರೆಯಾಗ್ತಿದೆ... ಯಾರಾದ್ರೂ ಒಂದೆರಡು ಉರುಟಣೆ ಹಾಡುಗಳನ್ನು ಈಗಲಾದರೂ ಹೇಳಿ....." ಯಾರೋ ಹಿರಿಯ ಹೆಂಗಸು ಒಂದಾದ ಮೇಲೊಂದು, ಹತ್ತಾರು ಉರುಟಣೆ ಹಾಡುಗಳನ್ನು ಹೇಳಿದಳು. ಶಾಂತಳಿಗೆ ಅತ್ತ ಧ್ಯಾನವೇ ಇಲ್ಲ. ಶಾಂತಳ ತಾಯಿ, "ನನಗೂ ಇವೆಲ್ಲ ಬರುತ್ತಿತ್ತು. ಈಗ ಎಲ್ಲಾ ಮರತೇ ಹೋಗಿದೆ... ಯಾರಿಗೂ ಇವೆಲ್ಲಾ ಬೇಡ. ಯಾರಿಗೂ ಕೇಳಲು ಸಮಯವಿಲ್ಲ...." ಎಂದು ಗೊಣಗಿಕೊಂಡಳು.

"ಇದನ್ನೆಲ್ಲ ಯಾರು ಕೇಳ್ತಾರೆ ಅಜ್ಜಿ.....? ಆರ್ಕೆಸ್ಟ್ರಾದವರನ್ನು ಕರೆಸಿದ್ದರೆ, ಒಳ್ಳೊಳ್ಳೆ ಸಿನಿಮಾ ಹಾಡುಗಳನ್ನು ಕೇಳಬಹುದಾಗಿತ್ತು" ಆಚಿ ನುಡಿದಳು. ಎಂಜಲೆಲೆ ಮುಟ್ಟಿದರೆ ಸಾಕು... ಎಂದು, ಭೂಮದ ಎಲೆಯನ್ನು ಮುಟ್ಟಿಸಿದ ಶಾಸ್ತ್ರ ಮಾಡಿಸಿ, ಆಚಿಗೆ ಭಾರಿ ಸೀರೆಯನ್ನು ಉಡುಗೊರೆಯನ್ನಾಗಿ ಕೊಟ್ಟರು.

ಬೆಳಗಿನಿಂದ ಶಾಸ್ತ್ರ ಕಲಾಪಗಳ ನಡುವೆ ಮುಳುಗಿ ಹೋಗಿದ್ದ ಸುಮಂತ ಈಗ ತನ್ನ ಗೆಳೆಯರೊಡನೆ ಹರಟುತ್ತಿದ್ದ. ಸತೀಶ ಹಾಗೂ ಅವನ ಹೆಂಡತಿ ಮಾತ್ರ ಹಾಜರಾಗಿದ್ದರು. ಸ್ಮಿತಾಳಿಗೆ ಹೆರಿಗೆ ಆಗಿದ್ದುದರಿಂದ ಅವಳು ಬರಲಾಗುತ್ತಿಲ್ಲ ಎನ್ನುವುದನ್ನು ತಾರಾ ಹೇಳಿದ್ದಳು. "ಸರಳವಾಗಿ ಮದುವೆಯಾಗೋದು ಬಿಟ್ಟು ಇದೇನಯ್ಯಾ ಇಷ್ಟು ವೈಭವ? ನನಗೆ ಅಸೂಯೆಯಾಗ್ತಿದೆ" ಸತೀಶ ಹಾಸ್ಯ ಮಾಡಿದ.

"ದೇವಸ್ಥಾನದಲ್ಲಿ ಮದುವೆ ಮಾಡಿಕೊಟ್ಟಿದ್ದರೂ ನಾನು ಒಪ್ಪುತ್ತಿದ್ದೆ. ನನಗೂ ಸಹ ಗೊತ್ತಿರಲಿಲ್ಲ. ಈ ಆಡಂಬರ ಯಾರಿಗೆ ಬೇಕಾಗಿದೆ?"

"ಮತ್ತೇಕೆ ಸುಮ್ಮನೇ ಎಲ್ಲರೂ ಹೇಳಿದ್ದನ್ನು ಮಾಡ್ತಾ ಕೂತಿದ್ದೆ. ಎದ್ದು ವಿರೋಧಿಸ ಬೇಕಾಗಿತ್ತು...."

"ಇದು ರಾಜಕೀಯ ಮಂಚವಲ್ಲ ಸುಮ್ಮನಿರು....." ಸುಮಂತ ಗದರಿದ.

"ನಾವುಗಳು ಹೊರಡ್ತೀವಿ." ಸತೀಶ ರಾಮಸ್ವಾಮಿಯ ಅಪ್ಪಣೆ ಕೇಳಿದ.

"ಉಂಟೇ.... ಉಂಟೇ..... ಎಲ್ಲಾದರೂ ಉಂಟೆ? ನೀವುಗಳು ಸಾಯಂಕಾಲದ ಆರತಕ್ಷತೆಗೆ ಇರಲೇಬೇಕು" ರಾಮಸ್ವಾಮಿಯ ಬಲವಂತಕ್ಕೆ ದಂಪತಿಗಳು ಉಳಿದರು. ಸುಮಂತನೂ ದನಿಗೂಡಿಸಿದ್ದ.

"ರಜ ಇಲ್ಲ ಅಂತ ಉಳಿದವರ್‍ಯಾರೂ ಬರಲಿಲ್ಲ. ನೀವು ಬಂದದ್ದು ತುಂಬಾ ಸಂತೋಷವಾಯಿತು."

"ಬರದೇ ಇರ್ತೀನಾ.... ನೀನು ನನ್ನ ಮದುವೆಗೆ ನಮ್ಮೂರಿಗೆ ಬಂದಿರಲಿಲ್ವಾ?"

"ನಿನ್ನ ಮದುವೆ ನೆನಪಿಸಬೇಡಪ್ಪಾ.... ನಾನು ಬಂದದ್ದು ನಿನ್ನ ಮದುವೆಗೆ. ಆದರೆ ಮಾಡಿದ್ದು ಹುಡುಗಿಯರ ಕಾವಲು..... ಬೇಡಪ್ಪಾ ಬೇಡ.... ರಾತ್ರಿ ಪ್ರಯಾಣ ಮಾಡಬಾರದು ಅಂತ ಹೇಳಿದ್ರೂ ಹೊರಟು ಬಿಟ್ಟಿದ್ದೆ. ಮನೆ ತಲುಪುವವರೆಗೂ ಜೀವದಲ್ಲಿ ಜೀವ ಇರಲಿಲ್ಲ."

"ಏಯ್ ಬೊಗಳೆ ಬಿಡಬೇಡ..... ನೀನು ನಿನ್ನ ತಾರಾ ಇಬ್ಬರೇ ಹೇಗೆ ಪ್ರಯಾಣ ಮಾಡಿದೀರಿ ಅಂತ ನನಗೆ ಗೊತ್ತು...." ಸುಮಂತನ ಬೆನ್ನ ಮೇಲೆ ಗುದ್ದಿದ.

"ಅಂಥದ್ದೆಲ್ಲಾ ಏನಿಲ್ಲ. ಅವಳು ನಿದ್ದೆ ಮಾಡಿದಳು. ನಾನು ಎಚ್ಚರವಾಗಿ ಕೂತಿದ್ದೆ.... ಏನೇನೋ ಆಡಬೇಡ ಇವರೆದುರಿಗೆ."

"ಇವತ್ತು ರಾತ್ರಿಯೂ ಎಚ್ಚರವಾಗಿರಬೇಕು........ ಪೆದ್ದು ಪೆದ್ದಾಗಿ ತಾರಾಳಿಗೆ ನಿದ್ದೆ ಮಾಡೋಕೆ ಬಿಡಬೇಡ........" ಕಿವಿಯಲ್ಲಿ ಉಸುರಿದ. ಸುಮಂತನೂ ನಕ್ಕು ಅತ್ತಿತ್ತ ನೋಡಿದ. ತಾರಾ ಅವಳ ಅಣ್ಣನೊಡನೆ ಮಾತಾಡುತ್ತಿದ್ದಳು.

"ಅವನು ಅವಳ ಅಣ್ಣ..... ಒಂಥರಾ ಚೆನ್ನಾಗಿದಾನೆ ಅಲ್ವಾ? ..... ಅವನ ಹೆಸರು ಬುಶ್ಶೀ..... ಅಂತ......" ಸುಮಂತ ನಕ್ಕು ನುಡಿದ.

"ಏನು ಬುಶ್ಶೀ...... ಥೂ ಇಶ್ಶೀ......" ಸತೀಶ ಅಸಹ್ಯವನ್ನು ನಟಿಸಿದ. ನಾನಾಗಲೇ ನೋಡಿದೆ. ಅವನಿಗೆ ಬೆಕ್ಕಿನ ಕಣ್ಣುಗಳು.... 'ಪುಸ್ಸೀ' ಅಂತ ಹೆಸರಿಡಬೇಕಾಗಿತ್ತು. ಇಬ್ಬರೂ ಜೋರಾಗಿ ನಕ್ಕರು. ತಾರಾ ಇತ್ತ ನೋಡಿದಳು.

"ನೋಡಪ್ಪಾ ಶ್ರೀಮತಿಯವರು ನೋಡ್ತಿದಾರೆ... ಏನೂಂತ ಕೇಳು......"

"ಬೇಕಿದ್ರೆ ಇಲ್ಲೇ ಬಂದು ಹೇಳಲಿ. ನಾನ್ಯಾಕೆ ಕೇಳಲಿ....?"

"ಏನಯ್ಯಾ ಈಗಲೇ ದರ್ಬಾರು ಶುರು ಮಾಡಿದ್ಯಾ?"

"ಹೊಸದರಲ್ಲಾದರೂ ಸ್ವಲ್ಪ ಸತಾಯಿಸಬೇಕು. ಆಮೇಲೆ ಇದ್ದೇ ಇದೆ......"

"ಓಹೋ ಬಹಳ ಅನುಭವಸ್ಥನ ತರಹ ಮಾತನಾಡ್ತೀಯ....."

"ನಮ್ಮ ಅಮ್ಮ ಅಪ್ಪನ್ನ ನಾನು ಹುಟ್ಟಿದಾಗಿನಿಂದ ನೋಡಿಲ್ವಾ? ಮತ್ತೆ ಇಬ್ಬರೂ ಜೋರಾಗಿ ನಕ್ಕರು.

"ಎಲ್ರೂ ನಿಮ್ಮನ್ನೇ ನೋಡ್ತಿದಾರೆ. ಮೆಲ್ಲಗೆ ನಗಬಾರದಾ?"

"ಏನೋ ಪೋಲಿ ಜೋಕಿಗೆ ನಗ್ತಿದಾರೆ ಅಂತ ಅಂದು ಕೊಳ್ತಾರೆ ಬಿಡು."

"ಥೂ ನೀವೊಬ್ರು" ಎನ್ನುತ್ತಾ ಸತೀಶನ ಹೆಂಡತಿ ಅಲ್ಲಿಂದ ಸರಿದಳು.

* * *

- - 30 - -

ಆರತಕ್ಷತೆಯ ಸಮಯದಲ್ಲಿ, ಬೆಳಿಗ್ಗೆ ಬಂದವರೆಲ್ಲಾ ಮತ್ತೆ ಬಂದಿದ್ದರು. ಬೇರೆ ಬೇರೆ ಬಣ್ಣದ ಸೀರೆ, ಬೇರೆ ಬೇರೆ ಒಡವೆ ಅಲಂಕಾರಗಳಲ್ಲಿ ನೆರೆದಿದ್ದರು. ಹೊಸ ಸೂಟು ಬೂಟು ಧರಿಸಿ, ಟೈ ಕಟ್ಟಿ ಸಿದ್ಧನಾದ ಸುಮಂತ. ಸತೀಶ ಸುಮಂತನಿಗೆ ಸಹಾಯಕನಾಗಿದ್ದ.

ಆಚಿ ವನಜ ಇಬ್ಬರೂ ಸೆರಿ, ತಾರಾಳನ್ನು ಅಲಂಕರಿಸಿದ್ದರು. ತಮಗೆ ತಿಳಿದಂತೆ ಕೇಶಾಲಂಕಾರ ಮಾಡಿದ್ದರು. "ಈ ಸೀರೆ ಉಟ್ಕೋತೀರೋ, ಅಥವಾ ಬೇರೆ ಇದೆಯೋ?" ತಮ್ಮ ಮನೆಯಲ್ಲಿ ಕೊಟ್ಟ ಸೀರೆಯನ್ನು ತೋರಿದಳು.

"ಇದೇ ಇರಲಿ ಚೆನ್ನಾಗಿದೆ" ಎಂದು ಹೇಳಿ, "ಪ್ಲೀಸ್ ನನ್ನನ್ನು ಏಕವಚನದಲ್ಲೇ ಕರೆಯಿರಿ. ನಾನು ನಿಮ್ಮ ತಮ್ಮನಿಗಿಂತ ಚಿಕ್ಕವಳು" ಎಂದಳು.

"ಆಯ್ತಮ್ಮಾ. ನೀನು ಬೇಗ ಬೇಗ ಸೀರೆ ಉಟ್ಟು ಒಡವೆ ಧರಿಸಿ ಹೊರಗೆ ಬಾ. ಸುಮಂತ ಕಾಯುತ್ತಿರಬಹುದು" ಎಂದಳು. ಇಬ್ಬರೂ ಆಚೆ ಬಂದರು.

ಹವಳದ ಬಣ್ಣದ ಭಾರೀ ಸೀರೆ, ಚಿನ್ನದ ಎಳೆಯ ಅಂಚು, ಸೆರಗು, ಒಡಲು, ಅದೇ ಬಣ್ಣದ ರೇಶಿಮೆ ರವಿಕೆ, ಅದಕ್ಕೆ ಒಪ್ಪುವ ಹವಳದ ಸೆಟ್ ಒಡವೆಗಳನ್ನು ಧರಿಸಿ, ನಿಲುವುಗನ್ನಡಿಯಲ್ಲಿ ತನ್ನನ್ನೊಮ್ಮೆ ನೋಡಿಕೊಂಡು, ಹೊರಬಂದಳು.

ಬಾಗಿಲಲ್ಲಿ ಅವಳಿಗಾಗಿ ಕಾಯುತ್ತಾ ನಿಂತಿದ್ದ ಸುಮಂತ ಮೆಚ್ಚುಗೆಯಿಂದ ಕೈ ನೀಡಿದ. ತಾರಾ ಕೈ ಹಿಡಿದಳು. ಇಬ್ಬರೂ ಕೈ ಹಿಡಿದೇ ಆರತಕ್ಷತೆಯ ಸೋಫಾದ ಬಳಿಗೆ ಬಂದರು. ಸತೀಶ ಇಬ್ಬರಿಗೂ ಒಂದೊಂದು ಹೂವಿನ ಹಾರಗಳನ್ನು ಕೊಟ್ಟ. ಪರಸ್ಪರ ಹಾರಗಳ ವಿನಿಮಯವಾಯಿತು. ಎಲ್ಲರೂ ಚಪ್ಪಾಳೆ ತಟ್ಟಿದರು. ಫೋಟೋಗ್ರಾಫರ್‌ನ ಕ್ಯಾಮೆರಾದ ಫ್ಲಾಶ್ ಬೆಳಗಿತು. ಇಬ್ಬರೂ ಸೋಫಾದ ಮೇಲೆ ಆಸೀನರಾದರು.

ಒಂದು ಪಕ್ಕಕ್ಕೆ ಸಂಗೀತಗಾರರಿಗೆಂದು ವೇದಿಕೆ ಸಿದ್ಧವಾಗಿತ್ತು. ಯಾರೋ ಇಬ್ಬರು ಹುಡುಗಿಯರು ಬಂದು ಹಾಡ್ತಾರಂತೆ. ಪಕ್ಕವಾದ್ಯದವರೂ ಬಂದಿದಾರೆ. ಯಾರೋ ಮಾತನಾಡಿಕೊಳ್ಳುತ್ತಿದ್ದರು. ಕೆಲವೇ ನಿಮಿಷಗಳಲ್ಲಿ, ಒಂದೇ ಬಣ್ಣದ ಸೀರೆ ರವಿಕೆ ಕೊಟ್ಟು, ಒಂದೇ ರೀತಿಯಾಗಿ ಒಡವೆ ಧರಿಸಿ, ಅಲಂಕರಿಸಿಕೊಂಡಿದ್ದ ಯುವತಿಯರಿಬ್ಬರು ವೇದಿಕೆಯನ್ನು ಹತ್ತಿ ಅಲ್ಲಿದ್ದ ಸಭಿಕರಿಗೆ ಕೈ ಮುಗಿದರು. ಪಿಟೀಲಿನವರೂ, ಮೃದಂಗದವರೂ ಬಂದು ತಮ್ಮ ತಮ್ಮ ಸ್ಥಳದಲ್ಲಿ ಕುಳಿತರು. ಗಂಟಲನ್ನು ಸರಿಪಡಿಸಿಕೊಂಡು ಹುಡುಗಿಯರು, ಹಾಡಲು ಪ್ರಾರಂಭಿಸಿದರು. ಎಲ್ಲರ ಗಮನವೂ ಇತ್ತವೇ. ಮೊದಲಿಗೆ ಗಣಪತಿಯ ಪ್ರಾರ್ಥನೆ ರಾಗಬದ್ಧವಾಗಿ, ಸುಶ್ರಾವ್ಯವಾಗಿ ತೇಲಿ ಬಂದ ಗಾನಕ್ಕೆ ಕೆಲವರು ತಲೆದೂಗಿದರು.

ಒಂದಾದನಂತರ ಇನ್ನೊಂದು, ಆಯ್ಕೆ ಮಾಡಿದ ಕೀರ್ತನೆಗಳನ್ನು ದೇವರ ನಾಮಗಳನ್ನು ಹಾಡಿ ರಂಜಿಸಿದರು. ವಧೂವರರನ್ನು ಚುಡಾಯಿಸುವ ಜಾನಪದ ಗೀತೆಗಳನ್ನು ಹಾಡಿದರು. ಚಿಕ್ಕ ಮಕ್ಕಳಿಗೆ ಇಷ್ಟವಾಗುವಂತೆ, ನಾಲ್ಕಾರು ಸಿನಿಮಾ ಹಾಡುಗಳನ್ನು ಹಾಡಿದರು. ಬಂದ ಅತಿಥಿಗಳು ಮದುಮಕ್ಕಳಿಗೆ ಶುಭ ಕೋರಿ, ಉಡುಗೊರೆಯನ್ನಿತ್ತು ಫೋಟೋಗೆ ಒಂದು ಗಳಿಗೆ ನಿಂತು, ಈ ವೇದಿಕೆಯ ಮುಂದಿನಿಂದ ಹಾದು ಭೋಜನ ಶಾಲೆಯ ಕಡೆಗೆ ಹೋಗುತ್ತಿದ್ದರು. ಅಲ್ಲಿಗೂ ಈ ಸಂಗೀತದ ನಾದ ಲಹರಿ ಹರಿದು ಬರುತ್ತಿತ್ತು."

"ಯಾರೇ ಅದು ಬಿಡುವಿಲ್ಲದೇ ಒಂದೇ ಸಮನೆ ಹಾಡ್ತಿದಾರೆ" ಆಚಿಯನ್ನು ಅವರ ಅಜ್ಜಿ ಕೇಳಿದಳು.

"ಯಾರೋ ಸಂಗೀತ ವಿದ್ವಾಂಸೆಯರು. ಈ ಆರತಕ್ಷತೆಗೆ ಅಂತ ಕರೆಸಿದ್ದಾರೆ.... ಚೆನ್ನಾಗಿ ಹಾಡ್ತಿದಾರೆ ಅಲ್ವೇನಮ್ಮಾ....."

"ಹೂಂ ಪರವಾಗಿಲ್ಲ. ನಮ್ಮ ಬೀಗರು ಯಾವುದಕ್ಕೂ ಕಡಿಮೆ ಮಾಡಲಿಲ್ಲ. ಈ ಕಾರ್ಯಕ್ರಮವನ್ನು ಸಹ ಇಡಿಸಿದ್ದಾರೆ."

"ಇಲ್ಲೇ ಯಾಕೆ ಕೂತಿದೀರಿ..... ಹೊರಗೆ ಬಂದು ಕುರ್ಚಿಯ ಮೇಲೆ ಕೂತ್ಕೋಬಾರದೇ?" ರೂಮಿನೊಳಗೇ ಇದ್ದವರಿಗೆ ರಾಮಸ್ವಾಮಿ ಹೇಳಿದ.

"ಅಮ್ಮ ಸುಸ್ತು ಅಂತ ಮಲಗಿದ್ದಳು. ನಾನೂ ಇಲ್ಲೇ ಕೂತೆ. ಹೋಗೇ ಆಚಿ, ಚಿಕ್ಕೋಳು ಪುಟ್ಟೋಳು ನೀನು..... ಗರಾಗರಿಕೆಯಾಗಿ ಓಡಾಡು..... ನಿನ್ನ ಗಂಡ ಮಕ್ಕಳು ಎಲ್ಲಾ ಎಲ್ಲಿ?"

"ಅವರೆಲ್ಲ ಊರು ಸುತ್ತಾಕಿ ಬರ್ತೀವಿ ಅಂತ ಹೋಗಿದಾರೆ. ಊಟದ ಹೊತ್ತಿಗೆ ಬರಬಹುದು."

"ಇದೇನು ದೊಡ್ಡ ಸಿಟೀನಾ? ನೋಡೋಕೆ ಏನಿದೆ?"

"ಅದೇ...... ಯಾಕೆ ಏನೂ ಇಲ್ಲ ಅಂತ ನೋಡೋಕೆ ಹೋಗಿರಬಹುದು" ರಾಮಸ್ವಾಮಿ ನುಡಿದ.

"ಹೋಗಿ ಅಪ್ಪಾ.... ನೀವೊಬ್ರು........"

"ನಾನು ಒಬ್ಬನೇ..... ನಿಮ್ಮಮ್ಮನಿಗೆ ಸೊಸೆ ಸಿಕ್ಕಿದಳು. ನಿನ್ನ ತಮ್ಮನಿಗೆ ಹೆಂಡತಿ ಸಿಕ್ಕಿದಳು. ಇನ್ನು ನಾನು ಒಂಟೀನೇ..... ಅಂದ್ಹಾಗೇ ವನಜ ಎಲ್ಲಿ? ಪಾಪ ಅವಳೂ ನನ್ನ ಹಾಗೇ ಒಂಟಿ......"

"ಹೌದು ಅಂದ್ಹಾಗೇ ಅತ್ತೆ ಎಲ್ಲಿ.....?"

"ಅಣ್ಣ ಬಂದಿದ್ನಲ್ಲ.... ಎಲ್ಲೋ ಕೂತು ಜಗಳ ಆಡ್ತಿದಾರೇನೋ?"

"ವನಜ ಅಂಥೋಳಲ್ಲ ಶಾಂತ..... ಅವಳೆಂದೂ ಗಂಡನೊಡನೆ ಜಗಳ ಆಡಿದ್ದನ್ನೇ ನಾನು ಕಾಣೆ...." ತಾಯಿ ಹೇಳಿದಳು.

"ನೀವೆಲ್ಲಾ ಸೇರಿ ಅತ್ತೆಗೆ ಅನ್ಯಾಯ ಮಾಡಿ ಬಿಟ್ಟರಿ ಅಜ್ಜಿ....... ಎಲ್ಲಾ ತಿಳಿದಿದ್ದೂ ನೀವೇಕೆ ಮಾವನಿಗೆ ಮತ್ತೆ ಮದುವೆ ಮಾಡಿದಿರಿ?"

"ಏನೋ ಸರಿ ಹೋಗ್ತಾನೆ ಅಂತ ಅಂದುಕೊಂಡೆವು."

"ಈ ಕಾಲ ಆಗಿದ್ದಿದ್ರೆ, ಅತ್ತೆಗೆ ಡೈವೋರ್ಸ್ ಕೊಡಿಸಿ, ಮತ್ತೆ ಮದುವೆ ಮಾಡಬಹುದಾಗಿತ್ತು..... ಅತ್ತೆ ಯಾವ ಸುಖಕ್ಕಾಗಿ ಹೀಗೆ ಇದಾರೋ......?"

"ಅದಕ್ಕೇ ನಾನು ಅವಳಿಗೆ ಏನೂ ಹೇಳುಲ್ಲಮ್ಮ. ತನಗೇ ಅಂತ ಒಂದು ಮೂರು ಕಾಸನ್ನು ಕೂಡಿಡುಲ್ಲ. ಗಂಡನಾದವನು ತನ್ನ ಕರ್ತವ್ಯ ಅಂತ ಅವಳಿಗೆ ಅಂತ ಪ್ರತಿ ತಿಂಗಳೂ ದುಡ್ಡು ಕೊಡ್ತಾನೆ ಅದನ್ನೆಲ್ಲ ಹಾಗೆ ಕೂಡಿಡುತ್ತಾಳೆ. ನಿನ್ನ ಮದುವೇಲಿ ಕೂಡಾ, ನಿಮ್ಮಮ್ಮನಿಗೆ ಜವುಳಿಗೆ ಅಂತ ದುಡ್ಡು ಕೊಟ್ಟಿದ್ದಲ್ಲ."

ಶಾಂತಳ ಮುಖಕ್ಕೆ ಅಪ್ಪಳಿಸಿದಂತಾಗಿತ್ತು "ಅತ್ತಿಗೆ ಇಂಥ ಕೆಲಸ ಮಾಡಬಹುದೇ.....?"

"ಆ ಹಣ ಏನು ಅವನದ್ದೇ? ನಮ್ಮದೇ..... ನಿಮ್ಮಪ್ಪನ ಮಂಡಿ ವ್ಯವಹಾರ ಎಲ್ಲಾ ನೋಡಿಕೊಳ್ತಾ ಇರೋನು ಇವನೇ ತಾನೇ..... ಕೊಟ್ಟರೇನಾಯ್ತು?"

"ಅಜ್ಜೀ ಏಳಿ ಅಜ್ಜೀ..... ನಾವೆಲ್ಲಾ ಒಳಗೇ ಇದ್ದರೆ, ಎಲ್ರೂ ತಪ್ಪು ತಿಳಿದುಕೊಳ್ತಾರೆ."

"ಹೂಂ. ಏಳ್ತಮ್ಮ" ಎನ್ನುತ್ತಾ ಅಜ್ಜಿ ಎದ್ದಳು. ಆಚಿ ಹೊರಬಂದಳು. ಅಮ್ಮ ಹೇಳಿದ್ದಂತೆ, ಅತ್ತೆ ಮಾವ ಒಂದು ಕಡೆ ನಿಂತು ಏನೋ ವಾಗ್ವಾದ ಮಾಡುತ್ತಿದ್ದಂತೆ ಇತ್ತು. ಅಲ್ಲಿಗೆ ಹೋಗುವ ಮನಸಸಾಗಲಿಲ್ಲ. ಜರತಾರಿ ಪಂಚೆ ಉಟ್ಟು, ಸಿಲ್ಕಿನ ಜುಬ್ಬಾ ಧರಿಸಿ ಠಾಕೋ ಠೀಕಾಗಿ ನಿಂತಿದ್ದ ಮಾವ, ಆಗಾಗ ಹಾಡುತ್ತಿದ್ದ ಹುಡುಗಿಯರ ಕಡೆ ನೋಡುತ್ತಿದ್ದ. ಸಂಗೀತ ಕಚೇರಿ ಮುಕ್ತಾಯಕ್ಕೆ ಬಂದಿತ್ತು. ಅದಕ್ಕೇ ಕಾದಿದ್ದವನಂತೆ, ಅನಂತ ವೇದಿಕೆಯನ್ನು ಹತ್ತಿ ಬಂದು, ಮೈಕ್ ಹಿಡಿದ.

ನಾನು, ಅನಂತಪದ್ಮನಾಭ ಅಂತ, ಮದುಮಗ ಸುಮಂತನ ಸೋದರಮಾವ, ಅದಕ್ಕಿಂತ ಇನ್ನು ಒಂದು ಹೆಮ್ಮೆಯ ವಿಷಯವಿದೆ..... ಅದೇನೆಂದರೆ, ಈಗ ಸಂಗೀತ ಕಚೇರಿ ನಡೆಸಿ ಕೊಟ್ರಲ್ಲ, ಕುಮಾರಿ ವಸಂತ, ಕುಮಾರಿ ವಿನುತ, ಇವರಿಬ್ಬರೂ ನನ್ನ ಮಕ್ಕಳು.... ಇವರ ಗುರು, ನನ್ನ ಪತ್ನಿ ಜಾನಕಿ....... ಜಾನಕೀ ಬಾ.... ಇಲ್ಲಿ ಸಮೀಪ ದಲ್ಲಿ ಕುಳಿತಿದ್ದ ಪತ್ನಿಯನ್ನು ಕರೆದ..... ಜಾನಕಿ ವೇದಿಕೆ ಹತ್ತಿ ನಿಂತು ಎಲ್ಲರಿಗೂ ಕೈ ಮುಗಿದು ನಮಸ್ಕಾರ ಎಂದಳು.

ಆಚಿ, ಹಿಂದೆ ಹಿಂದೆ ಸರಿದು, ತಾಯಿಯನ್ನು ಅಜ್ಜಿಯನ್ನು ಹೊರಕ್ಕೆ ಕರೆತಂದಳು. "ಅಮ್ಮಾ ಕೇಳಿದ್ಯೇನಮ್ಮಾ..... ಈ ಹುಡುಗಿಯರು, ಅನಂತ ಮಾವನ ಮಕ್ಕಳಂತೆ.

ಅಜ್ಜೀ ನಿಮಗೆ ಗೊತ್ತಿತ್ತಾ.....?"

"ಹೋಗೆ ಸುಮ್ಮನೆ ಬಡಾಯಿ ಕೊಚ್ಕೋತಾನೆ....."

"ಇಲ್ಲ ಅಜ್ಜೀ..... ಮಾವ ಯಾಕೆ ಸುಳ್ಳು ಹೇಳ್ತಾರೆ.....? ಆದರೆ ಇರುವರೆಗೂ ಯಾರಿಗೂ ಯಾಕೆ ಹೇಳಿರಲಿಲ್ಲ?"

"ಈ ದಿನಕ್ಕೋಸ್ಕರ ಕಾಯ್ತಿದ್ದ ಅಂತ ಕಾಣುತ್ತೆ" ಶಾಂತ ಹಂಗಿಸಿದಳು.

"ಹಾಗೇ ಇನ್ನು ಒಂದು ಶುಭ ಸಮಾಚಾರವನ್ನು ತಿಳಿಸುವುದು ಇದೆ..... ನನ್ನ ದೊಡ್ಡ ಮಗಳು ವಿಮಲ. ಈ ಮನೆಗೆ ಸಧ್ಯದಲ್ಲೇ ಸೊಸೆಯಾಗಿ ಬರಲಿದ್ದಾಳೆ. ಶಾಂತಾ ಕುಸಿದು ಬೀಳುವುದೊಂದು ಬಾಕಿ. ಸುಮಂತ ತಾರಾಳ ಕಡೆ ನೋಡಿ ಕಣ್ಣಿನಲ್ಲೇ ಪ್ರಶ್ನಿಸಿದ್ದ. ಅವಳು ಗೊತ್ತಿಲ್ಲ ಎನ್ನುವಂತೆ ತಲೆಯಾಡಿಸಿದ್ದಳು.

ಮಂಜುನಾಥರಾಯರು, ನನ್ನ ಭಾವೀ ಬೀಗರು. ಅವರ ದತ್ತುಪುತ್ರ ಚಂದ್ರಶೇಖರ ನನ್ನ ಭಾವೀ ಅಳಿಯ...... ನಿಮ್ಮೆಲ್ಲರಿಗೂ ಆಹ್ವಾನ ಪತ್ರಿಕೆಯನ್ನು ಕಳಿಸುತ್ತೇನೆ. ಎಲ್ಲರೂ ಮದುವೆಗೆ ಆಗಮಿಸಿ, ವಧೂವರರನ್ನು ಆಶೀರ್ವದಿಸಬೇಕು. ಕೈ ಮುಗಿದು ಕೇಳಿಕೊಂಡ. ಎಲ್ಲರೂ ಅವನನ್ನೇ ವಿಚಿತ್ರವಾಗಿ ನೋಡುತ್ತಿದಾರೆ ಅಂತೆನ್ನಿಸಿತ್ತು ವನಜಳಿಗೆ. ಶಾಂತಳ ಬಳಿಗೆ ಬಂದಳು.

"ಎಲ್ಲಾ ನೋಡ್ಕೊಂಡು ಸುಮ್ಮನಿದೀರಲ್ಲ ತಾಯಿ ಮಗಳು..... ಕರೆದು ಬುದ್ಧಿ ಹೇಳಬಾರದಾ.....?"

"ಅವನ ವಿಷಯ ನಿನಗೆ ಹೊಸದೇ..... ಸುಮ್ಮನಿರು..." ಅಷ್ಟರಲ್ಲಿ ಅನಂತ ಮತ್ತೆ ಮಾತನ್ನು ಮುಂದುವರೆಸಿದ್ದ. ಅವನು ಇನ್ನು ಏನೇನು ಹೇಳಿಬಿಡುವನೋ ಎಂದು ಎಲ್ಲರಿಗೂ ಗಾಬರಿ ಆಗಿತ್ತು. ರಾಮಸ್ವಾಮಿ ಸುಜಾತಳಿಗೆ ಏನನ್ನೋ ಹೇಳಿದ. ಸುಜಾತ ಅನಂತನಿದ್ದೆಡೆಗೆ ಬಂದಳು.

"ಬನ್ನಿ ಸುಜಾತಾರವರೇ...... ಇವರು ಸುಜಾತಾ..... ಸುಮಂತನ ಅತ್ತೆ. ನನ್ನ ತಂಗಿಯ ಬೀಗಿತ್ತಿ.... ಈಕೆ ಸಮಾಜ ಸೇವಕಿ, ಮನೆ ವೈದ್ಯದಲ್ಲಿ ನಿಪುಣೆ..... ಎಲೆ ಮರೆಯ ಕಾಯಿಯಂತೆ, ತಮ್ಮನ್ನು ತಾವೇ ಬಚ್ಚಿಟ್ಟುಕೊಂಡು ಪರರಿಗೆ ಉಪಕಾರ ಮಾಡುವ ಮನೋಭಾವ. ಇಂಥ ಬೀಗಿತ್ತಿ ಸಿಕ್ಕಿರುವುದು ನನ್ನ ತಂಗಿಯ ಪುಣ್ಯ...... ಈ ಮೊದಲು ಈಗೆ ಹೀಗಿರಲಿಲ್ಲ.... ಬೆಂಕಿಯ ಆಕಸ್ಮಿಕದಲ್ಲಿ ಆದ ಸುಟ್ಟಗಾಯಗಳಿಂದ ಈಕೆಯ ಮುಖಚಹರೆಯೂ ಬದಲಾಗಿದೆ...... ಆದರೆ..... ಆಕೆಯ ವ್ಯಕ್ತಿತ್ವ ಮಾತ್ರ ಬದಲಾಗಿಲ್ಲ. ಈಗಲೂ ಈಕೆ ಸುಜಾತಳೇ...... ಈಕೆ ಯಾರು ಗೊತ್ತೇ.....?"

ಸುಮಂತ ಬಂದು ಮಾವನ ಕೈನಿಂದ ಮೈಕನ್ನು ಕಿತ್ತುಕೊಂಡ..... "ಯಾಕೆ ಹೀಗೆಲ್ಲಾ ಮಾಡ್ತಿದೀರಿ ಮಾವ?" ಯಾರಿಗೂ ಕೇಳಿಸದಂತೆ ಕೇಳಿದ್ದ.

"ಏನೋ ನಿಮ್ಮ ಅತ್ತೆಯ ಬಗ್ಗೆ ನಾಲ್ಕಾರು ಮಾತುಗಳನ್ನು ಹೇಳಬೇಕೆನ್ನಿಸಿತು ಹೇಳಿದೆ.... ಯಾಕೆ ಹೆದರಿಕೇನಾ?"

"ಹೆದರಿಕೆ ಯಾಕೆ? ಇಲ್ಲಿ ಆ ಮಾತುಗಳೆಲ್ಲಾ ಯಾಕೆ?"

"ತಡಿಯಪ್ಪಾ ಸುಮಂತ..... ನಾನು ಹೇಳ್ತೀನಿ" ಎನ್ನುತ್ತ ಸುಜಾತ ತನ್ನ ಕೈಗೆ ಮೈಕನ್ನು ತೆಗೆದುಕೊಂಡಳು. ತಾರಾ ಸಹ ಬಂದು ನಿಂತಿದ್ದಳು. ಅವಳ ಮುಖದಲ್ಲಿ ಗಾಬರಿ ಎದ್ದು ಕಾಣುತ್ತಿತ್ತು.

"ಇವರು ಹೇಳುವಂತೆ, ನಾನು ಯಾವ ದೊಡ್ಡ ಸಮಾಜ ಸೇವಕಿಯಲ್ಲ. ನನ್ನ ತಂದೆ, ವಿಶ್ವನಾಥ ಪಂಡಿತರು, ಹೆಸರಾಂತ ವೈದ್ಯರಾಗಿದ್ದರು. ಅವರ ತಂದೆಯ ಕಾಲದಲ್ಲಿ

ಈ ಭೂಮಿ ಈ ಜಾಗಿರು ಎಲ್ಲಾ ಮಹಾರಾಜರಿಂದ ದೊರೆತ ಬಳುವಳಿ. ಅವರ ಹೆಸರಿನಲ್ಲಿ ಪ್ರತಿವರ್ಷವೂ ಕಲಾವಿದರಿಗೆ ಸನ್ಮಾನ ಮಾಡುವ ಪದ್ಧತಿ ಇದೆ. ಈ ವರ್ಷ ಈ ಸಮಾರಂಭದಲ್ಲಿ ಈ ಕಿರಿಯ ಕಲಾವಿದೆಯರಿಗೆ, ಸನ್ಮಾನ ಮಾಡುವ ಅವಕಾಶ ನಮಗೆ ಒದಗಿದೆ. ಹಾಗೇ..... ಇವರು ಹೇಳಿದ ಹಾಗೇ ಇವರು ಸಧ್ಯದಲ್ಲೇ ನಮ್ಮ ಬೀಗರಾಗಲಿದ್ದಾರೆ. ಇವರ ಮಗಳು ವಿಮಲ ನನ್ನ ಸೊಸೆಯಾಗಿ ಬರುತ್ತಿದಾಳೆ.... ಇಲ್ಲಿ ಬಾಮ್ಮಾ ವಿಮಲಾ.... ಅಲ್ಲಿಯೇ ಇದ್ದ ವಿಮಲ ವೇದಿಕೆ ಹತ್ತಿದಳು.... ಚಂದ್ರೂ ಬಾ ಇಲ್ಲಿ.... ಮಗನನ್ನು ಕರೆದಳು.

"ಇವನು ನನ್ನ ಮಗ, ನನ್ನ ಅಣ್ಣನ ದತ್ತು ಮಗ....." ಅಭಿಮಾನದಿಂದ ಹೇಳಿಕೊಂಡಳು. ಅಷ್ಟರಲ್ಲಿ ಸೀರೆ, ಕುಪ್ಪುಸದ ಖಣಗಳನ್ನು ಫಲ ತಾಂಬೂಲಗಳನ್ನು ತಂದಿತ್ತರು. ಸುಜಾತ ಈ ಹುಡುಗಿಯರಿಗೆ ಸೀರೆಗಳನ್ನು ಕೊಟ್ಟು ಉಳಿದವರಿಗೆಲ್ಲ ಫಲತಾಂಬೂಲಗಳನ್ನು ಕೊಟ್ಟಳು. ಸುಜಾತ, ಪಿಸುದನಿಯಲ್ಲಿ ಅನಂತನಿಗೆ ಏನನ್ನೋ ಹೇಳಿ ವೇದಿಕೆಯಿಂದ ಕೆಳಗಿಳಿದಳು.

"ತಾರಾ.... ಇದೆಲ್ಲ ಏನು? ಸುಮಂತ ಗಂಭೀರನಾಗಿ ಕೇಳಿದ.

"ನಂಗೇನು ಗೊತ್ತು..... ಅವರು ನಿಮ್ಮ ಸೋದರರ ಮಾವನಂತೆ....."

"ಮಾವಾ.... ತಾಯಿಗೆ ಸಮಾನ ಅದಕ್ಕೆ ಸುಮ್ಮನಿದೀನಿ.... ಇಲ್ಲದಿದ್ದರೆ ಆಗಲೇ ವೇದಿಕೆಯಿಂದ ಕೆಳಗಿಳಿಸುತ್ತಿದ್ದೆ. ಬೇಕೂಂತ ಮಾಡಿರೋ ಕಿತಾಪತಿ...."

"ಅವರು ಇನ್ನೇನೋ ಹೇಳಬೇಕೂಂತ ಇದ್ದರು....."

"ನಂಗೊತ್ತು ಏನು ಹೇಳಬೇಕೂಂತ ಇದ್ದುದು ಅಂತ ಆದರೆ ಅದನ್ನು ಹೇಳಲೇಬೇಕೂಂತ ಏನಿಲ್ಲ. ನಿಮ್ಮ ತಾಯಿ ಎಲೆಯ ಮರೆಯ ಕಾಯಿಯಾಗಿಯೇ ಉಳಿಯಲಿ...."

"ಯಾಕೆ ನಿಮ್ಮಮ್ಮನಿಗೆ ಹೆದರ್ತೀರಾ... ಈಗಲೂ......"

"ಅದು ಹೆದರಿಕೆ ಅಲ್ಲ ತಾರಾ.... ಸಜ್ಜನಿಕೆ. ಹಗರಣ ಆಗಲಿ ಅಂತ ನಿನಗೆ ಇಷ್ಟಾನಾ?"

"ಆದರೆ ಒಂದಲ್ಲ ಒಂದು ದಿನ ನಿಜ ಏನೂಂತ ತಿಳಿದೇ ತಿಳಿಯುತ್ತೆ."

"ನೋಡ್ಕೋಳ್ಳೋಣ ಆ ಕಾಲ ಬಂದಾಗ...." ಆರತಕ್ಷತೆಯ ಸಮಾರಂಭ ಮುಗಿದಿತ್ತು. ಆದರೆ ಕೆಲವರ ಮನಸ್ಸು ಕದಡಿ ಹೋಗಿತ್ತು.

"ನೋಡೀ ಅತ್ತಿಗೆ, ಅಣ್ಣ ಹೇಗೆ ಮೆರೀತಿದಾನೆ.... ನಿನಗಿಂತ ನಾನೇನು ಕಡಿಮೆ ಇಲ್ಲ ಅಂತ...." ಶಾಂತ ನುಡಿದಳು.

"ಜಂಭ ಸಹಜ ಬಿಡಮ್ಮ......, ಎಂಥಾ ಒಳ್ಳೆಯ ಮನೆತನ ಸಿಕ್ಕಿದೆ ನಿನ್ನ ಅಣ್ಣನಿಗೆ...." ಆಚಿ ನುಡಿದಳು.

"ಇದೇನಾ ನಿನಗೆ ಬುದ್ಧಿ ಕಲಿಸ್ತೀನಿ ಅಂತ ಹಾರಾಡಿದ್ದು... ನಿನ್ನ ಮಾವ....."

"ಇಲ್ಲಮ್ಮ ಇನ್ನೂ ಏನೊ ಹೇಳಬೇಕೂಂತ ಇದ್ದರು. ಆದರೆ ಆಕೆ ಅಷ್ಟರಲ್ಲಿ ಬಂದು ತಡೆದರು."

"ಮತ್ತಿನ್ನೇನು ಮಾಡ್ತಾರೆ? ಎಲ್ಲಿದೀನಿ, ಏನು ಮಾತಾಡ್ತಿದೀನಿ ಅನ್ನೋ ಜ್ಞಾನ ಬೇಡವೇ ಮೈ ಮೇಲೆ..... ಬರೀ ಅಸಂಬದ್ಧ ಪ್ರಲಾಪ....."

"ಮಕ್ಕಳು ಸಂಗೀತಗಾರರು. ಅವರು ರಾಗಾಲಾಪನೆ ಮಾಡ್ತಾರೆ..... ಇವನು ಪ್ರಲಾಪ ಮಾಡ್ತಾನೆ" ಅಜ್ಜಿ ಮೂತಿ ಸೊಟ್ಟಗೆ ಮಾಡಿ ನುಡಿದಳು

"ಅಜ್ಜೀ ಅವರು ಏನ್ನಾಗಲೀ ನಿಮ್ಮ ಮಗ ಅಲ್ವಾ? ನೀವೂ ಹೀಗೆಲ್ಲಾ ಮಾತಾಡ್ತೀರಾ.... ಸುಮಂತ ಏನೇ ತಪ್ಪು ಮಾಡಿದ್ದರೂ ಅಮ್ಮ ಹೀಗೆ ಎಲ್ಲರೆದುರಿಗೆ ಅನ್ನುತ್ತಿರಲಿಲ್ಲ. ಅಲ್ವೇನಮ್ಮಾ....."

"ಸುಮಂತ ಚಿನ್ನದಂತಹ ಹುಡುಗ. ಅವನೆಲ್ಲಿ ಇವನೆಲ್ಲಿ? ಆನೆ ಹೊಟ್ಟೇಲಿ ಲದ್ದಿ ಬಿದ್ದ ಹಾಗೆ..... ನನ್ನ ಮಗನ ಕತೆ" ಅಜ್ಜಿ ನುಡಿದಳು.

"ಹೋಗಲಿ ಬಿಡಿ ಅಮ್ಮ. ಅವರವರು ಪಡೆದುಕೊಂಡು ಬಂದದ್ದು.... ನಿಮ್ಮ ಮೊಮ್ಮಕ್ಕಳು ಎಷ್ಟು ಚೆನ್ನಾಗಿ ಹಾಡ್ತಾರೆ.... ನೀವು ಹೆಮ್ಮೆ ಪಡಬೇಕು...." ವನಜ ನುಡಿದಳು.

"ನಿನ್ನಷ್ಟು ದೊಡ್ಡ ಬುದ್ಧಿ, ನನಗಿಲ್ಲ ವನಜಾ...... ಆ ಜಾನಕೀನ ನಾನು ಸೊಸೆ ಅಂತ ಒಪ್ಪಿಕೊಂಡಿಲ್ಲ. ಇವುಗಳು ಹೇಗೆ ಮೊಮ್ಮಕ್ಕಳು?"

"ನೀವು ಒಪ್ಪಲಿ ಬಿಡಲಿ..... ರಕ್ತ ಸಂಬಂಧ ತಪ್ಪುತ್ತೆ? ನಾನು ಒಂದು ತೀರ್ಮಾನಕ್ಕೆ ಬಂದಿದೀನಿ....."

ಅಷ್ಟರಲ್ಲಿ ಅಮ್ಮಾ..... ಅಮ್ಮಾ..... ಎನ್ನುತ್ತಾ ಆಚಿಯ ಮಕ್ಕಳು ಓಡಿ ಬಂದವು. "ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ರಿ? ಗಂಡನನ್ನು ಕೇಳಿದಳು.

"ಊರಾಚೆ ಒಂದು ಎಗ್ಸಿಬಿಷನ್ ನಡೀತಿತ್ತು. ಕರೆದುಕೊಂಡು ಹೋಗಿದ್ದೆ. ಹೊತ್ತಾಗಿ ಹೋಯ್ತು....."

"ಸಧ್ಯ ಊಟದ ಹೊತ್ತಿಗೆ ಬಂದರಲ್ಲ" ಶಾಂತ ಸಮಾಧಾನದ ಉಸಿರನ್ನು ಬಿಟ್ಟಳು.

"ಸುಮಂತನ್ನ ಅವನ ಹೆಂಡತೀನ ಮಾತನಾಡಿಸಿ, ಶುಭಕೋರಿ ಬರ್ತೀನಿ." "ನಾನೂ ಬಂದೆ...." ಎನ್ನುತ್ತಾ ಆಚಿ ಗಂಡನ ಹಿಂದೆ ನಡೆದಳು.

"ಏನಪ್ಪಾ ಸುಮಂತ.... ಇವರಿಗೆ ನನ್ನ ಪರಿಚಯ ಮಾಡಿ ಕೊಡುಲ್ವೇ?"

"ಓ.... ಖಂಡಿತಾ..... ಇವರು ನಮ್ಮ ಭಾವ ಶೇಷಾದ್ರಿ ಶರ್ಮ ಅಂತ" ತಾರಾ ಸುಮ್ಮನೇ ನಕ್ಕಳು.

"ಹನಿಮೂನ್‌ಗೆ ಎಲ್ಲಿ ಹೋಗ್ತಿದೀರಿ..... ಆಮೇಲೆ ನಮ್ಮೂರಿಗೆ ಬನ್ನಿ."

"ಹನಿಮೂನ್‌ಗೆ ನಮ್ಮ ಹಳ್ಳೀಗೆ ಹೋಗ್ತಾನೆ" ಸುಮಂತನ ಬೆನ್ನ ಮೇಲೆ ಕೈ ಇಟ್ಟು ಸತೀಶ ನುಡಿದ. ತಕ್ಷಣ ಸತೀಶನ ಪತ್ನಿ ನುಡಿದಳು.

"ಬೇಡಿ.... ಹಳ್ಳಿಗೆ ಮಾತ್ರ ಹೋಗಬೇಡಿ....." ಎಲ್ಲರೂ ನಕ್ಕರು.

ಆ ರಾತ್ರಿ, ಮದುಮಕ್ಕಳಿಗೆ ಮಲಗಲು, ತಾರಾಳ ಮನೆಯಲ್ಲಿನ ಕೋಣೆಯೊಂದನ್ನು ಸಜ್ಜುಗೊಳಿಸಿದ್ದರು.... ಕುತೂಹಲದ ಹೆಂಗಳೆಯರೆಲ್ಲಾ... ಕೋಣೆಯ ಅಲಂಕಾರ ವನ್ನು ನೋಡಿ ಕಣ್ಣರಳಿಸಿದ್ದರು. ಮದುಮಕ್ಕಳಿಗೆ ಆರತಿ ಎತ್ತಿ, ಶುಭಕೋರಿ, ಹೊರ ಬಂದಿದ್ದರು. ಸುಮಂತನಿಗೆ ತುಂಬಾ ಮುಜುಗರವೆನಿಸಿತ್ತು.

"ತಾರಾ.... ಇಷ್ಟೆಲ್ಲಾ ಅದ್ದೂರಿ ಬೇಕಿತ್ತಾ?..... ಸರಳವಾಗಿ, ದೇವಸ್ಥಾನದಲ್ಲಿ ಮದುವೆಯಾಗಿದ್ದರೂ ಚೆನ್ನಾಗಿತ್ತು."

"ಜೀವನದಲ್ಲಿ ಒಮ್ಮೆ ಮಾತ್ರ ಮದುವೆಯಾಗೋದು... ಸಿಹಿ ನೆನಪುಗಳಿಗೆ ಇವೆಲ್ಲ ಸಹಕಾರಿಯಾಗುತ್ತೆ....."

"ನಿನಗೆ ಇದೆಲ್ಲಾ ಆಸೇನ......"

"ನನಗೇನೂ ಗೊತ್ತಿರಲಿಲ್ಲ. ಇದೆಲ್ಲ ಅಮ್ಮನ ಆಸೆ. ಬಹುಶಃ ನಿಮ್ಮ ತಾಯೀನ ಮೆಚ್ಚಿಸುಕ್ಕೆ ಮಾಡಿರಬಹುದು."

ಅಮ್ಮನಿಗೆ ನಿಜ ವಿಷಯ ಗೊತ್ತಾದರೆ, ಇದೆಲ್ಲಾ ಸಹಾಯಕ್ಕೆ ಬರುಲ್ಲ. ಅಂತ ತನ್ನಲ್ಲೇ ಅಂದುಕೊಂಡು, "ನಾನೇನಾದ್ರೂ ಇನ್ನೊಂದು ಮದುವೆಯಾದರೆ, ಹೀಗೆ ಮಾತ್ರ ಖರ್ಚು ಮಾಡಿಸುಲ್ಲ. ರಿಜಿಸ್ಟರ್ಡ್ ಮದುವೆಯಾಗ್ತೀನಿ."

"ಏನಂದ್ರಿ? ಇನ್ನೊಂದು ಮದುವೆ ಆಗ್ತೀರಾ? ......ನಿಮ್ಮ ಮಾವನ ಕತೆ ಮರೆತು ಬಿಟ್ರಾ? .........ಆದರೆ ನಾನು ಮಾತ್ರ ನಿಮ್ಮ ಅತ್ತೆ ತರಹ ಒಂಟಿ ಜೀವನ ನಡೆಸುಲ್ಲ. ಡೈವೋರ್ಸ್ ತಗೊಂಡು ಬೇರೆ ಮದುವೆಯಾಗ್ತೀನಿ."

"ಏನಂದೆ? ಈ ರಾತ್ರಿ ಇಂಥ ಮಾತನಾಡಬಹುದಾ?"

"ನೀವು ಮಾತ್ರ ಆಡಬಹುದಾ? .......ನಮಗೇನು ಬೇರೆ ಮಾತೇ ಇಲ್ಲ ಅಂತ ಅನ್ನಿಸ್ತಿದೆ ಅಲ್ವಾ?"

"ಪ್ರೀತಿಸಿ ಮದುವೆ ಆದರೆ ಹೀಗೇನೇ.... ಮೊದಲೇ ಎಲ್ಲಾ ಮುಗಿದು ಹೋಗಿರುತ್ತೆ."

"ಏನು ಮುಗಿದಿರೋದು....? ಈಗಿನ್ನು ಪ್ರಾರಂಭವಾಗ್ತಿದೆ.... ನಮ್ಮಪ್ಪ, ನಮ್ಮಮ್ಮನ್ನ ತುಂಬಾ ಚೆನ್ನಾಗಿಟ್ಟುಕೊಂಡಿದ್ದರಂತೆ. ನಮ್ಮಪ್ಪ ಒಂಥರಾ ರಸಿಕರು. ನನಗೂ ಹಾಗೇ ಇರಬೇಕೂಂತ ಆಸೆ....."

"ನನಗೆ ನಿಮ್ಮಮ್ಮನ ಹಾಗೆ ಇರೋಕೆ ಇಷ್ಟವಿಲ್ಲಪ್ಪಾ..... ಶಾಂತಮ್ಮ ಅಂತಂದ್ರೆ.... ಅಶಾಂತಮ್ಮ ಅಂತ ರಾಧಮ್ಮನ ಮನೇಲಿ ಎಲ್ರೂ ಆಡ್ಕೋತಿದ್ರು........"

"ಅಮ್ಮ ಅಷ್ಟು ಕೆಟ್ಟೋಳಲ್ಲ ತಾರಾ......"

"ಮತ್ತೆ ನಮ್ಮಮ್ಮನ್ನ ಕೆಟ್ಟೋರು ಅಂತ ಯಾಕೆ ಅನ್ನಬೇಕಾಗಿತ್ತು ಅವರು?"

"ನಿನ್ನ ತಾಯಿನಲ್ಲ ಅಮ್ಮ ಅಂದಿದ್ದು.... ಆ ಸುಜಾತಾನೇ ಬೇರೆ."

"ಅತ್ತೆ ಅಂತ ಅನ್ನಿ..... ಸುಜಾತ ಅಂತ ಅನ್ನಬೇಡಿ."

"ನೀನೂ ಅಷ್ಟೇ.... ಶಾಂತಮ್ಮ ಅಂತ ಹೆಸರು ಹಿಡಿದು ಕರೀಬಾರದು. ಅತ್ತೆಯವರೇ ಅಂತ ಮರ್ಯಾದೆಯಾಗಿ ಕರೆಯಬೇಕು...." ಕಿಲಕಿಲನೆ ನಕ್ಕಳು.

"ನಮ್ಮಮ್ಮ ಏನು ಹೇಳಿದಾಳೆ ಗೊತ್ತಾ? ಇನ್ನು ಮೇಲೆ ಅವರೇ ನಿನ್ನ ತಾಯಿ...... ಅಮ್ಮ ಅಂತ ಕರೆಯಬೇಕು ಅಂತ. ನಾನು ಹಾಗೇ ಕರೀತೀನಿ." "ವೆರಿಗುಡ್" ಈಗ ಮಾತು ಸಾಕು...... ಬೆಳಿಗ್ಗೆ ಮಾತನಾಡೋಣ. ನನಗಂತೂ ತುಂಬಾ ಸುಸ್ತಾಗಿದೆ. ಅದೆಷ್ಟು ಶಾಸ್ತ್ರಗಳು..... ಒಂದರ ನಂತರ ಇನ್ನೊಂದು..... ಮದುವೆ ಅಂದರೆ ಇಷ್ಟು ಸುಸ್ತಾಗುತ್ತೆ ಅಂದ ನನಗೆ ಗೊತ್ತಿರಲಿಲ್ಲಪ್ಪಾ...." ಆಕಳಿಸಿದ.

"ಗುಡ್‌ನೈಟ್ ಸುಮಂತ್" ಎಂದು ಹೇಳಿ ಪಕ್ಕದಲ್ಲಿ ಮಲಗಿದವಳನ್ನು ತನ್ನೆಡೆಗೆ ಎಳೆದುಕೊಂಡು, "ಗುಡ್‌ನೈಟ್ ಮೈ ಡಿಯರ್......" ಎಂದ ಅವಳ ಮುಖದ ಬಳಿಗೆ ಸಾರಿ......! ಅವಳು ಕೊಸರಿಕೊಂಡು ದೂರ ಸರಿಯಲಿಲ್ಲ.

ಬೆಳಗಾಯಿತು..... ದಿಬ್ಬಣ ವಾಪಸ್ಸು ಹೊರಡುವ ಸಮಯ ಬಂದಿತ್ತು. ಔತಣದ ಊಟ. ಭಾರಿಯಾಗಿತ್ತು. ಉಡುಗೊರೆಯ ಹೊರೆ ಜಾಸ್ತಿಯಾಗಿತ್ತು. ಮಗಳಿಗೆ ಕೊಡುವ ವಸ್ತುಗಳನ್ನೆಲ್ಲಾ ಕಟ್ಟಿಟ್ಟಿದ್ದರು. "ನಾವುಗಳು ಇನ್ನು ಹೊರಡ್ತೀವಿ ಅಪ್ಪಣೆ ಕೊಡಬೇಕು...." ರಾಮಸ್ವಾಮಿ ಬೀಗರಲ್ಲಿ ವಿನಂತಿಸಿಕೊಂಡಿದ್ದ. ಎಲ್ಲರೂ ಬಸ್ಸನ್ನು ಹತ್ತಿದ್ದರು. ಸೋಬಲಕ್ಕಿಯನ್ನು ಮಡಿಲು ತುಂಬಿ, ಮಗಳನ್ನು ಬೀಳ್ಕೊಡುವಾಗ ಎಲ್ಲರ ಕಣ್ಣು ಮಂಜಾಗಿದ್ದವು. ತಾರಾ ತಲೆತಗ್ಗಿಸಿ ಕಣ್ಣೀರನ್ನು ಒರೆಸಿಕೊಂಡಳು. ಆಚಿ ಅವಳ ಬಳಿಗೆ ಬಂದು ನಿಂತಳು. ಸುಮಂತನೂ ಪೆಚ್ಚಾಗಿದ್ದ. ಅಕ್ಕನೂ ಮದುವೆಯಾಗಿ

ಹೊರಟಾಗ, ಹೀಗೇ ಅತ್ತಿದ್ದಳಲ್ಲವೇ..... ತವರು ಮನೆಯನ್ನು ಬಿಟ್ಟು ಬರುವಾಗ ಎಲ್ಲಾ ಹೆಣ್ಣು ಮಕ್ಕಳ ಸ್ಥಿತಿ ಒಂದೇ...... ಕತ್ತೆತ್ತಿ ತಾಯಿಯ ಕಡೆ ನೋಡಿದ. ತಾಯಿಯೂ ಅಳುತ್ತಿದ್ದಾಳೆ. ಅರೇ! ಏನು ಆಶ್ಚರ್ಯ...?

ಎಲ್ಲರೂ ಎಲ್ಲರಿಗೂ ಹೋಗಿ ಬರ್ತೀವಿ ಎಂದು ಹೇಳಿಯಾಗಿತ್ತು. ಹಿಂದಿನಿಂದ ಯಾರೋ ಶಾಂತಮ್ಮ ಅಂತ ಕರೆದಂತಾಯಿತು. ಬೀಗಿತ್ತಿ.....!

"ಒಂದ್ನಿಮಿಷ ಬರ್ತೀರಾ...." ಕರೆದಳು.

"ಎಲ್ಲಾ ಆಯ್ತಲ್ಲಮ್ಮಾ.... ಇನ್ನೇನು ಬಾಕಿ ಇದೆ? ಎಂದು ಔದಾರ್ಯದ ಮಾತುಗಳನ್ನಾಡುತ್ತಾ ಅವಳ ಹಿಂದೆ ನಡೆದಳು. ರೂಮಿನೊಳಗೆ, ಸುಜಾತ ಬಿಕ್ಕುತ್ತಾ ಶಾಂತಳ ಕಾಲುಗಳನ್ನು ಹಿಡಿದಳು. ಸಂಕೋಚವೆನಿಸಿದರೂ, ಖುಷಿಯಾಗಿತ್ತು.

"ನಿಮ್ಮ ಮಗಳನ್ನು ನಾನು ಚೆನ್ನಾಗಿ ನೋಡಿಕೊಳ್ತೇನೆ.... ಅವಳೂ ನನ್ನ ಮಗಳಿದ್ದ ಹಾಗೇ.... ಏಳಿ.... ಕಾಲು ಹಿಡಿಯುವುದೇಕೆ?"

"ಅತ್ತೇ ನನ್ನನ್ನು ಕ್ಷಮಿಸಿ ಬಿಡಿ....."

"ಅತ್ತೇ....." ಎನ್ನುತ್ತಾ ಅತ್ತಿತ್ತ ನೋಡಿದಳು.

"ನನ್ನ ಗುರುತು ನಿಮಗೆ ಸಿಗಲಿಲ್ಲ..... ಆದರೆ ನಾನು ಯಾರೂಂತ ನಿಮಗೆ ನಾನು ತಿಳಿಸಲೇ ಬೇಕು...." ಎನ್ನುತ್ತಾ ತಾನು ರಾಮಸ್ವಾಮಿಯ ಅಕ್ಕನ ಮಗಳು ಎನ್ನುವುದನ್ನು ತಿಳಿಸಿ, ಕಾಲುಗಳನ್ನು ಬಿಗಿಯಾಗಿ ಹಿಡಿದಳು. ಶಾಂತ ಕಾಲುಗಳನ್ನು ಕೊಸರಿಕೊಂಡು ಹಿಂದೆ ಸರಿದಳು.

"ನೀನು ಸುಜಾತಾನಾ.....? ಅವತ್ತೇ ಏಕೆ ಹೇಳಲಿಲ್ಲ?" ದನಿ ಗಡುಸಾಗಿತ್ತು.

"ನಾನು ಹೇಳಬೇಕೂಂತ ಇದ್ದೆ..... ಆದರೆ ಈ ಬೆಂಕಿ....."

"ಬೆಂಕಿಯ ಆಕಸ್ಮಿಕದಿಂದ ನಿನಗೆ ಅನುಕೂಲವೇ ಆಯ್ತಲ್ಲಾ.... ಆದರೆ ನಿನಗೆಷ್ಟು ಧೈರ್ಯ. ನನಗೆ ಮೋಸ ಮಾಡಿದ್ಯಲ್ಲ....?" ದಬಾಯಿಸಿದಳು.

"ಅತ್ತೇ ನನ್ನನ್ನು ಕ್ಷಮಿಸಿ...... ನಿಮಗೆ ತಿಳಿಸುವುದೇ ಬೇಡ ಅಂತ ಎಲ್ಲರೂ ಹೇಳಿದ್ರೂ ನನ್ನ ಮನಸ್ಸು ತಡೆಯಲಿಲ್ಲ" ಕೈ ಮುಗಿದು ಕೇಳಿಕೊಂಡಳು.

"ಅಂದ್ರೆ..... ನೀನು ಸುಜಾತಾ ಅಂತ ಎಲ್ಲರಿಗೂ ಗೊತ್ತಾ? ಈ ಹೆಸರನ್ನು ಕೇಳಿದರೂ ನನಗೇಕೆ ಅನುಮಾನ ಬರಲಿಲ್ಲ..... ಯಾವ ಸುಜಾತಾನೋ ಅಂತ ಅಂದ್ಕೊಂಡೆ."

"ನೀವು ದೊಡ್ಡವರು. ನಿಮಗೆ ಕಷ್ಟ ಸುಖದ ಅರಿವಿದೆ. ನಾವು ಎಷ್ಟೇ ಅದ್ದೂರಿಯಾಗಿ ಮದುವೆ ಮಾಡಿದರೂ, ಇದೊಂದು ಕೊರಗು ನನ್ನಲ್ಲಿತ್ತು. ಈಗ ನನ್ನ ಹೃದಯ ಹಗುರವಾಯಿತು" ಸಮಾಧಾನದಿಂದ ಅತ್ತಳು.

"ನೀನೇನೋ ನಿನ್ನ ಹೃದಯ ಹಗುರ ಮಾಡಿಕೊಂಡೆ.... ಈಗ ನನ್ನ ಹೃದಯ ಭಾರವಾಯಿತಲ್ಲ.... ನನಗೆ ಅವಮಾನ ಮಾಡಬೇಕೂಂತ ನೀವೆಲ್ಲಾ ಕಾಯ್ತಾ ಇದ್ರಾ?"

"ಛೆ.... ಛೆ.... ನಿಮಗೆ ಅವಮಾನ ಮಾಡಬೇಕೂಂತ ಕಾಯ್ತಾ ಇದ್ದೋರು ನಿಮ್ಮ ಅಣ್ಣಾ..... ಅವರಿಗೆ ನಾನು ಸುಮ್ಮನಿರುವಂತೆ ಕೇಳಿಕೊಂಡೆ.... ಎಲ್ಲರೆದುರಿಗೆ ನಿಮ್ಮ ಮರ್ಯಾದೆ ಕಳೆಯುವ ಸಣ್ಣ ಬುದ್ಧಿ ನನಗಿಲ್ಲ. ಅದಕ್ಕೇ ಯಾರಿಗೂ ತಿಳಿಯದಂತೆ ನಿಮ್ಮ ಕಾಲುಗಳನ್ನು ಹಿಡಿದೆ."

"ತಪ್ಪು ಎಲ್ಲರದೂ ಆಗಿರುವಾಗ, ನಿನ್ನೊಬ್ಬಳನ್ನೇ ಅಂದು ಏನು ಪ್ರಯೋಜನ? ನನ್ನನ್ನು ನಾನು ತುಂಬಾ ಜಾಣೆ ಅಂತ ತಿಳಿದುಕೊಂಡಿದ್ದೆ. ಈಗ ನಾನೆಷ್ಟು ದಡ್ಡಿ ಅಂತ

ತಿಳೀತಲ್ಲ.... ಮನೆಯವರೇ ಶತ್ರುಗಳಾದರು" ಅವಳ ದನಿ ನಡುಗಿತು.

"ಈ ನೆವದಲ್ಲಿ ನಮ್ಮ ಸಂಬಂಧ ಮತ್ತೆ ಬೆಳೀತು.... ನನಗೆ ಅದೇ ಸಂತೋಷ....."

"ಆಯ್ತಲ್ಲ. ಈ ಬೀಗರ ಸಂಬಂಧವೇ ಇರಲಿ. ಆ ಹಳೆಯ ಸಂಬಂಧವನ್ನು ನಾನೂ ಯಾರಿಗೂ ಹೇಳುಲ್ಲ. ನೀನೂ ಹೇಳಕೂಡದು. ಬಹುಶಃ ಅವರುಗಳು ಯಾರೂ ನನಗೆ ಹೇಳುವುದಿಲ್ಲ. ಹಾಗೇ ಹೆದರಿಕೊಂಡು ಇರಲಿ. ಸಮಯ ಬಂದಾಗ ನನಗೆ ಒಂದು ಅಸ್ತ್ರವಾಗುತ್ತೆ.... ನಾನಿನ್ನು ಬರ್ತೀನಿ" ಬಿರಬಿರನೆ ಹೊರಟಳು.

"ಇದರಲ್ಲಿ ತಾರಾಳ ತಪ್ಪೇನೂ ಇಲ್ಲ....." ಕೈ ಮುಗಿದಳು. ಮನ ಹತ್ತಿ ಉರಿಯುತ್ತಿತ್ತು. "ತಪ್ಪೇಕೆ ಇಲ್ಲ. ಅವರಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸಿದ್ದೇ ತಪ್ಪು. ಆದರೆ ಅದಕ್ಕೆ ನಾನೇ ಕಾರಣ.... ನನ್ನ ರೋಷದ ಮಾತೇ ಇದಕ್ಕೆ ಕಾರಣ.... ಹೆಸರಿಗೆ ತಕ್ಕ ಹಾಗೆ ಶಾಂತವಾಗಿದ್ದರೆ, ಈ ದಿನ ಹೀಗೆ ಬರುತ್ತಿರಲಿಲ್ಲ ಎಂದುಕೊಂಡಳು. ಬಸ್ಸನ್ನು ಹತ್ತಿ ತನ್ನ ಸೀಟಿನಲ್ಲಿ ಕುಳಿತವಳನ್ನೇ ಎಲ್ಲರೂ ಗಮನಿಸಿದರು. ಅಗತ್ಯಕ್ಕಿಂತ ಹೆಚ್ಚಿನ ಶಾಂತತೆ ಅವಳ ಮುಖದಲ್ಲಿ ಕಂಡು ಬಂದಿತ್ತು. ಆದರೆ ಮನದೊಳಗೆ ಹತ್ತಿ ಉರಿಯುತ್ತಿದ್ದ ದಾವಾನಿಲದ ಬಿಸಿ ಯಾರಿಗೂ ತಟ್ಟಲಿಲ್ಲ.

"ಅಂತೂ ಎಲ್ಲರೂ ಸೇರಿ ನನಗೆ ತಿಳಿಯದಂತೆ ಒಂದು ನಾಟಕವನ್ನು ಆಡಿ ಮುಗಿಸಿ, ಅಂಕದ ಘರದೆಯನ್ನು ಜಾರಿಸಿ ಬಿಟ್ಟರು. ಇನ್ನೇನು ಉಳಿದಿದೆ.? ಅಲ್ಲಾ, ನನಗೆ ಯಾವ ಮಂಕುತನ ಕವಿದಿತ್ತು? ಒಂದು ಸಣ್ಣ ಸುಳಿವೂ ಸಿಗಲಿಲ್ಲ. ನಾನೇ ಜಾಣೆ ಅಂತ ಅಂದುಕೊಂಡಿದ್ದೆ. ನನ್ನ ಜಾಣತನ ನನಗೇ ಕೈ ಕೊಟ್ಟಿತಲ್ಲ." ಶಾಂತ ಬಿಸಿ ಉಸಿರನ್ನು ಬಿಟ್ಟು "ಉಸ್" ಎಂದಳು.

ಯಾರೂ ಇವಳ ಕಡೆ ತಿರುಗಿ ನೋಡಿರಲಿಲ್ಲ. ಅವರವರ ಮಾತುಕತೆಗಳಲ್ಲಿ ತಲ್ಲೀನರಾಗಿದ್ದರು. ಸುಮಂತ ತನ್ನ ಹೆಂಡತಿಯೊಡನೆ ಸರಸ ಸಂಭಾಷಣೆಯಲ್ಲಿ ತೊಡಗಿತ್ತು. ಹೊಟ್ಟೆಯೊಳಗೆ ಕಲಕಿದಂತಾಗಿತ್ತು. ಆಚಿ ಅವಳ ಗಂಡ ಮಕ್ಕಳೊಡನೆ ಅವಳ ಪ್ರಪಂಚದೊಳಗೆ ಇದ್ದಳು. ರಾಮಸ್ವಾಮಿ ನಿಶ್ಚಿಂತೆಯಾಗಿ ನಿದ್ದೆ ಹೋಗಿದ್ದ. ವನಜ ಕಿಟಕಿಯಿಂದಾಚೆ ದೃಷ್ಟಿ ಹರಿಸಿದ್ದರೂ, ಏನೋ ನ್ಯೂನತೆ ಅವಳ ಮುಖದಲ್ಲಿ ಗೋಚರವಾಗಿತ್ತು. ಇವಳೊಬ್ಬಳು ದುರಾದೃಷ್ಟದ ಹೆಂಗಸು ಗಂಡನಿದ್ದೂ ಸನ್ಯಾಸಿಯಂತೆ ಆದರೂ ಇವಳಿಗಿಂತ ದೊಡ್ಡ ಗುಣ ನನಗಿಲ್ಲ. ಹಾಗಾದರೆ ಇವರೆಲ್ಲರೂ ಗುಣವಂತರು...! ನಾನು ಸೊನ್ನೆ?.

ಆದರೇನು, ನಾನು ಮನಸ್ಸು ಮಾಡಿದರೆ ಎಲ್ಲರನ್ನೂ ತಲೆಕೆಳಗೆ ಮಾಡಬಲ್ಲೆ. ಆದರೆ ನನಗೆ ಈಗ ಸಹಾಯಕರ್‍ಯಾರೂ ಇಲ್ಲ. ಮತ್ತೆ ನಾನೇ ಕೆಟ್ಟವಳಾಗುವುದು ಖಂಡಿತಾ. ಹೋಗಲಿ, ಏನಾದರೂ ಆಗಲಿ. ಅಂತರಪಟ ಸರಿದು, ಇವರಿಬ್ಬರ ತಲೆಯಮೇಲೆ ಅಕ್ಕಿ ಕಾಳು ಬಿದ್ದಾಯಿತು. ಇದೇ ವಿಧಿಯ ಬರಹವೇನೋ. ಇದನ್ನು ತಪ್ಪಿಸಲು ನಾನ್ಯಾರು? ಎಂದುಕೊಂಡು ರಸ್ತೆಯ ಕಡೆ ಕಣ್ಣುಗಳನ್ನು ಹಾಯಿಸಿದಳು. ವೇಗವಾಗಿ ಚಲಿಸುತ್ತಿದ್ದ ಬಸ್ಸಿನ ಚಕ್ರಗಳು ದಾರಿಯನ್ನು ನುಂಗುತ್ತಿದ್ದವು.

* * * * *
* * *
*



ಪದ್ಮಾ ಶ್ರೀಧರ್

ತಾನು, ಹೊತ್ತು ಹೆತ್ತು, ಸಾಕಿ ಸಲಹಿದ ತನ್ನ ಮಗನ ಮೇಲೆ, ಕೇವಲ ತನ್ನದೇ ಅಧಿಕಾರ ನಡೆಯಬೇಕೆಂಬ ಆಸೆ ತಾಯಿ ಶಾಂತಾಳಿಗೆ. ಆದರೆ ಮದುವೆಯ ವಿಷಯ ತನ್ನ ಸ್ವಂತ ವಿಷಯ ಎಂಬ ಬಲವಾದ ವಾದ ಮಗ ಸುಮಂತ ನದು. ಮಗನ ಅನಿಸಿಕೆ ಸರಿ ಎನ್ನುವ ತಂದೆ ರಾಮಸ್ವಾಮಿ, ಮಗನ ಪರನಿಂತಾಗ, ಮನೆಯಲ್ಲಿ ವಾದ ವಿವಾದ ವಾಗ್ವಾದಗಳು ಉಂಟಾಗುತ್ತವೆ. ತಾಯಿ ತನ್ನಮಾತಿಗೆ ಒಪ್ಪುವುದಿಲ್ಲ ಅಂತೆನಿಸಿದಾಗ, ತಾಯಿಯ ಹೊರತು, ಉಳಿದವರನ್ನು ಸೇರಿಸಿಕೊಂಡು, ಆಕೆಗೆ ತಿಳಿಯದಂತೆ ಒಂದು ಲಘು ನಾಟಕವನ್ನಾಡಿ ಗೆಲ್ಲುತ್ತಾನೆ. ಮಾತು ಮಾತಿನ ಸುಳಿಯಲ್ಲಿ ಸಿಕ್ಕಿ ಬಿದ್ದ ಶಾಂತ ತನಗೇ ಅರಿವಿಲ್ಲದಂತೆ, ಮಗನ ಆಯ್ಕೆಯನ್ನು ಒಪ್ಪಿಕೊಳ್ಳುತ್ತಾಳೆ. ಅಂತರ ಪಟ ಸರಿಯುತ್ತದೆ. ವ್ವಾಹ ನೆರವೇರುತ್ತದೆ.

ಆದರೆ ಕೊನೆಯಲ್ಲಿ ನಿಜ ತಿಳಿದಾಗ, ನಿರಾಸೆಯಿಂದ ತಣ್ಣಗಾಗುತ್ತಾಳೆ. ಮೋಡದಂತೆ ಕವಿದ ತನ್ನ ಮಂಕುತನಕ್ಕೆ ನೊಂದುಕೊಂಡು ಸುಮ್ಮನಾಗುತ್ತಾಳೆ. ಈ ತಾಯಿ ಮಗನ ಈ ಬಂಧನದ ಬಿಗುವೇ ಈ ಕಾದಂಬರಿಯ ಉದ್ದ ಅಗಲ. ಅಮತರ ಪಟ ಸರಿಯುವ ಮೊದಲಿಗೆ ನಡೆಯುವಷ್ಟೇ ನಾಟಕ. ಅಂಕದ ಪರದೆ ಜಾರಿದ ಮೇಲೆ ನಾಟಕವೇನು ಉಳಿದಿದೆ?